# ಮೈತ್ರ

(ಗಾಯತ್ರೀ ಮಂತ್ರದ ಕುರಿತು ನೂರು ಚಿಂತನೆಗಳು)



ಧ್ಯೇಯ : ಸದಾ ಸವಿತೃಮಂಡಲಮಧ್ಯವರ್ತೀ
ನಾರಾಯಣಃ

**ತತ್ವವಾದ ಸಂಶೋಧನ ಸಂಸತ್**
ಪಲಿಮಾರು ಮಠ
ಉಡುಪಿ

# ಮೈತ್ರ

## ಗಾಯತ್ರೀಮಂತ್ರದ ಕುರಿತು ನೂರು ಚಿಂತನೆಗಳು

ನಿರ್ದೇಶಕರು

**ಬನ್ನಂಜೆ ಗೋವಿಂದಾಚಾರ್ಯ**

ಸಂಪಾದಕರು

**ಸಗ್ರಿ ರಾಘವೇಂದ್ರ ಉಪಾಧ್ಯಾಯ**

**ಉಡುಪಿ ರಾಮನಾಥ ಆಚಾರ್ಯ**

ಪ್ರಕಾಶನ

**ತತ್ತ್ವವಾದ ಸಂಶೋಧನ ಸಂಸತ್**

ಶ್ರೀಪಲಿಮಾರು ಮಠ, ಉಡುಪಿ.

# ನಿರ್ದೇಶಕರ ನುಡಿ

ಪ್ರಾಚೀನ ಗ್ರಂಥಗಳ ಶುದ್ಧಪಾಠವನ್ನು ನಾವು ನಿರ್ಧರಿಸುವಲ್ಲಿ ನಮಗೆ ಮುಖ್ಯ ಸಹಕಾರಿಗಳು ತಾಡವಾಲೆ ಹಸ್ತಪ್ರತಿಗಳು. ಅಂಥ ಹಸ್ತಪ್ರತಿಗಳಲ್ಲು ಪಾಠವ್ಯತ್ಯಾಸಗಳಿದ್ದಾಗ ಅತ್ಯಂತ ಶುದ್ಧಪ್ರತಿಯ ತಾಡವಾಲೆ ಮತ್ತು ಅತ್ಯಂತ ಪ್ರಾಚೀನ ತಾಡವಾಲೆ ನಮಗೆ ನಿರ್ಣಾಯಕವಾಗುತ್ತದೆ. ಈ ನಿಟ್ಟಿನಲ್ಲಿ ಶ್ರೀಪಲಿಮಾರುಮಠದ ಕೊಡುಗೆ ಅನನ್ಯವಾದದ್ದು.

ಆಚಾರ್ಯ ಮಧ್ವರ ಕೃತಿಗಳ ಅತ್ಯಂತ ಪ್ರಾಚೀನವಾದ ಮತ್ತು ಅತ್ಯಂತ ಶುದ್ಧವಾದ ಅಧಿಕೃತ ಹಸ್ತಪ್ರತಿಯನ್ನು ಉಳಿಸಿಕೊಂಡು ಬಂದ ಏಕಮಾತ್ರ ಸಂಸ್ಥೆ ಶ್ರೀಪಲಿಮಾರುಮಠ. ಏಳು ಶತಮಾನಗಳ ಹಿಂದಿನ ಒಂದು ತಾಡವಾಲೆಯ ಹಸ್ತಪ್ರತಿಯನ್ನು ನೋಡಬೇಕೆಂದರೆ ನಾವು ಪಲಿಮಾರು ಮಠಕ್ಕೆ ಬರಬೇಕು. ಇಡಿಯ ದೇಶಕ್ಕೆಯೆ ಇದೊಂದು ಅಪೂರ್ವ ಸೊತ್ತು.

ಇಂಥ ಅನೇಕ ಅಪೂರ್ವಗ್ರಂಥಗಳ ಶುದ್ಧಪಾಠದ ಪರಂಪರೆಯನ್ನು ಉಳಿಸಿಕೊಂಡು ಬಂದ ಕೀರ್ತಿ ಈ ಮಠಕ್ಕೆ ಸಲ್ಲುತ್ತದೆ. ಹಾಗಾಗಿ ಶ್ರೀಮಠ ನಿಜವಾದ ಸಂಶೋಧನಪ್ರಜ್ಞೆ ಉಳ್ಳವರಿಗೆ ಒಂದು ಪುಣ್ಯಧಾಮ; ಚಿನ್ನದ ಗಣಿ.

ಇಂಥ ತಾಣದಲ್ಲಿ ಸಂಶೋಧನ ಸಂಸ್ಥೆ ಇರದೆ ಇನ್ನೆಲ್ಲಿ ಇರಬೇಕು? ಶ್ರೀಪಾದರಿಗು– ಹಿರಿಯರಿಗೆ ಮತ್ತು ಕಿರಿಯರಿಗೆ– ಇಬ್ಬರಿಗೂ ಇಲ್ಲೊಂದು ಸಂಶೋಧನ ಸಂಸ್ಥೆಯನ್ನು ಕಟ್ಟಿ ಬೆಳೆಸುವ ಅದಮ್ಯವಾದ ಆಸೆ. ಅವರ ಈ ಕನಸಿನ ಸಾಕ್ಷಾತ್ಕಾರವೇ 'ತತ್ವವಾದ ಸಂಶೋಧನ ಸಂಸತ್'.

ಅಪೂರ್ವವಾದ ಒಂದು ಗ್ರಂಥಾಲಯವನ್ನು ಕಟ್ಟಿ ಬೆಳೆಸಬೇಕು; ಅಪೂರ್ವವಾದ ಸಂಶೋಧನ ಕಾರ್ಯ ನಡೆಯಬೇಕು; ಅಪೂರ್ವ ಪುಸ್ತಕಗಳು ಪ್ರಕಟಗೊಂಡು ಜನತೆಯ ಕೈಸೇರಬೇಕು. ಇದು ಈ ಸಂಸ್ಥೆಯ 'ಹುಟ್ಟು ಬಯಕೆ'.

ಅದಕ್ಕಾಗಿ ರಾಮನಾಥಾಚಾರ್ಯನಂಥ ತರುಣ ವಿದ್ವಾಂಸರು ಕಟಿ ಬಿಗಿದು ನಿಂತಿದ್ದಾರೆ. ತ್ರಿವಿಕ್ರಮಪಂಡಿತಾಚಾರ್ಯರ ಸೋದರರಾದ

*ಶಂಕರ ಪಂಡಿತರು ರಚಿಸಿದ ಅನುವ್ಯಾಖ್ಯಾನಸಂಬಂಧದೀಪಿಕಾ ಮತ್ತು ಅನುವ್ಯಾಖ್ಯಾನ-ನ್ಯಾಯವಿವರಣಸಂಬಂಧದೀಪಿಕಾ, ನಾರಾಯಣ ಪಂಡಿತಾಚಾರ್ಯರ ಮಕ್ಕಳು ವಾಮನಪಂಡಿತಾಚಾರ್ಯರು ಬರೆದ ಉಪನಿಷದ್ಭಾಷ್ಯ ಟೀಕೆಗಳು (ಸದ್ಯಕ್ಕೆ ಆರು ಟೀಕೆಗಳು ಉಪಲಬ್ಧವಿವೆ: ಯಾಜ್ಞೀಯಮಂತ್ರೋಪನಿಷತ್, ತಲವಕಾರ, ಕಾಠಕ, ಷಟ್ಪ್ರಶ್ನ, ಆಥರ್ವಣ ಮತ್ತು ಮಾಂಡೂಕ -ಹೀಗೆ ಆರು ಉಪನಿಷದ್ಭಾಷ್ಯ ಟೀಕೆಗಳು) ಪ್ರಕಟವಾಗಬೇಕು. ಜತೆಗೆ ನಾರಾಯಣ ಪಂಡಿತರು ಬರೆದ ಮತ್ತು ಪದ್ಮನಾಭತೀರ್ಥರು ಬರೆದ ಪ್ರಾಚೀನ ಟೀಕಾದ್ವಯದೊಡನೆ ಅನುವ್ಯಾಖ್ಯಾನ ಮುದ್ರಣವಾಗಬೇಕು; ನಾರಾಯಣಪಂಡಿತರ ತತ್ತ್ವ ಮಂಜರಿಯ ಜತೆಗೆ ತತ್ತ್ವನಿರ್ಣಯ ಮುದ್ರಣವಾಗಬೇಕು; ನರಹರಿ ತೀರ್ಥರ ಟೀಕೆಯ ಶುದ್ಧಪಾಠದೊಡನೆ ಮಹಾಭಾರತ ತಾತ್ಪರ್ಯ ಮುದ್ರಣವಾಗಬೇಕು..... ಒಂದೇ ಎರಡೇ ನೂರಾರು ಪ್ರಾಚೀನ ಗ್ರಂಥಗಳು ಕತ್ತಲೆಯಿಂದ ಬೆಳಕಿಗೆ ಬರಬೇಕಿದೆ. ಕೆಲವು ಬೆಳಕು ಕಂಡವುಗಳನ್ನು ಅಪಪಾಠಾದಿ ಕೊಳೆಯಿಂದ ಬೇರ್ಪಡಿಸಿ ತೊಳೆದು ತಿಳಿಗೊಳಿಸಬೇಕು. ಈ ಅಪೂರ್ವ ಹಸ್ತಪ್ರತಿಗಳು ನಮ್ಮ ಕಿವಿಯಲ್ಲಿ ನಿರಂತರ ಪಿಸುಗುಡುತ್ತಿಲ್ಲವೇ? – 'ತಮಸೋ ಮಾ ಜ್ಯೋತಿರ್ಗಮಯ'.*

*ಶ್ರೀಪಾದರ ಆಶೀರ್ವಾದವಂತು ಇದ್ದೇ ಇದೆ. ಜನತೆಯೂ ನಮ್ಮ ಬೆನ್ನಿಗೆ ನಿಂತರೆ ಈ ಕೆಲಸ ತುಂಬ ಸುಲಭವಾಗುತ್ತದೆ.*

*ಈಗೊಂದು ಹೊಸ ಬಗೆಯ ಪುಸ್ತಕ ನಿಮ್ಮ ಮುಂದಿದೆ. ಗಾಯತ್ರಿಯ ಬಗೆಗೆ ನಡೆದ ಚಿಂತನಗಳ, ಮಂಥನಗಳ ಒಂದು ನವನೀತ; ಒಂದು ಸಮಷ್ಟಿ ಸಂಗ್ರಹ. ಪಂಡಿತರಾದ ರಾಘವೇಂದ್ರ ಉಪಾಧ್ಯಾಯರು, ರಾಮನಾಥ ಆಚಾರ್ಯ ಇಬ್ಬರೂ ಸೇರಿ ಮಾಡಿರುವ ಈ ಸಂಗ್ರಹ ಗಾಯತ್ರಿಯ ಬಗೆಗೆ ಒಂದು ಅಪೂರ್ವ ಚಿಂತನಸಂಗ್ರಹ. ವೇದಮಾತೆಯ ಈ ಅನುಸಂಧಾನ ಸಮಗ್ರ ವೈದಿಕ ಅನುಸಂಧಾನಕ್ಕೆ ನಾಂದಿಯಾಗಲಿ.*

ಹನುಮಜ್ಜಯಂತೀ
ಚೈತ್ರ-ಹುಣ್ಣಿಮೆ

**ಬನ್ನಂಜೆ ಗೋವಿಂದಾಚಾರ್ಯ**
ಈಶಾವಾಸ್ಯಮ್, ಅಂಬಲಪಾಡಿ.

# ಬ್ರಾಹ್ಮಣ್ಯ–ಗಾಯತ್ರೀ

ಬ್ರಾಹ್ಮಣ್ಯಕ್ಕೆ ಜೀವಾಳ ಬ್ರಹ್ಮಜ್ಞಾನ –ದೇವರ ಅರಿವು. ಅದು ಅರಳುವುದು ವೇದಾಧ್ಯಯನದಿಂದ. ವೇದದ ಪಾರಾಯಣವಷ್ಟೇ ವೇದಾಧ್ಯಯನವಲ್ಲ. ಜೊತೆಗೆ ಅರ್ಥದ ಚಿಂತನೆಯೂ ಬೇಕು. ಅರ್ಥಚಿಂತನೆ ಷಡಂಗಗಳ ಅಧ್ಯಯನದ ಹಿನ್ನೆಲೆಯಲ್ಲಷ್ಟೇ ನಡೆದರೆ ಸಾಲದು. ಇತಿಹಾಸ–ಪುರಾಣಗಳ ಅಧ್ಯಯನದ ಆಧಾರದಲ್ಲಿ ಸಾಗ ಬೇಕು. ವೇದದ ಹೃದಯವನ್ನು ತೆರೆದಿಡುವುದಕ್ಕಾಗಿಯೇ ನಿರ್ಮಿತ ವಾದವು ಇತಿಹಾಸ–ಪುರಾಣಗಳು. ಅಂತಹ ಇತಿಹಾಸ–ಪುರಾಣಗಳ ಅಧ್ಯಯನದಿಂದ ವೇದಮಾತೆಯ ಒಟ್ಟು ಅನಿಸಿಕೆಯನ್ನು ಮನವರಿಕೆ ಮಾಡಿಕೊಂಡು ಅದಕ್ಕೆ ಪೂರಕವಾಗಿ ಅಧ್ಯಯನ ಸಾಗಬೇಕು.

ಕೊನೆಯಿಲ್ಲದಷ್ಟು ಹಬ್ಬಿರುವ ವೇದಮಾತೆಯ ಹೃದಯವನ್ನು ಅರಿಯಲು ಇರುವ ಒಂದು ಸುಲಭ ಸರಳ ಉಪಾಯ ಗಾಯತ್ರೀ ಮಾತೆಯ ಹೃದಯವನ್ನು ಅರಿತುಕೊಳ್ಳುವುದು. ಗಾಯತ್ರೀಮಾತೆ ವೇದಮಾತೆಗೂ ಮಾತೆ; ಮಾತೃಸ್ಥಾನೀಯಳು. ತಾಯಿ–ಮಗಳ ಹೃದಯ ಒಂದೇ ಎಂಬುದು ಸಾಮಾನ್ಯ ನಿಯಮ.

ಆದುದರಿಂದ ಗಾಯತ್ರಿಯ ಹೃದಯವನ್ನರಿತಲ್ಲಿ ವೇದದ ಹೃದಯವನ್ನೂ ಅರಿತಂತೆ.

ಗಾಯತ್ರಿಯನ್ನು ಉಪಾಸಿಸಿದಲ್ಲಿ ವೇದವನ್ನೂ ಉಪಾಸಿಸಿದಂತೆ.

ಗಾಯತ್ರಿಯನ್ನು ಜಪಿಸಿದಲ್ಲಿ ವೇದವನ್ನೂ ಜಪಿಸಿದಂತೆ.

ಇದಕ್ಕಾಗಿಯೇ ಇರಬಹುದು 'ಮೈತ್ರೋ ಬ್ರಾಹ್ಮಣ ಉಚ್ಯತೇ' ಗಾಯತ್ರೀಜಪ ಮಾಡುವವನೇ ಬ್ರಾಹ್ಮಣ ಎನ್ನುವಷ್ಟೂ ಗಾಯತ್ರಿಗೂ ಬ್ರಾಹ್ಮಣ್ಯಕ್ಕೂ ಗಾಢವಾದ ನಂಟನ್ನು ಹಚ್ಚಿರುವುದು.

ಹೆಚ್ಚಿನ ಧಾರ್ಮಿಕ ಚಟುವಟಿಕೆಗಳಲ್ಲಿ ಹೇಗೋ ಹಾಗೆಯೇ ಗಾಯತ್ರೀ ಜಪದಲ್ಲೂ ಯಾಂತ್ರಿಕತೆ ಆಕ್ರಮಿಸಿದೆ. 'ಕೈಯಲಿ ಜಪಮಣಿ ಬಾಯಲಿ ಮಂತ್ರವು .........ಪರಸತಿಯರ ಗುಣ ಮನದಲಿ

ಸ್ಮರಿಸುತ...... ಮದಮತ್ಸರಕ್ರೋಧ ಒಳಗೆ ತುಂಬಿಟ್ಟುಕೊಂಡು.....' ಎಂದು ದಾಸರು ನಡೆಸಿದ ಟೀಕೆಯನ್ನು ಅಕ್ಷರಶಃ ಅಳವಡಿಸಿ ಕೊಳ್ಳಲಾಗಿದೆ.

ಹೀಗಾಗದೆ ಆದಷ್ಟು ಅರ್ಥಾನುಸಂಧಾನಪೂರ್ವಕವಾಗಿ, ಶ್ರದ್ಧಾ ಭಕ್ತಿಯಿಂದ, ಶಾಸ್ತ್ರೀಯವಾಗಿ ಗಾಯತ್ರಿಯ ಜಪವನ್ನು ನಡೆಸುವಂತಾಗಬೇಕು. ಇದಕ್ಕಾಗಿಯೇ 'ಮೈತ್ರ' ಸಾಧಕರ ಪಾಲಿಗೆ 'ಆಪ್ತಮಿತ್ರ'ನಾಗಿ ಹೊರಟಿದೆ.

'ಜಪಾನುಷ್ಠಾನ' 'ಅರ್ಥಾನುಸಂಧಾನ' 'ಇತರ ಕೃತಿಗಳ ನಂಟು' –ಈ ಮೂರು ವಿಭಾಗಗಳಲ್ಲಿ ಗಾಯತ್ರಿಯ ಜಪದ ಬಗ್ಗೆ, ಅರ್ಥ ಚಿಂತನೆಯ ಬಗ್ಗೆ, ಹಿರಿಮೆ–ಗರಿಮೆಗಳ ಬಗ್ಗೆ ನೂರು ಚಿಂತನೆಗಳ ಮೂಲಕ ಬೆಳಕು ಚೆಲ್ಲುತ್ತಿದೆ ಮೈತ್ರ. ಜಿಜ್ಞಾಸುಗಳಿಗೆ, ಸಾಧಕರಿಗೆ ಗಾಯತ್ರಿಯ ಮಾಧ್ಯಮವಾಗಿ ಜಪಾದಿಸಾಧನಾನುಷ್ಠಾನದಲ್ಲಿ ಇದು 'ಆಪ್ತಮಿತ್ರ'ನಾದೀತೆಂದು ನಮ್ಮ ನಿರೀಕ್ಷೆ.

ಈ ಮೈತ್ರದಲ್ಲಿ ಸಮಕಾಲೀನ ಚಿಂತಕರನೇಕರ ಚಿಂತನೆಗಳನ್ನು ಸಂಗ್ರಹಿಸಿದ್ದೇವೆ. ಅಲ್ಲಲ್ಲಿ ಪೂರ್ಣತೆಗಾಗಿ ಶ್ರಮಿಸಿದ್ದೇವೆ.

೧. ಶ್ರೀ ವಿದ್ಯಾಮಾನ್ಯತೀರ್ಥರ ಗಾಯತ್ರಿಯ ಗಾಂಭೀರ್ಯ

೨. ಶ್ರೀ ವಿದ್ಯೇಶತೀರ್ಥರ ಗಾಯತ್ರೀ ಹೃದಯ, ಗಾಯತ್ರಿಯಲ್ಲಿ ಅಧ್ಯಾತ್ಮದೀಪ, ಗಾಯತ್ರಿಯಲ್ಲಿ ವ್ಯಾಸಚಿಂತನೆ

೩. ಅಭಾಮಾಮಂಡಲದಿಂದ ಪ್ರಕಾಶಿತ ತತ್ತ್ವವಾದ

೪. ಶ್ರೀ ಪುತ್ತಿಗೆ ಮಠದಿಂದ ಪ್ರಕಾಶಿತ ಸುಗುಣಮಾಲಾ

೫. ಬನ್ನಂಜೆ ಅನುವಾದದ ತಂತ್ರಸಾರಸಂಗ್ರಹ

– ಮೈತ್ರ ಇವರಿಗೆಲ್ಲ ಕೃತಜ್ಞ.

ಮುದ್ರಣದಲ್ಲಿ ಸಹಕರಿಸಿದ ಎಲ್ಲರಿಗೂ ವಂದನೆಗಳು.

ಶ್ರೀರಾಮನವಮೀ
ಬಹುಧಾನ್ಯ ಸಂವತ್ಸರ

**ಸಂಪಾದಕರು**
ತತ್ತ್ವವಾದ ಸಂಶೋಧನ ಸಂಸತ್

# ವಿಷಯಾನುಕ್ರಮಃ

## ಭಾಗ – ೧



## ಭಾಗ – ೨

## ಭಾಗ – ೩



## ಚಿಂತನೆಯ ತುಣುಕುಗಳು

ಓಂ

## ಭಾಗ – ೧

*

# ಗಾಯತ್ರಿಯ ಜಪಾನುಷ್ಠಾನ

*

ನ ಗಾಯತ್ರ್ಯಾಃ ಪರಂ ಜಪ್ಯಮ್

(ಅಗ್ನಿಪುರಾಣ.)

ಗಾಯತ್ರಿಗಿಂತ ಮಿಗಿಲಾದ ಜಪಾರ್ಹ ಮಂತ್ರ ಇಲ್ಲ.



ಓಮ್

ಭೂರ್ಭುವಃ ಸ್ವಃ

ತತ್ಸವಿತುರ್ವರೇಣ್ಯಮ್

ಭರ್ಗೋ ದೇವಸ್ಯ ಧೀಮಹಿ

ಧಿಯೋ ಯೋ ನಃ ಪ್ರಚೋದಯಾತ್

"ಓಮಶೇಷಗುಣಾಧಾರ ಇತಿ ನಾರಾಯಣೋಽಪ್ಯಸೌ ।
ಪೂರ್ಣೋ ಭೂತಿವರೋಽನಂತಸುಖೋ ಯದ್ ವ್ಯಾಹೃತೀರಿತಃ ॥
ಗುಣೈಸ್ತತಃ ಪ್ರಸವಿತಾ ವರಣೀಯೋ ಗುಣೋನ್ನತೇಃ ।
ಭಾರತಿಜ್ಞಾನರೂಪತ್ವಾದ್ ಭರ್ಗೋ ಧ್ಯೇಯೋಽಖಿಲೈರ್ಜನೈಃ ॥
ಪ್ರೇರಕೋಽಶೇಷಬುದ್ಧೀನಾಂ ಸ ಗಾಯತ್ರ್ಯರ್ಥ ಈರಿತಃ ॥"

(ಆನಂದತೀರ್ಥರ ಋಗ್ಭಾಷ್ಯ.)

ಶ್ರೀಮನ್ನಾರಾಯಣನು ಸಕಲಗುಣಾಶ್ರಯನು. ಪರಿಪೂರ್ಣನು. ಉತ್ತಮ ಐಶ್ವರ್ಯಸಂಪನ್ನನು. ಅಮಿತಸುಖಭರಿತನು.

ಎಲ್ಲವನ್ನೂ ಚೆನ್ನಾಗಿ ಸೃಷ್ಟಿಮಾಡುವನು, ಜಗತ್ಸೃಷ್ಟ್ಯಾದಿಗಳನ್ನು ಕ್ರೀಡಾ ರೂಪದಿಂದ ನಡೆಸುವನು, ಅವನ ಗುಣಭರಿತವಾದ, ಗುಣಸಾಂದ್ರತೆಯಿಂದಾಗಿ ಎಲ್ಲರಿಂದಲೂ ಸೇವ್ಯವಾದ, ಕಾಂತಿ ಜ್ಞಾನಾನಂದಾತ್ಮಕವಾದ ರೂಪವನ್ನು ನಿರಂತರವಾಗಿ ಚಿಂತಿಸುವೆವು. ಲಕ್ಷ್ಮೀಸಹಿತನಾದ ಅವನು ನಮ್ಮ ಬುದ್ಧಿಯನ್ನು ಚೆನ್ನಾಗಿ ಪ್ರೇರಿಸಲಿ.

# ಮೈತ್ರೋ ಬ್ರಾಹ್ಮಣ ಉಚ್ಯತೇ

ಶ್ರೀ ವಿದ್ಯಾಧೀಶತೀರ್ಥರು

ಇಪ್ಪತ್ನಾಲ್ಕು ಅಕ್ಷರಗಳನ್ನೊಳಗೊಂಡ ಛಂದಸ್ಸು 'ಗಾಯತ್ರೀ' ಎನಿಸುತ್ತಿದ್ದು ಇಂತಹ ಛಂದಸ್ಸಿನ ಯಾವುದೇ ಮಂತ್ರವೂ 'ಗಾಯತ್ರೀ' ಎನಿಸಬಹುದು. ಆದರೆ 'ಗಾಯತ್ರೀ' ಎಂದರೆ ಗಾಯತ್ರೀ ಛಂದಸ್ಸಿನ ಇತರ ಯಾವುದೇ ಮಂತ್ರಗಳ ಸ್ಮರಣೆ ಬಾರದೆ 'ಗಾಯತ್ರೀಮಂತ್ರ'ದ ಸ್ಮರಣೆಯೇ ಬರುವುದರಿಂದ ಅದು ಇತರೆಲ್ಲ ಮಂತ್ರಗಳಿಂದ ಪ್ರಧಾನವಾದುದೆಂಬುದಾಗಿ ಸಿದ್ಧಿಸುವುದು.

## ಸ್ತುತಿಸುವವನನ್ನು ರಕ್ಷಿಸುವುದು:

ಗಾಯತ್ರೀಮಂತ್ರ ಯಾಕೆ ಇತರ ಮಂತ್ರಗಳಿಗಿಂತೆಲ್ಲ ಪ್ರಧಾನವಾದುದೆಂಬುದನ್ನು ಗಾಯತ್ರೀ ಎಂಬ ನಾಮವೇ ಸೂಚಿಸುವುದು. ಭಗವಂತನನ್ನು ಚೆನ್ನಾಗಿ ಅಂದರೆ ಪದ-ಪದದಿಂದ, ಅಕ್ಷರ-ಅಕ್ಷರದಿಂದ ಪ್ರತಿಪಾದಿಸುತ್ತಿದೆ ಎಂಬುದಾಗಿ ಒಂದು ಅರ್ಥವಾದರೆ, ಮತ್ತೊಂದು ಅರ್ಥ ತನ್ನ ಮೂಲಕ ಭಗವಂತನನ್ನು ಸ್ತುತಿಸುವವನಿಗೆ ಸದ್ಗತಿ ನೀಡಿ ಅವನನ್ನು ಕಾಪಾಡುವುದೆಂದು.

## ವಿಶ್ವಾಮಿತ್ರರ ಉಲ್ಲೇಖ:

ಹೀಗೆ ಗಾಯತ್ರೀಮಂತ್ರವು ಸತ್ವಪೂರ್ಣವಾಗಿರುವುದರಿಂದಲೇ **'ಕುರ್ಯಾದನ್ಯಂ ನವಾ ಕುರ್ಯಾತ್ ಮೈತ್ರೋ ಬ್ರಾಹ್ಮಣ ಉಚ್ಯತೇ'** -ಉಳಿದ ಯಾವುದೇ ಅನುಷ್ಠಾನ ಮಾಡಲಿ, ಬಿಡಲಿ ಮೈತ್ರನಾಗಿದ್ದಲ್ಲಿ ಬ್ರಾಹ್ಮಣ ಎನಿಸಬಹುದಾಗಿದೆ ಎಂದು ಬ್ರಾಹ್ಮಣ ರಕ್ಷಣೆಗೆ 'ಮೈತ್ರ'ನಾಗಬೇಕೆಂದು ಸಂದೇಶಿಸಲಾಗಿದೆ. 'ಮೈತ್ರ' ಎಂದರೇನು? ಮಿತ್ರನೇ ದೇವತೆಯಾಗಿ ಉಳ್ಳ ಗಾಯತ್ರೀಮಂತ್ರವನ್ನು ಜಪಿಸುವವನೆಂಬುದು ಸಾಮಾನ್ಯವಾಗಿ ಪ್ರಸಿದ್ಧವಾದ ಅರ್ಥ. ಮಂತ್ರವು ಪ್ರತಿಪಾದ್ಯ ದೇವತೆಯ ಹೆಸರಿನಿಂದ ಉಲ್ಲೇಖಿಸಲ್ಪಡುವುದಿದೆ. ಆದರೆ ಮಂತ್ರದಲ್ಲಿ ಯಾವ ಹೆಸರಿನ ಮೂಲಕ ಅವನು ಪ್ರತಿಪಾದ್ಯನಾಗಿರುವನೋ ಆ ಹೆಸರಿನಿಂದಲೇ ಉಲ್ಲೇಖವಿರುವುದು. ಉದಾಹರಣೆಗೆ ಅಗ್ನಿಸೂಕ್ತದಲ್ಲಿ ಅಗ್ನಿದೇವತೆ 'ಅಗ್ನಿ' ಹೆಸರಿನಿಂದ ಉಲ್ಲೇಖಿಸಲ್ಪಡುವುದರಿಂದ ಆ ಸೂಕ್ತ ಅಗ್ನಿಸೂಕ್ತ ಎಂದೇ ಪ್ರಸಿದ್ಧ ಹೊರತು ವಹ್ನಿಸೂಕ್ತ ಇತ್ಯಾದಿಯಾಗಿ ವ್ಯವಹರಿಸಲ್ಪಡುವುದಿಲ್ಲ. ಆದ್ದರಿಂದ ಗಾಯತ್ರೀಯಲ್ಲಿ ಪ್ರತೀಕವಾಗಿ ಸೂರ್ಯನು ಸವಿತೃನಾಮದಿಂದ ಉಲ್ಲೇಖಿಸಲ್ಪಟ್ಟಿರುವನೇ ಹೊರತು ಮಿತ್ರನಾಮದಿಂದಲ್ಲ. ಹಾಗಿರುವಾಗ ಗಾಯತ್ರ್ಯುಪಾಸಕನನ್ನು 'ಮೈತ್ರ' ಎಂದು ಕರೆಯುವುದರಲ್ಲಿ ಅಷ್ಟೊಂದು ಔಚಿತ್ಯ ಕಾಣಲಾರದು. ಆದ್ದರಿಂದ ಗಾಯತ್ರೀ ಮಂತ್ರದ ಋಷಿ ವಿಶ್ವಾಮಿತ್ರ, ನಾಮದ ಏಕದೇಶವನ್ನಿಟ್ಟುಕೊಂಡು, 'ಮಿತ್ರ' ಋಷಿಗಳೇ ದ್ರಷ್ಟಾರರಾಗಿ ಉಳ್ಳ ಗಾಯತ್ರೀಯನ್ನು ಜಪಿಸುವವನು ಎಂಬ

ಅರ್ಥದಲ್ಲಿ 'ಮೈತ್ರ' ಎನ್ನಲಾಗಿದೆ ಎನ್ನುವುದು ಸಮುಚಿತ. ಕಾಠಕೋಪನಿಷತ್, ತಲವಕಾರೋಪನಿಷತ್ ಮುಂತಾದವುಗಳು ಋಷಿಗಳ ಹೆಸರಿನ ಮೇಲೆಯೇ ಪ್ರಸಿದ್ಧಗಳಾದ ನಾಮಗಳು. ಅಂತೆಯೇ ಮಿತ್ರ ಋಷಿಯ ಸಂಪರ್ಕ ಮೂಲಕ ವಾಗಿಯೇ 'ಮೈತ್ರ' ಎನ್ನಲಾಗಿದೆ ಎನ್ನುವುದು ಸಮುಚಿತವೆನಿಸುವುದು.

## ಸೀತಾರಾಮರನ್ನು ಜೋಡಿಸಿದವರು:

ವಿಶ್ವಾಮಿತ್ರಋಷಿ ಶ್ರೀರಾಮನ ಹಾಗೂ ಸೀತಾದೇವಿಯ ಸಮಾಗಮಕ್ಕೆ ಕಾರಣರಾದವರು. ಶ್ರೀರಾಮನನ್ನು ಸೀತಾದೇವಿ ಇದ್ದಲ್ಲಿಗೆ ಕರೆದೊಯ್ದು ಅವರಿಬ್ಬರ ಕಲ್ಯಾಣ ಮಹೋತ್ಸವ ನಡೆಯುವಂತೆ ಮಾಡಿದವರು. ಇಂತಹ ವಿಶ್ವಾಮಿತ್ರರು ಸೀತಾದೇವಿಗೆ ರಾಮಚಂದ್ರನ ಜೊತೆ ಕಲ್ಯಾಣ ಮಾಡಿಸಿದಂತೆ ಪ್ರತಿಯೊಬ್ಬ ಸಾತ್ವಿಕ ಸಾಧಕನೂ ಶ್ರೀರಾಮಚಂದ್ರನ ಸಮಾಗಮ ಪಡೆಯಲು ಕಾರಣರಾಗಿರುವರು. ಅವರು ದ್ರಷ್ಟಾರವಾಗಿ ಉಳ್ಳ ಗಾಯತ್ರೀಯ ಉಪಾಸನೆ ಯಿಂದ ಶ್ರೀರಾಮಚಂದ್ರನ ಸಾನ್ನಿಧ್ಯವನ್ನು ಯಾರಾದರೂ ಪಡೆಯಬಹುದು ತಾನೆ? ತನ್ನ ಜೀವನದ ಕಲ್ಯಾಣವನ್ನು ಸಾಧಿಸಿಕೊಳ್ಳಬಹುದು ತಾನೆ? ಆದರೆ ದಶರಥ ತಡೆದರೂ ಶ್ರೀರಾಮ ವಿಶ್ವಾಮಿತ್ರರ ಬೆನ್ನುಹತ್ತಿದಂತೆ, 'ದಶರಥ' ನಂಥವರು ತಡೆದರೂ ಅದನ್ನು ಪರಿಗಣಿಸದೆ ಗಾಯತ್ರೀ ಉಪಾಸನೆಯಲ್ಲಿ ನಾವು ತಲ್ಲೀನರಾಗಬೇಕಷ್ಟೆ.

*

### ಪ್ರಾಣಾಯಾಮದ ಋಷ್ಯಾದಿಗಳಲ್ಲಿ ತಿದ್ದುಪಡಿ

ಯತಿಗಳು ಬರೇ ಓಂಕಾರದಿಂದ ಪ್ರಾಣಾಯಾಮ ನಡೆಸಿದರೆ, ಗೃಹಸ್ಥರು ಹತ್ತು ಓಂಕಾರಗಳು, ಏಳು ವ್ಯಾಹೃತಿಗಳು, ಗಾಯತ್ರಿ ಹಾಗೂ ಗಾಯತ್ರೀಶಿರಸ್ಸು -ಇವು ಗಳನ್ನು ಒಳಗೊಂಡು ಪ್ರಾಣಾಯಾಮವನ್ನು ನಡೆಸುವರು.

ಆದರೆ ಅದರ ಋಷ್ಯಾದಿಗಳನ್ನು ಸ್ಮರಿಸಿಕೊಳ್ಳುವಾಗ 'ಪ್ರಣವಸ್ಯ ಪರಬ್ರಹ್ಮ ಋಷಿಃ......' ಇತ್ಯಾದಿಯಾಗಿ ಪ್ರಣವದ ಋಷ್ಯಾದಿಗಳನ್ನಷ್ಟೇ ಉಲ್ಲೇಖಿಸಲಾಗುವುದು. ಇದು ಪ್ರಣವದಿಂದ ಮಾತ್ರ ಪ್ರಾಣಾಯಾಮ ನಡೆಸುವ ಯತಿಗಳಿಗಷ್ಟೇ ಹೇಳಿಸಿದ್ದು. ಪ್ರಾಣಾಯಾಮದಲ್ಲಿ ವ್ಯಾಹೃತ್ಯಾದಿಗಳನ್ನೂ ಉಲ್ಲೇಖಿಸುವವರು ವ್ಯಾಹೃತಿ, ಗಾಯತ್ರಿ ಹಾಗೂ ಗಾಯತ್ರೀಶಿರಸ್ಸು -ಇವುಗಳ ಋಷ್ಯಾದಿಗಳನ್ನೂ ಸ್ಮರಿಸಿಕೊಳ್ಳಬೇಕಲ್ಲವೇ?

*-ಬನ್ನಂಜೆ ಗೋವಿಂದಾಚಾರ್ಯ*

* * *

### ತಂದೆಯ ಆಸ್ತಿ

ಬದುಕಿರುವಾಗಲೆ ತಂದೆ ಮಗನಿಗೆ ನೀಡಿದ ಇಹ-ಪರಸುಖಪ್ರದವಾದ ಆಸ್ತಿ 'ಗಾಯತ್ರೀಮಂತ್ರ'.

*— ಗೋವಿಂದದಾಸ*

# ಸಹಸ್ರಪರಮಾಂ ದೇವೀಂ......?

ಬನ್ನಂಜೆ ಗೋವಿಂದಾಚಾರ್ಯ

ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶಾವರಾಮ್ ।

ಶ್ರೀಮಧ್ವಾಚಾರ್ಯರು ತಮ್ಮ 'ಸದಾಚಾರಸ್ಮೃತಿ'ಯಲ್ಲಿ ಉಲ್ಲೇಖಿಸಿರುವ ಈ ಪ್ರಮಾಣದ ಪ್ರಕಾರ ಗಾಯತ್ರೀಮಂತ್ರವನ್ನು ಒಮ್ಮೆಗೆ ಹೆಚ್ಚು ಅಂದರೆ ಸಾವಿರ ಸಂಖ್ಯೆಯಲ್ಲಿ, ಮಧ್ಯಮ ಮಾರ್ಗಕ್ಕನುಗುಣವಾಗಿ ನೂರು ಸಂಖ್ಯೆಯಲ್ಲಿ, ಕನಿಷ್ಠ ಮಾರ್ಗಕ್ಕನುಗುಣವಾಗಿ ಹತ್ತು ಸಂಖ್ಯೆಯಲ್ಲಿ ಜಪಿಸಬೇಕು.

ಇಲ್ಲಿಯ 'ಸಹಸ್ರಪರಮಾಂ....' ಎಂಬ ಮಾತಿಗೆ ಹೆಚ್ಚು ಅಂದರೆ ಸಾವಿರ ಬಾರಿ ಜಪಿಸಬೇಕೇ ಹೊರತು ಅದಕ್ಕಿಂತ ಹೆಚ್ಚು ಜಪಿಸಬಾರದು ಎಂಬ ಎಚ್ಚರಿಕೆ ಯನ್ನು ನೀಡುವ ತಾತ್ಪರ್ಯವೂ ಇದೆ.

ನಮ್ಮ ಶರೀರದ ಎಡಮಗ್ಗುಲಲ್ಲಿ ೩೬,೦೦೦ ನಾಡಿಗಳು, ಬಲಮಗ್ಗುಲಲ್ಲಿ ೩೬,೦೦೦ ನಾಡಿಗಳು ಇವೆ. ಹೀಗೆ ಒಟ್ಟು ೭೨,೦೦೦ ನಾಡಿಗಳು ನಮ್ಮ ಶರೀರದಲ್ಲಿ ಇವೆ. ಗಾಯತ್ರೀಮಂತ್ರದ ಅಕ್ಷರಗಳು ೨೪. ಸಾವಿರಬಾರಿ ಗಾಯತ್ರೀ ಮಂತ್ರವನ್ನು ಜಪಿಸಿದಾಗ ಆ ಮಂತ್ರದ ಅಕ್ಷರಗಳನ್ನು ೨೪,೦೦೦ ಬಾರಿ ಉಚ್ಚರಿಸಿದಂತೆ, ಚಿಂತಿಸಿದಂತೆ ಆಗುವುದು. ಹೀಗೆ ದಿನದ ಮೂರೂ ಹೊತ್ತು ಸಾವಿರ ಸಂಖ್ಯೆಯಲ್ಲಿ ಗಾಯತ್ರೀಜಪ ನಡೆಸಿದಲ್ಲಿ ಒಟ್ಟಿಗೆ ಗಾಯತ್ರೀಮಂತ್ರದ ವರ್ಣಗಳನ್ನು ೭೨,೦೦೦ ಬಾರಿ ಉಚ್ಚರಿಸಿದಂತೆ, ಪಠಿಸಿದಂತೆ [೨೪,೦೦೦ x ೩ = ೭೨,೦೦೦] ಆಗುವುದು. ೭೨,೦೦೦ ನಾಡಿಗಳನ್ನು ಹೊಂದಿರುವ ಈ ದೇಹಕ್ಕೆ ೭೨,೦೦೦ ಅಕ್ಷರಗಳ ಉಚ್ಚಾರಣೆ, ಚಿಂತನೆ ನಡೆಸಲು ಬೇಕಾಗುವಷ್ಟೇ ತಾಕತ್ತು ಇರುವುದು. ಅದಕ್ಕಿಂತ ಹೆಚ್ಚು ಜಪ ನಡೆಸಿದಲ್ಲಿ ಅದರ ಧಾರಣೆಗೆ ಬೇಕಾಗುವಷ್ಟು ಸಾಮರ್ಥ್ಯವನ್ನು ಹೊಂದದ ದೇಹ ನಲ್ವತ್ತು ಕ್ಯಾಂಡ್ಲಿನ ಬಲ್ಬಿನಲ್ಲಿ, ಅದರ ಧಾರಣೆಯ ಶಕ್ತಿಗಿಂತ ಅಧಿಕ ಪ್ರಮಾಣದಲ್ಲಿ ವಿದ್ಯುತ್ ಹರಿದರೆ ಹೇಗೆ ಬಲ್ಬ್ ಸುಟ್ಟು ಹೋಗುವುದೋ ಹಾಗೆಯೇ ಕೆಟ್ಟ ವಿಕಾರಗಳಿಗೊಳಗಾಗಿ ಆ ವ್ಯಕ್ತಿ ಉನ್ಮಾದಾದಿಗಳಿಗೆ ಬಲಿಯಾದರೆ ಆಶ್ಚರ್ಯವಿಲ್ಲ.

ಆದ್ದರಿಂದ ಗಾಯತ್ರೀಮಂತ್ರವನ್ನು ಒಂದು ಹೊತ್ತಿಗೆ ಹೆಚ್ಚು ಅಂದರೆ ಸಾವಿರ ಬಾರಿ ಅಷ್ಟೇ ಜಪಿಸಬೇಕು. ಶಾಸ್ತ್ರದ ಪ್ರತಿಯೊಂದು ನಿಯಮವೂ ಆರೋಗ್ಯಶಾಸ್ತ್ರಕ್ಕೂ ಮನಶ್ಶಾಸ್ತ್ರಕ್ಕೂ ಹೇಗೆ ಪೂರಕವಾಗಿರುದೆಂಬುದಕ್ಕೆ ಇದೊಂದು ಉತ್ತಮ ನಿದರ್ಶನ.

*

## ಪ್ರಣವ – ಪ್ರಾಣಾಯಾಮ

ಪ್ರಣವದಿಂದ ಪ್ರಾಣಾಯಾಮವನ್ನು ನಡೆಸಬೇಕೆನ್ನುವುದು ಯೋಗಶಾಸ್ತ್ರಗಳ, ತಂತ್ರಶಾಸ್ತ್ರಗಳ ಅಭಿಪ್ರಾಯ. ಇದನ್ನು ಸಬೀಜ ಪ್ರಾಣಾಯಾಮ ಎಂದು ತಿಳಿಸಿರುವರು. ಆಚಾರ್ಯಮಧ್ವರೂ ತಂತ್ರಸಾರಸಂಗ್ರಹದಲ್ಲಿ ಹೀಗೆಯೆ ಹೇಳಿದ್ದಾರೆ-

**ತಾರತ್ರಿದ್ವಾದಶಾವರ್ತ್ಯೈರ್ದ್ವ್ಯೇಕದ್ವಾದಶಕೇನ ವಾ ।**

**ತತ್ತನ್ಮಂತ್ರೇಣ ವಾ ಕಾರ್ಯೋ ಗಾಯತ್ರ್ಯಾ ದಶತಾರಕೈಃ ॥**

೩೬, ೨೪ ಅಥವಾ ೧೨ ಓಂಕಾರಗಳಿಂದ ಪ್ರಾಣಾಯಾಮ ನಡೆಸಬೇಕು. ಜಪಿಸುವ ಮಂತ್ರದಿಂದಾಗಲಿ ಪ್ರಾಣಾಯಾಮ ನಡೆಸಬಹುದು. ಹತ್ತು ಓಂಕಾರವುಳ್ಳ ಗಾಯತ್ರೀಮಂತ್ರದಿಂದಲೂ ಪ್ರಾಣಾಯಾಮ ನಡೆಸಬಹುದು.

ಹತ್ತು ಓಂಕಾರದ ಗಾಯತ್ರಿಯಿಂದ ಪ್ರಾಣಾಯಾಮವು ಈಗ ಸಂಧ್ಯಾವಂದನೆಯಲ್ಲಿ ಬಳಕೆಯಲ್ಲಿದೆ. ಅಲ್ಲಿ ಈ ಗಾಯತ್ರಿಯನ್ನು 'ಪ್ರಣವ' ಎಂದೇ ಸ್ವೀಕರಿಸಿ ಪ್ರಾಣಾಯಾಮದ ಮೊದಲು ಪ್ರಾಣಾಯಾಮದ ಮಂತ್ರದ ಋಷ್ಯಾದಿಗಳನ್ನು ಹೇಳುವಲ್ಲಿ 'ಪ್ರಣವಸ್ಯ ಪರಬ್ರಹ್ಮ ಋಷಿಃ....' ಎಂದೇ ಹೇಳುವರು. ಪ್ರಣವದ ಅರ್ಥವಿಸ್ತಾರ ವ್ಯಾಹೃತಿ, ಅದರ ಅರ್ಥವಿಸ್ತಾರ ಗಾಯತ್ರೀ ಎಂದಾಗ ಎಲ್ಲವೂ 'ಪ್ರಣವ' ಎಂದೆ ಸೂಚಿತವಾಗುವುದು. ಶಿರೋಮಂತ್ರದ ಎಂಟು ಪದಗಳೂ ಪ್ರಣವದ ಅಷ್ಟಮುಖವನ್ನೆ ತಿಳಿಸಿದೆ. ಪ್ರಣವದಿಂದ ವ್ಯಾಹೃತಿಯು, ವ್ಯಾಹೃತಿಯಿಂದ ಗಾಯತ್ರಿಯ ಅಭಿವ್ಯಕ್ತಿಯನ್ನು ತಿಳಿಸಿರುವುದರ ಮೂಲಕ ಪ್ರಣವದ ವೈಶಾಲ್ಯವನ್ನು ಕಾಣಬಹುದು. ಪ್ರಣವ ಶಬ್ದದ 'ಪೂರ್ಣವಾದ ಸ್ತುತಿ' ಎಂಬ ಅರ್ಥದಲ್ಲೂ ವ್ಯಾಹೃತಿ ಮತ್ತು ಗಾಯತ್ರೀ ಶಬ್ದಗಳು ತೆರೆದುಕೊಳ್ಳುತ್ತವೆ. ಅದರಿಂದ ವ್ಯಾಹೃತಿಯೂ ಪ್ರಣವವೆ. ಗಾಯತ್ರಿಯೂ ಪ್ರಣವವೆ. ಹಾಗಾಗಿ ತುಂಬಾ ಪ್ರಣವದಿಂದಲೆ ತುಂಬಿದ ಅಂದರೆ ಹತ್ತು ಓಂಕಾರದ ಪ್ರಾಣಾಯಾಮದ ಮಂತ್ರ ಪ್ರಣವ ಎಂದೆ ಗುರುತಿಸಲ್ಪಟ್ಟು ಋಷ್ಯಾದಿಗಳ ವಿನಿಯೋಗದಲ್ಲಿ ಬಳಕೆಯಲ್ಲಿದೆ. ಪ್ರಣವಸ್ಯ ಎಂದಾಗ ೧೦ ಓಂಕಾರದ, ವ್ಯಾಹೃತಿಯ, ಗಾಯತ್ರಿಯ, ಶಿರೋಮಂತ್ರದ ಎಂದೇ ಅರ್ಥವಾಗಬಲ್ಲದು.

ಪ್ರಣವ ಮಾತ್ರದಿಂದಲೆ ಎಲ್ಲರೂ ಪ್ರಾಣಾಯಾಮ ನಡೆಸಿದಲ್ಲಿ ಆಶ್ರಮ ಧರ್ಮಗಳು ಸರಿಹೊಂದಲಾರವು. ಯತಿಗಳಿಗೆ ವಿಶೇಷವಾಗಿ ಪ್ರಣವಮಾತ್ರದ ಉಪಾಸನೆ ವಿಹಿತ. ಗೃಹಸ್ಥರಿಗೂ ಪ್ರಣವದಿಂದ ಪ್ರಾಣಾಯಾಮವಾಗಲೆಂಬ ಉದ್ದೇಶದಿಂದ ಹತ್ತು ಓಂಕಾರದ ಗಾಯತ್ರಿ-ವ್ಯಾಹೃತಿ ಸೇರಿರುವ ಮಂತ್ರವನ್ನು ಶಾಸ್ತ್ರ ತಿಳಿಸಿತು. ಹೀಗೆ ಪ್ರಣವದಿಂದ ಪ್ರಾಣಾಯಾಮ ಎನ್ನುವ ಅಂಶವನ್ನು ವ್ಯಾಪಕವಾಗಿ ನೋಡಬಹುದಾಗಿದೆ.

*— ಉಡುಪಿ ರಾಮನಾಥ ಆಚಾರ್ಯ*

# ಗಾಯತ್ರೀಜಪ

ಉಡುಪಿ ರಾಮನಾಥ ಆಚಾರ್ಯ

ಸಂಧ್ಯಾವಂದನೆಯಲ್ಲಿ ಊರ್ಧ್ವಪುಂಡ್ರಧಾರಣೆ, ಆಚಮನ, ಸಂಕಲ್ಪ, ಅರ್ಘ್ಯ ಪ್ರದಾನ, ಆಸನಶುದ್ಧಿ, ಗುರುನಮಸ್ಕಾರ, ಪಾಪಪುರುಷನಿರಸನ, ತತ್ತ್ವನ್ಯಾಸ ಮಾತೃಕಾನ್ಯಾಸಗಳಾದ ಮೇಲೆ ಗಾಯತ್ರೀಮಂತ್ರವನ್ನು ಜಪಿಸಬೇಕು.

ಮೊದಲು ಪ್ರಾಣಾಯಾಮ ನಡೆಸಿ ಗಾಯತ್ರೀಮಂತ್ರದ ಋಷಿಛಂದೋ ದೇವತೆಗಳನ್ನು ಹೇಳಿ ಕರನ್ಯಾಸ–ಅಂಗನ್ಯಾಸದ ಬಳಿಕ ಧ್ಯಾನಮಾಡಿ ಗಾಯತ್ರೀ ಮಂತ್ರವನ್ನು ಜಪಿಸಬೇಕು. ಹತ್ತು ಜಪಕ್ಕೊಂದರಂತೆ ತರ್ಪಣ ನೀಡಬೇಕು. ಪುನಃ ಮಂತ್ರಮೂರ್ತಿಯನ್ನು ಧ್ಯಾನಿಸಿ ಅಂಗನ್ಯಾಸ–ಕರನ್ಯಾಸಗಳನ್ನು ಮಾಡಿ ಋಷಿ ಛಂದೋದೇವತೆಗಳನ್ನು ಹೇಳಿ ಪ್ರಾಣಾಯಾಮ ನಡೆಸಿ ಕೃಷ್ಣಾರ್ಪಣ ಬಿಡಬೇಕು.

(ಮಂತ್ರ ಜಪದ ಮೊದಲು ಮತ್ತು ಮಂತ್ರ ಜಪದ ಬಳಿಕ ಮುದ್ರೆಗಳನ್ನು ತೋರಿಸುವ ಕ್ರಮವೂ ಇದೆ.)

**ಪರಬ್ರಹ್ಮ ಋಷಿಃ । ದೈವೀ ಗಾಯತ್ರೀ ಛಂದಃ । ಪರಮಾತ್ಮಾ ದೇವತಾ ॥**
**ಪ್ರಾಣಾಯಾಮೇ ವಿನಿಯೋಗಃ ॥**

**ಓಂ ಭೂಃ । ಓಂ ಭುವಃ । ಓಂ ಸುವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಂ ಸತ್ಯಂ ।**

**ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ।**

**ಓಮಾಪೋ ಜ್ಯೋತೀರಸೋಮೃತಂ ಬ್ರಹ್ಮ ಭೂರ್ಭುವಃಸ್ವರೋಮ್ ॥**

(ಈ ಮಂತ್ರವನ್ನು ಮೂರು ಬಾರಿ ಹೇಳಬೇಕು)

**ಅಸ್ಯ ಶ್ರೀಗಾಯತ್ರೀಮಂತ್ರಸ್ಯ ವಿಶ್ವಾಮಿತ್ರ ಋಷಿಃ । ಗಾಯತ್ರೀಛಂದಃ । ಸವಿತ್ರಂತರ್ಗತಃ ಶ್ರೀಪರಮಾತ್ಮಾ ದೇವತಾ ॥**

ಎರಡೂ ಕೈಗಳಿಂದ ಕರನ್ಯಾಸ ಮಾಡಬೇಕು.

**ತತ್ಸವಿತುಃ ಅಂಗುಷ್ಠಾಭ್ಯಾಂ ನಮಃ ।**

(ತೋರುಬೆರಳುಗಳಿಂದ ಹೆಬ್ಬೆರಳನ್ನು ತೀಡುವುದು)

**ವರೇಣ್ಯಂ ತರ್ಜನೀಭ್ಯಾಂ ನಮಃ ।**

(ಹೆಬ್ಬೆರಳುಗಳಿಂದ ತೋರುಬೆರಳುಗಳನ್ನು ತೀಡುವುದು)

**ಭರ್ಗೋ ದೇವಸ್ಯ ಮಧ್ಯಮಾಭ್ಯಾಂ ನಮಃ ।**

(ಹೆಬ್ಬೆರಳುಗಳಿಂದ ನಡುಬೆರಳುಗಳನ್ನು ತೀಡುವುದು)

**ಧೀಮಹಿ ಅನಾಮಿಕಾಭ್ಯಾಂ ನಮಃ**

(ಹೆಬ್ಬೆರಳುಗಳಿಂದ ಉಂಗುರಬೆರಳುಗಳನ್ನು ತೀಡುವುದು)

**ಧಿಯೋ ಯೋ ನಃ ಕನಿಷ್ಠಿಕಾಭ್ಯಾಂ ನಮಃ ।**

(ಹೆಬ್ಬೆರಳುಗಳಿಂದ ಕಿರುಬೆರಳುಗಳನ್ನು ತೀಡುವುದು)

**ಪ್ರಚೋದಯಾತ್ ಕರತಲಕರಪೃಷ್ಠಾಭ್ಯಾಂ ನಮಃ ।**

(ಬಲ ಅಂಗೈಯಿಂದ ಎಡ ಅಂಗೈಯನ್ನು ತೀಡಿ, ಎಡ ಅಂಗೈಯಿಂದ ಬಲ ಅಂಗೈಯನ್ನು ತೀಡಿ ಬಲ ಅಂಗೈಯಿಂದ ಎಡ ಮುಂಗೈಯನ್ನು ಎಡ ಅಂಗೈಯಿಂದ ಬಲ ಮುಂಗೈಯನ್ನು ತೀಡಬೇಕು.)

ಅಂಗನ್ಯಾಸ ಮಾಡಬೇಕು.

**ತತ್ಸವಿತುಃ ಹೃದಯಾಯ ನಮಃ**

(ಹೆಬ್ಬೆರಳು ಒಳಗಿಟ್ಟು ಬಲಗೈ ಮುಷ್ಟಿಯಿಂದ ಹೃದಯವನ್ನು ಮುಟ್ಟಬೇಕು.)

**ವರೇಣ್ಯಂ ಶಿರಸೇ ಸ್ವಾಹಾ**

(ಹೆಬ್ಬೆರಳ ತುದಿಯನ್ನು ತೋರುಬೆರಳಿನ ತುದಿಗಿಟ್ಟು [ಉಳಿದ ಬೆರಳುಗಳನ್ನು ಮಡಚಿಟ್ಟು] ನೊಸಲಿನ ತುದಿಗೆ ತಾಗಿಸಬೇಕು).

## ತರ್ಪಣ

ಸಂಧ್ಯಾವಂದನೆಯಲ್ಲಿ ಸೂರ್ಯಾರ್ಘ್ಯಪ್ರದಾನದ ಬಳಿಕ ತರ್ಪಣಗಳನ್ನು ನೀಡುವುದಿದೆ. ಇದು ಮುಂದೆ ನಡೆಸುವ ಗಾಯತ್ರೀಜಪದ ಅಂಗವಾಗಿರುವುದು. ಗಾಯತ್ರೀಪ್ರತಿಪಾದ್ಯರಾದ ಕೇಶವಾದಿ ೨೪ ಭಗವದ್ರೂಪಗಳಿಗೆ ತರ್ಪಣ ನೀಡಲಾಗುವುದು. ಆದರೆ ಕೆಲವರು ಪಕ್ಷಭೇದದಿಂದ ೧೨ ತರ್ಪಣ ಮಾತ್ರ ನೀಡುವರು. ಇದಕ್ಕೆ ಸ್ಪಷ್ಟವಾದ ಪ್ರಮಾಣವಿರದು. ದ್ವಾದಶ ಊರ್ಧ್ವಪುಂಡ್ರ ಧಾರಣೆಯಲ್ಲಿ ಈ ಪಕ್ಷಭೇದ ವ್ಯವಸ್ಥೆಯಿರುವುದು. ಅದರ ಭ್ರಾಂತಿಯಿಂದ ಇಲ್ಲಿ ಕೆಲವರು ೧೨ ತರ್ಪಣ ನೀಡುವ ವ್ಯವಸ್ಥೆ ಮಾಡಿಕೊಂಡದ್ದು ಸರಿಯಿರದು. ಪ್ರತಿನಿತ್ಯ ೨೪ ತರ್ಪಣಗಳನ್ನು ನೀಡಬೇಕು. ಅಷ್ಟೆ ಅಲ್ಲದೆ ಗಾಯತ್ರೀಪದ ಪ್ರತಿಪಾದ್ಯ ಮತ್ಸ್ಯಾದಿಗಳಿಗೂ ತರ್ಪಣವನ್ನು ನೀಡಬೇಕು. ಜತೆಯಲ್ಲಿ ಪ್ರಣವ ಹಾಗೂ ವ್ಯಾಹೃತಿ ಪ್ರತಿಪಾದ್ಯಗಳಾದ ಭಗವದ್ರೂಪಗಳಿಗೂ ತರ್ಪಣ ನೀಡುವ ಕ್ರಮ ಇದೆ. ಹಾಗೆಯೆ ಗಾಯತ್ರಿಯ ಅಮುಖ್ಯ ದೇವತೆಗಳಾದ ಅಗ್ನ್ಯಾದಿಗಳಿಗೂ ತರ್ಪಣ ನೀಡಬೇಕು.

— *ಉಡುಪಿ ರಾಮನಾಥ ಆಚಾರ್ಯ*

**ಭರ್ಗೋ ದೇವಸ್ಯ ಶಿಖಾಯೈ ವಷಟ್**

(ಹೆಬ್ಬೆರಳು ಹೊರಗಿಟ್ಟು ಮುಷ್ಟಿಯನ್ನು ತಲೆಯ ಶಿಖಾಸ್ಥಾನದಲ್ಲಿ ಹಿಡಿಯಬೇಕು)

**ಧೀಮಹಿ ಕವಚಾಯ ಹುಮ್**

(ಬಲ ಅಂಗೈಯಿಂದ ಎಡ ತೋಳನ್ನು, ಎಡ ಅಂಗೈಯಿಂದ ಬಲತೋಳನ್ನೂ ಸವರುವುದು)

**ಧಿಯೋ ಯೋ ನಃ ನೇತ್ರಾಭ್ಯಾಂ ವೌಷಟ್**

(ನಡು ಹಾಗೂ ತೋರುಬೆರಳುಗಳಿಂದ ಕಣ್ಣೆರಡನ್ನು ಸ್ಪರ್ಶಿಸುವುದು, ಉಳಿದ ಬೆರಳು ಮಡಚಿರಬೇಕು)

**ಪ್ರಚೋದಯಾತ್ ಅಸ್ತ್ರಾಯ ಫಟ್**

(ಚಪ್ಪಾಳೆ ತಟ್ಟುವುದು) (ಅಕ್ಷರನ್ಯಾಸ ಮಾಡುವ ಕ್ರಮವೂ ಇದೆ)

(ಧ್ಯಾನ ಮಾಡಬೇಕು)

ಮಂತ್ರಪ್ರತಿಪಾದ್ಯನ ರೂಪವನ್ನು ಧ್ಯಾನಮಾಡಲು ಅನುವಾಗುವಂತೆ ಧ್ಯಾನ ಶ್ಲೋಕದ ಪಾಠ ಹೀಗಿದೆ:

## ಗಾಯತ್ರೀಯಿಂದ ಸೂರ್ಯನಲ್ಲಿ ಪೂಜೆ

ಭಾಗವತದಲ್ಲಿ (೧೧-೧೧-೪೨,೪೩) ಶ್ರೀಕೃಷ್ಣನು **"ಸೂರ್ಯೋಽಗ್ನಿರ್ಬ್ರಾಹ್ಮಣೋ......"** ಎಂಬುದಾಗಿ ತನ್ನ ಆರಾಧನೆಯ ಹನ್ನೊಂದು ಪ್ರತೀಕಗಳನ್ನು ಉಲ್ಲೇಖಿಸಿ, ಅವುಗಳ ಮಾಧ್ಯಮದಲ್ಲಿ ನಡೆಸಬಹುದಾದ ಬಗೆಬಗೆಯ ಆರಾಧನೆಯನ್ನೂ ತಿಳಿಸಿರುವನು.

ಅವುಗಳಲ್ಲಿ ಮೊದಲ ಪ್ರತೀಕವಾಗಿ ಉಲ್ಲೇಖಿಸಲ್ಪಟ್ಟದ್ದು ಸೂರ್ಯಮಂಡಲ- ಅದರಲ್ಲಿ ನಡೆಸಬಹುದಾದ ಆರಾಧನೆ -**"ಸೂರ್ಯೇ ತು ವಿದ್ಯಯಾ ತ್ರಯ್ಯಾ....."** ಎಂದಿರುವಂತೆ ತ್ರಯೀ ವಿದ್ಯೆಯ ಚಿಂತನೆ.

ಸಾಮಾನ್ಯವಾಗಿ 'ತ್ರಯೀ ವಿದ್ಯೆ' ಎಂದು ಪ್ರಸಿದ್ಧವಾಗಿರುವಂತಹದ್ದು ಮೂರು ವೇದಗಳು. ಆದರೆ ಸೂರ್ಯಮಂಡಲಕ್ಕೂ ವೇದಗಳಿಗೂ ಸಂಬಂಧವು ಸ್ಪಷ್ಟವಾಗಿರದ ಪ್ರಯುಕ್ತ ಮೂರು ವೇದಗಳಿಗೂ ಮೂಲವಾಗಿರುವ ತ್ರಿಪಾದಾತ್ಮಕವಾದ ಗಾಯತ್ರೀಮಂತ್ರವನ್ನೇ ತ್ರಯೀ ವಿದ್ಯೆ ಎಂದಿಟ್ಟುಕೊಳ್ಳಬೇಕು. ಪ್ರಣವ, ವ್ಯಾಹೃತಿ, ಗಾಯತ್ರಿ -ಎಂದು ಮೂರು ಭಾಗಗಳನ್ನು ಹೊಂದಿರುವುದರಿಂದ ಅಥವಾ ತ್ರಿಪಾದಾತ್ಮಕವಾಗಿರುವುದರಿಂದ ಗಾಯತ್ರಿಯು 'ತ್ರಯೀ' ಎನಿಸಬಹುದಾಗಿದೆ. ಗಾಯತ್ರಿಯು ಸೂರ್ಯಮಂಡಲದ ಸೂರ್ಯನಾರಾಯಣನನ್ನೇ ಪ್ರತಿಪಾದಿಸುತ್ತಿರುವುದರಿಂದ ಅಂತಹ ತ್ರಯೀ ವಿದ್ಯೆಯ ಮೂಲಕ ಸೂರ್ಯಮಂಡಲದ ಪ್ರತೀಕದಲ್ಲಿ ಸೂರ್ಯನಾರಾಯಣಾತ್ಮಕನಾದ ತನ್ನ ಆರಾಧನೆಯನ್ನು ನಡೆಸಬೇಕೆಂದು ಶ್ರೀಕೃಷ್ಣನ ಸಂದೇಶ ತುಂಬ ಔಚಿತ್ಯಪೂರ್ಣ ಎನಿಸುವುದು.

-ಶ್ರೀ ವಿದ್ಯಾಧೀಶತೀರ್ಥರು

ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ
ನಾರಾಯಣಃ ಸರಸಿಜಾಸನಸನ್ನಿವಿಷ್ಟಃ ।
ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ
ಹಾರೀ ಹಿರಣ್ಮಯವಪುರ್ಧೃತಶಂಖಚಕ್ರಃ ॥

ಮಧ್ವಾಂತರ್ಗತಶ್ರೀಸವಿತೃನಾಮಕನಾರಾಯಣಪ್ರೀತಯೇ ಸಂಧ್ಯಾಂಗಗಾಯತ್ರೀ ಜಪತರ್ಪಣಮಹಂ ಕರಿಷ್ಯೇ ॥

## ಗಾಯತ್ರೀಮಂತ್ರ:

**ಓಂ । ಭೂರ್ಭುವಃಸ್ವಃ । ತತ್ಸವಿತುರ್ವರೇಣ್ಯಂ । ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥**

ಗಾಯತ್ರೀಜಪವನ್ನು ನಡೆಸಿದ ಬಳಿಕ 'ಓಂ ಗಾಯತ್ರೀಂ ತರ್ಪಯಾಮಿ' ಎಂದು ನೀರಿನಿಂದ ತರ್ಪಣ ನೀಡಬೇಕು. ಬಲ ಅಂಗೈ ಮಧ್ಯಕ್ಕೆ ನೀರನ್ನು ಎಡಗೈಯಿಂದ ಉದ್ಧರಣೆಯ ಮೂಲಕ ಹಾಕಬೇಕು. (ಗಾಯತ್ರೀಮಂತ್ರ ಹೇಳಿ ತರ್ಪಯಾಮಿ ಎಂದರೂ ಆದೀತು.)

ಅನೇನ ಗಾಯತ್ರೀಮಂತ್ರಜಪತರ್ಪಣಕರಣೇನ ಮಧ್ವಾಂತರ್ಗತಶ್ರೀಸವಿತೃನಾಮಕನಾರಾಯಣಃ ಪ್ರೀಯತಾಮ್ ॥

ಶ್ರೀಕೃಷ್ಣಾರ್ಪಣಮಸ್ತು

*

### ಪ್ರಾಣಾಯಾಮದಲ್ಲಿ ಋಷ್ಯಾದಿನ್ಯಾಸ

ಪ್ರಾಣಾಯಾಮ ಓಂಕಾರ, ವ್ಯಾಹೃತಿ, ಗಾಯತ್ರಿಗಳಿಂದ ಘಟಿತವಾಗಿರುವುದರಿಂದ, ಪ್ರಾಣಾಯಾಮ ಮಾಡುವ ಮುಂಚೆ ವ್ಯಾಹೃತ್ಯಾದಿಗಳಿಗೂ ಸಂಬಂಧಪಡುವಂತೆ ಋಷ್ಯಾದಿಗಳನ್ನು ಸ್ಮರಿಸಿಕೊಳ್ಳಬೇಕು.

ಪ್ರಣವಸ್ಯ ಪರಬ್ರಹ್ಮ ಋಷಿಃ, ಪರಮಾತ್ಮಾದೇವತಾ, ದೇವೀಗಾಯತ್ರೀಛಂದಃ । ಸಪ್ತವ್ಯಾಹೃತೀನಾಂ ವಿಶ್ವಾಮಿತ್ರಜಮದಗ್ನಿಭರದ್ವಾಜಗೌತಮಾತ್ರಿವಸಿಷ್ಠಕಾಶ್ಯಪಾಃ ಋಷಯಃ, ಅಗ್ನಿವಾಯುಸೂರ್ಯಬೃಹಸ್ಪತಿವರುಣೇಂದ್ರವಿಶ್ವೇದೇವಾಃ ದೇವತಾಃ, ಗಾಯತ್ರ್ಯುಷ್ಣಿಗನುಷ್ಟುಬ್‌ಬೃಹತೀಪಂಕ್ತಿತ್ರಿಷ್ಟುಬ್ಜಗತ್ಯಃ ಛಂದಾಂಸಿ ॥ ಗಾಯತ್ರೀ ಮಂತ್ರಸ್ಯ ವಿಶ್ವಾಮಿತ್ರ ಋಷಿಃ, ಸವಿತೃನಾಮಕಲಕ್ಷ್ಮೀನಾರಾಯಣೋ ದೇವತಾ, ಗಾಯತ್ರೀ ಛಂದಃ ॥ ಶಿರಸಃ ಪ್ರಜಾಪತಿಋಷಿಃ, ಅನುಷ್ಟುಪ್‌ಛಂದಃ, ಪಂಚರೂಪೀ ಪರಮಾತ್ಮಾ ದೇವತಾ ॥ — *ಸಂಪಾದಕರು.*

* * *

# ಓಂಕಾರ ಮತ್ತು ಗಾಯತ್ರಿ

ಎ. ಹರಿದಾಸ ಭಟ್ಟ

ಗಾಯತ್ರೀಮಂತ್ರದೊಂದಿಗೆ ಎಷ್ಟು ಪ್ರಣವ ಓಂಕಾರವನ್ನು ಉಚ್ಚರಿಸಬೇಕು? 'ಪ್ರವತಿ ಅನೋಂಕೃತಂ ಬ್ರಹ್ಮ' ಎಂಬ ಪ್ರಮಾಣದಂತೆ ಆದಿಯಲ್ಲಿ ಮತ್ತು ಅಂತ್ಯದಲ್ಲಿ –ಹೀಗೆ ಎರಡು ಓಂಕಾರ ಎಂದು ಸಾಮಾನ್ಯ ಉತ್ತರ. ಆದರೆ ಆಗ್ನೇಯಪುರಾಣ ಓಂಕಾರದ ಸಂಖ್ಯೆಯ ಆಧಾರದಿಂದ ಗಾಯತ್ರಿಯನ್ನು ಮೂರು ವಿಭಾಗಿಸಿದೆ –'ಏಕೋಂಕಾರಾ ಸಂಪುಟಾ ಚ ಷಡೋಂಕಾರೇತಿ ಸಾ ತ್ರಿಧಾ' ಒಂದು ಓಂಕಾರ, ಎರಡು ಓಂಕಾರ ಮತ್ತು ಆರು ಓಂಕಾರ –ಹೀಗೆ ಮೂರು ವಿಧದ ಗಾಯತ್ರೀ. ವ್ಯಾಸಸ್ಮೃತಿ ಮೊದಲನೇ ಪ್ರಕಾರದ ಗಾಯತ್ರಿಯನ್ನು ಹೀಗೆ ತಿಳಿಸಿದೆ–

**ಪೂರ್ವೋಂಕಾರವ್ಯಾಹೃತಿಯುಗಂತೇ ಚಾಪ್ರಣವಾ ಹಿ ಯಾ ।**
**ಸೈಕಪ್ರಣವಗಾಯತ್ರೀ ಕೀರ್ತಿತಾ ತು ಮನೀಷಿಭಿಃ ॥**

ಈ ಗಾಯತ್ರಿಯ ಪ್ರಾರಂಭದಲ್ಲಿ ಒಂದು ಓಂಕಾರ. ಆಮೇಲೆ ವ್ಯಾಹೃತಿ. ಅನಂತರ ಗಾಯತ್ರಿ. ಮತ್ತೆ ಓಂಕಾರವಿಲ್ಲ.

ಸಂಪುಟೋಂಕಾರಗಾಯತ್ರಿಯನ್ನು ಯೋಗಯಾಜ್ಞವಲ್ಕ್ಯದಲ್ಲಿ ವಿವರಿಸಿದೆ–

**ಓಂಕಾರಂ ಪೂರ್ವಮುಚ್ಚಾರ್ಯ ಭೂರ್ಭುವಸ್ಸ್ವಸ್ತಥೈವ ಚ ।**
**ಗಾಯತ್ರೀಂ ಪ್ರಣವಂ ಚಾಂತೇ ಗಾಯತ್ರೀ ಸಂಪುಟಾ ಸ್ಮೃತಾ ॥**

ಷಡೋಂಕಾರಗಾಯತ್ರೀ ಸ್ವರೂಪ ಹೀಗೆ–

**ತಿಸ್ರೋ ವ್ಯಾಹೃತಯಃ ಪೂರ್ವಂ ಪೃಥಗೋಂಕಾರಸಂಯುತಾಃ ।**
**ಪೂರ್ವಂ ಪುನಃ ವ್ಯಾಹೃತೀನಾಂ ಮಂತ್ರಸ್ಯಾದ್ಯಂತಯೋಸ್ತಥಾ ॥**

ಓಂ ಓಂ ಭೂಃ ಓಂ ಭುವಃ ಓಂ ಸ್ವಃ ಓಂ ತತ್ ಸವಿತುಃ ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ಓಂ ॥

ಇಲ್ಲಿ ಯಾವ ಗಾಯತ್ರಿಯನ್ನು ಯಾರು ಜಪಿಸಬೇಕೆಂದು ಆಗ್ನೇಯ ಪುರಾಣ ಹೇಳುತ್ತದೆ–

**ಆದ್ಯೋಂಕಾರಾ ಗೃಹಸ್ಥಸ್ಯ ವರ್ಣಿನಶ್ಚ ನ ಚೇತರೇ ।**
**ವಾನಪ್ರಸ್ಥಯತೀನಾಂ ತು ಷಡೋಂಕಾರಾ ಪ್ರಶಸ್ಯತೇ ॥**

ಗೃಹಸ್ಥ, ಬ್ರಹ್ಮಚಾರಿಗಳಿಗೆ ಗಾಯತ್ರಿಯೊಂದಿಗೆ ಆರಂಭದ ಒಂದು ಓಂಕಾರ ಮಾತ್ರ. ವಾನಪ್ರಸ್ಥರಿಗೆ, ಯತಿಗಳಿಗೆ ಸಂಪುಟೋಂಕಾರ ಗಾಯತ್ರಿ. ಷಡೋಂಕಾರ

ಗಾಯತ್ರಿಯ ಜಪವೂ ಅವರಿಗೆ ಪ್ರಶಸ್ತ. ಸ್ಮೃತ್ಯರ್ಥಸಾಗರವೂ ಈ ವ್ಯವಸ್ಥೆಯನ್ನು ತಿಳಿಸಿ ಎರಡು ಓಂಕಾರವನ್ನು ಗೃಹಸ್ಥ ಉಚ್ಚರಿಸಿದರೆ ಅನರ್ಥವನ್ನು ಹೇಳಿದೆ–

**ತತ್ರೈಕಪ್ರಣವಾ ಗ್ರಾಹ್ಯಾ ಗೃಹಸ್ಥೈಃ ಬ್ರಹ್ಮಚಾರಿಭಿಃ ।**
**ಗೃಹಸ್ಥೋ ಬ್ರಹ್ಮಚಾರೀ ಚ ಪ್ರಣವಾದ್ಯಾಮಿಮಾಂ ಜಪೇತ್ ॥**
**ಅಂತೇ ಯಃ ಪ್ರಣವಂ ಕುರ್ಯಾತ್ ನಾಸೌ ವೃದ್ಧಿಮವಾಪ್ನುಯಾತ್ ।**
**ಸಂಪುಟಾಂ ಚ ಷಡೋಂಕಾರಾಂ ಗಾಯತ್ರೀಂ ತು ಜಪೇದ್ಯತಿಃ ॥**

ಆದ್ದರಿಂದ ಗೃಹಸ್ಥ, ಬ್ರಹ್ಮಚಾರಿಗಳ ಜಪದ ಗಾಯತ್ರೀಸ್ವರೂಪ–

**ಓಂ ಭೂರ್ಭುವಃ ಸ್ವಃ ತತ್ಸವಿತುಃ ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥**

*

## ಆಶೌಚದಲ್ಲಿ ಗಾಯತ್ರೀಜಪ

**ಸೂತಕೇ ಮೃತಕೇ ಕುರ್ಯಾತ್ ಪ್ರಾಣಾಯಾಮತ್ರಯಂ ನರಃ ।**
**ತಥಾ ಮಾರ್ಜನಮಂತ್ರಾಂಸ್ತು ಮನಸೋಚ್ಚಾರ್ಯ ಮಾರ್ಜಯೇತ್ ।**
**ಗಾಯತ್ರೀಂ ಸಮ್ಯಗುಚ್ಚಾರ್ಯ ಸೂರ್ಯಾಯಾರ್ಘ್ಯಂ ನಿವೇದಯೇತ್ ।**

ಜಾತಾಶೌಚ–ಮೃತಾಶೌಚದ ಸಂದರ್ಭದಲ್ಲಿ ಪ್ರಾಣಾಯಾಮ ಮಾಡಬೇಕು. ಮಾರ್ಜನಮಂತ್ರವನ್ನು ಮನಸ್ಸಲ್ಲೇ ಹೇಳಿ ಪ್ರೋಕ್ಷಣೆ ಮಾಡಿಕೊಳ್ಳಬೇಕು. ಗಾಯತ್ರಿಯನ್ನು ಸ್ಪಷ್ಟವಾಗಿ ಉಚ್ಚಾರಣೆ ಮಾಡಿ ಸೂರ್ಯಾರ್ಘ್ಯವನ್ನು ನೀಡಬೇಕು.

**ಅರ್ಘ್ಯಾಂತಾ ಮಾನಸೀ ಸಂಧ್ಯಾ ಅರ್ಘ್ಯಮಾತ್ರಂ ಸಮಂತ್ರಕಮ್ ।**
**ನೋ ಮಂತ್ರವಿಧಿರುಚ್ಚಾರ್ಯೋ ನೋಪಸ್ಥಾನಂ ನ ವೈ ಜಪಃ ॥**

ಸೂರ್ಯಾರ್ಘ್ಯದ ವರೆಗೆ ಮನಸ್ಸಲ್ಲೇ ಸಂಧ್ಯಾವಂದನೆಯ ಘಟಕಗಳನ್ನು ಪೂರೈಸಿ, ಸೂರ್ಯಾರ್ಘ್ಯವನ್ನು ಮಂತ್ರಸಹಿತವಾಗಿ ನೀಡಬೇಕು. ಮುಂದೆ ಮಂತ್ರವಿಧಿ, ಜಪ, ದಿಗುಪಸ್ಥಾನ ಯಾವುದೂ ಇಲ್ಲ.

ಹೀಗೆಂದು ಹೇಳಿ, "'ಸ್ಮೃತ್ಯರ್ಥಸಾಗರ'ದಲ್ಲಿ 'ಕ್ವಚಿತ್ತು ಅರ್ಘ್ಯಾನಂತರಂ ಮನಸಾ ದಶವಾರಂ ಗಾಯತ್ರೀಸ್ಮರಣಮಪ್ಯುಕ್ತಮ್" –ಕೆಲವು ಧರ್ಮಶಾಸ್ತ್ರಗ್ರಂಥಗಳಲ್ಲಿ ಸೂರ್ಯಾರ್ಘ್ಯ ನೀಡಿದ ಬಳಿಕ ಹತ್ತು ಬಾರಿ ಮನಸ್ಸಿನಲ್ಲೇ ಗಾಯತ್ರೀಸ್ಮರಣೆಯನ್ನು ವಿಧಿಸಲಾಗಿದೆ ಎಂದು ಉಲ್ಲೇಖಿಸಲಾಗಿದೆ.

** ** **

# ಗಾಯತ್ರಿಯ ಸುತ್ತಮುತ್ತ

———————————— ಉಡುಪಿ ರಾಮನಾಥ ಆಚಾರ್ಯ

**ವಿಧಾನ:**

ಪ್ರಾತಸ್ತಿಷ್ಠನ್ ಜಪೇದ್ದೇವೀಂ ಸಾಯಂ ಚೈವೋಪವಿಶ್ಯ ಚ ।
ಉಪವಿಶ್ಯ ತು ಮಧ್ಯಾಹ್ನೇ ಪ್ರಾಙ್ಮುಖೋ ಜಪಮಾಚರೇತ್ ॥

ಬೆಳಗ್ಗೆ ನಿಂತು ಗಾಯತ್ರೀಜಪ ಮಾಡಬೇಕು. ಮಧ್ಯಾಹ್ನ ಹಾಗೂ ಸಾಯಂಕಾಲ ಕುಳಿತುಕೊಂಡೇ ಗಾಯತ್ರೀಜಪ ಮಾಡಬೇಕು. ಪೂರ್ವದಿಕ್ಕಿಗೆ ಮುಖಮಾಡಿ ಜಪಿಸಬೇಕು.

* * * * *

ಅಷ್ಟೋತ್ತರಶತಂ ನಿತ್ಯಮಷ್ಟಾವಿಂಶತಿರೇವ ವಾ ।
ವಿಧಿನಾ ದಶಕಂ ವಾಪಿ ತ್ರಿಕಾಲಂ ಪ್ರಜಪೇದ್ಬುಧಃ ॥

ಪ್ರತಿದಿನ ಮೂರೂ ಹೊತ್ತು ಮಂತ್ರಾರ್ಥವನ್ನು ತಿಳಿದು ವಿಧ್ಯುಕ್ತವಾಗಿ ಗಾಯತ್ರಿಯನ್ನು ನೂರ ಎಂಟು ಬಾರಿ ಅಥವಾ ಇಪ್ಪತ್ತೆಂಟು ಬಾರಿ ಅಥವಾ ಹತ್ತು ಬಾರಿಯಾಗಲಿ ಜಪಿಸಬೇಕು.

ನೂರು, ನೂರೊಂದರಂತೆ ನೂರೆಂಟೂ ಜಪದ ಸಂಖ್ಯೆಯೆ ಆಗಿದೆ. ನಾರಾಯಣಾಷ್ಟೋತ್ತರಶತನಾಮರೂಪಗಳೆ ಈ ಸಂಖ್ಯೆಯ ರೂಪಗಳು. ಜತೆಗೆ ೨೮ ಎನ್ನುವುದು ಗಾಯತ್ರಿಯಲ್ಲಿಯ ಸಂಖ್ಯೆಯೆ ಆಗಿದೆ. ವ್ಯಾಹೃತಿಯ ಅಕ್ಷರಗಳ ಸಂಖ್ಯೆಗನುಗುಣವಾಗಿ ವಾಸುದೇವಾದಿ ನಾಲ್ಕು ರೂಪಗಳ ಜತೆಯಲ್ಲಿ ಕೇಶವಾದಿ ೨೪ ಧ್ಯೇಯರೂಪಗಳು ಸೇರಿದಾಗ ೨೮ ಆಗುವುದು. ಹತ್ತು ಎನ್ನುವುದು ಮತ್ಸ್ಯಾದಿ ರೂಪಗಳ ಅನುಸಂಧಾನದಲ್ಲಿ ಬಂದಿದೆ.

* * * * *

ಗೃಹೇ ತ್ವೇಕಗುಣಾ ಸಂಧ್ಯಾ ಗೋಷ್ಠೇ ದಶಗುಣಾ ಸ್ಮೃತಾ ।
ಶತಸಾಹಸ್ರಿಕಾ ನದ್ಯಾಂ ಅನಂತಾ ವಿಷ್ಣುಸನ್ನಿಧೌ ॥

ಮನೆಯಲ್ಲಿ ಮಂತ್ರ ಜಪಿಸಿದಾಗ ಬರುವ ಫಲಕ್ಕಿಂತ ಹತ್ತು ಪಟ್ಟು ಹೆಚ್ಚು ಫಲ ಹಟ್ಟಿಯಲ್ಲಿ ಮಾಡಿದ ಜಪಕ್ಕೆ ದೊರೆಯುವುದು. ನದೀತೀರದ ಜಪ ಸಾವಿರ ಪಾಲು ಮಿಗಿಲು. ದೇವಾಲಯದಲ್ಲಿ ಮಾಡಿದ ಜಪ ಅನಂತಫಲವನ್ನು ನೀಡುವುದು.

ಗಾಯತ್ರೀಮಂತ್ರವು ವಿಷ್ಣುವನ್ನೇ ಪ್ರತಿಪಾದಿಸುವುದರಿಂದ ಇತರ ದೇವತೆಗಳ ಮಂದಿರದಲ್ಲಿಗಿಂತ ಹೆಚ್ಚು ಪ್ರಶಸ್ತವಾದದ್ದು ವಿಷ್ಣುದೇವಾಲಯದಲ್ಲಿ ಮಾಡುವ ಜಪ ಎಂದು ಸೂಚಿಸಲು ಇಲ್ಲಿ 'ವಿಷ್ಣುಸನ್ನಿಧಾನ'ದಲ್ಲಿ ಎಂದು ಹೇಳಿದ್ದಾರೆ.

* * * * *

**ವಾಚಿಕಶ್ಚ ಉಪಾಂಶುಶ್ಚ ಮಾನಸಸ್ತ್ರಿವಿಧಃ ಸ್ಮೃತಃ ।**
**ತ್ರಯಾಣಾಂ ಜಪಯಜ್ಞಾನಾಂ ಶ್ರೇಯಾನ್ ಸ್ಯಾದುತ್ತರೋತ್ತರಃ ।**

*–ನೃಸಿಂಹಪುರಾಣ*

ಬಾಯಿಬಿಟ್ಟು (ಇನ್ನೊಬ್ಬರಿಗೆ ಕೇಳುವಂತೆ) ಮಂತ್ರ ಜಪಿಸುವುದು 'ವಾಚಿಕ' ಎನಿಸುವುದು. ತುಟಿ ನಲುಗಿದಂತೆ ಜಪಿಸುವುದು (ಮೆಲ್ಲಗೆ) 'ಉಪಾಂಶು'. ಮನಸ್ಸಿನಲ್ಲೇ ಹೇಳುವುದು ಮಾನಸ'. ವಾಚಿಕ ಕ್ರಮಕ್ಕಿಂತ ಉಪಾಂಶು ಶ್ರೇಷ್ಠ. ಉಪಾಂಶು ಕ್ರಮಕ್ಕಿಂತ ಮಾನಸ ಜಪಕ್ರಮ ಉತ್ತಮ.

ಐತರೇಯ ಉಪನಿಷತ್ತು ಉಪಾಂಶುಜಪಕ್ಕೆ ವಾಯುದೇವ ಅಭಿಮಾನಿ ದೇವತೆಯಾದ್ದರಿಂದ ವಾಚಿಕಜಪಕ್ಕಿಂತ ಉಪಾಂಶುಜಪ ಶ್ರೇಷ್ಠ ಎಂದು ಅಭಿಪ್ರಾಯಪಟ್ಟಿದೆ– **"ಯದುಪಾಂಶು ಸ ಪ್ರಾಣಃ"**

* * * * *

**ಪಂಚಾವಸಾನಗಾಯತ್ರೀ ಪಂಚಪಾತಕನಾಶಿನೀ ।**
**ಪಂಚಾವಸಾನರಹಿತಾ ಪಂಚಪಾತಕದಾಯಿನೀ ॥**

ಪ್ರಣವದಲ್ಲೊಮ್ಮೆ, ವ್ಯಾಹೃತಿಗಳಲ್ಲೊಮ್ಮೆ, ಮೂರು ಪಾದಗಳಲ್ಲಿ ಮೂರು ಬಾರಿ ಹೀಗೆ ಐದು ಕಡೆ ನಿಲ್ಲಿಸಿ(ತಡೆದು) ಗಾಯತ್ರೀಮಂತ್ರ ಜಪಿಸಿದರೆ ಪಂಚ ಮಹಾಪಾತಕಗಳು ಪರಿಹಾರವಾಗುತ್ತವೆ. ಐದು ಕಡೆ ನಿಲ್ಲಿಸದೆ ಒಮ್ಮೆಲೆ ಒಟ್ಟಿಗೆ ಉಚ್ಚರಿಸಿದರೆ ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಉತ್ತಮ ಸ್ತ್ರೀಧರ್ಷಣ ಹಾಗೂ ಪಾತಕಿಗಳ ಸಹವಾಸ ಎನ್ನುವ ಐದು ಪಾಪ ಮಾಡಿದಂತಾಗುವುದು.

'ಪಂಚಶೀರ್ಷಾ' –ಎಂದು ಗಾಯತ್ರಿಯನ್ನು ಕರೆಯುವುದು ಈ ಅರ್ಥದ ಹಿನ್ನೆಲೆಯಲ್ಲೇ.

* * * * *

## ಗಾಯತ್ರ್ಯಾಃ ತ್ರಿಗುಣಂ – ಪಂಚಗುಣಮ್?

ನಾರಾಯಣಾಷ್ಟಾಕ್ಷರವನ್ನು ಗಾಯತ್ರೀಜಪದ ಮೂರರಷ್ಟು ಪ್ರತಿನಿತ್ಯ ಮೂರು ಹೊತ್ತು ಜಪಿಸಬೇಕು. ಗಾಯತ್ರೀಜಪ ಹತ್ತು ಮಾಡಿದ್ದರೆ ನಾರಾಯಣಾಷ್ಟಾಕ್ಷರಜಪ ೩೦ ಮಾಡಬೇಕು. ಇದಕ್ಕೆ ಪ್ರಮಾಣವಿದೆ. ಆದರೆ ಗಾಯತ್ರೀಜಪದ ಐದರಷ್ಟು ಶಿವ ಪಂಚಾಕ್ಷರ ಜಪಿಸಲೇಬೇಕೆಂದು ಪ್ರಮಾಣವಿರದು. ಉಳಿದ ಮಂತ್ರಗಳನ್ನು ಯಥಾಶಕ್ತಿ ಜಪಿಸಿದರಾಯಿತು. ನಿತ್ಯಜಪದಲ್ಲಿ ಉಳಿದ ಮಂತ್ರಗಳಿಗೆ ಸಂಖ್ಯಾ ನಿರ್ಬಂಧವಿರದು.

— ಗೋವಿಂದದಾಸ.

ನ್ಯಾಸಹೀನೇ ಹರೇದಾಯುಃ ಧ್ಯಾನಹೀನೇ ತು ನಿಷ್ಫಲಮ್ ।
ಋಷಿಹೀನೇ ಮಹಾವ್ಯಾಧಿಃ ಭವತ್ಯೇವ ನ ಸಂಶಯಃ ।

–ನಾರದೀಯ ಪುರಾಣ

ಗಾಯತ್ರೀಮಂತ್ರಜಪದ ಜತೆಯಲ್ಲಿ ಋಷಿಛಂದಸ್‌ದೇವತೆಗಳನ್ನು ಹೇಳಬೇಕು. ಧ್ಯಾನ ಮಾಡಬೇಕು. ಅಕ್ಷರನ್ಯಾಸ, ಅಂಗನ್ಯಾಸಗಳನ್ನು ಮಾಡಬೇಕು. ಇಲ್ಲವಾದಲ್ಲಿ ಫಲ ದೊರಕದು. ಅನರ್ಥವೂ ಆಗುವುದು.

* * * * *

ಅಸಂಖ್ಯಾತಂ ತು ಯಜ್ಜಪ್ತಂ ತತ್ಸರ್ವಂ ಸ್ಯಾನ್ನಿರರ್ಥಕಮ್ ।
ಲೆಕ್ಕಮಾಡದೆ ಜಪಿಸಿದ್ದು ಲೆಕ್ಕಕ್ಕಿಲ್ಲ; ಫಲಪ್ರದವಲ್ಲ.
ಆಚ್ಛಾದ್ಯ ವಾಸಸಾ ಹಸ್ತೌ ದಕ್ಷಿಣೇನ ಸದಾ ಜಪೇತ್ ।

ಕೈಗಳನ್ನು ಒಣ ಬಟ್ಟೆಯಿಂದ ಮುಚ್ಚಿಕೊಂಡು ಬಲಗೈಯಿಂದ ಜಪಮಾಡಬೇಕು.

* * * * *

ಹಸ್ತೌ ನಾಭಿಸಮೌ ಕೃತ್ವಾ ಪ್ರಾತಃ ಸಂಧ್ಯಾಜಪಂ ಚರೇತ್ ।
ಹೃತ್ಸಮೌ ತು ಕರೌ ಮಧ್ಯೇ ಸಾಯಂ ಮುಖಸಮೌ ಕರೌ ॥

ಬೆಳಗ್ಗೆ ಗಾಯತ್ರೀಜಪ ಮಾಡುವಾಗ ಕೈಗಳು ನಾಭಿಯ ಎದುರಾಗಿರಬೇಕು. ಮಧ್ಯಾಹ್ನ ಹೃದಯದೆದುರು, ಸಾಯಂಕಾಲ ಮುಖದೆದುರು.

* * * * *

## ಯಾಜ್ಞವಲ್ಕ್ಯರ ಜಪವಿಧಾನ

ಧ್ಯಾಯೇತ್ತು ಮನಸಾ ಮಂತ್ರಂ ಜಿಹ್ವೋಷ್ಠೌ ನ ವಿಚಾಲಯೇತ್ ।
ನ ಕಂಪಯೇತ್ ಶಿರೋ ಗ್ರೀವಾಂ ದಂತಾನ್ನೈವ ಪ್ರಕಾಶಯೇತ್ ॥
ಯಕ್ಷರಕ್ಷಃಪಿಶಾಚಾಶ್ಚ ಸಿದ್ಧವಿದ್ಯಾಧರಾ ಗಣಾಃ ।
ಯಸ್ಮಾತ್ ಪ್ರಭಾವಂ ಗೃಹ್ಣಂತಿ ತಸ್ಮಾದ್ ಗುಹ್ಯಂ ತು ಕಾರಯೇತ್ ॥

ಮಾನಸಿಕವಾಗಿ ಮಂತ್ರವನ್ನೂ, ಮಂತ್ರಾರ್ಥವನ್ನೂ ಚಿಂತಿಸಬೇಕು. ನಾಲಗೆ, ತುಟಿಗಳನ್ನು ಅಲ್ಲಾಡಿಸಬಾರದು. ತಲೆಯನ್ನು ಕಂಪಿಸಬಾರದು. ಕುತ್ತಿಗೆಯನ್ನು ಅಲ್ಲಾಡಿಸಬಾರದು. ಹಲ್ಲುಗಳನ್ನು ತೋರಿಸಬಾರದು. ಯಕ್ಷರು, ರಾಕ್ಷಸರು –ಹೀಗೆ ದುಷ್ಟಶಕ್ತಿಗಳು ಗಾಯತ್ರೀಮಂತ್ರಜಪದ ಪ್ರಭಾವವನ್ನು ಕಸಿದುಕೊಂಡಾರು. ಹಾಗಾಗದಂತೆ ಆದಷ್ಟು ರಹಸ್ಯವಾಗಿ ಜಪಿಸಬೇಕು ಎಂದು ಯಾಜ್ಞವಲ್ಕ್ಯರು ಮಂತ್ರದ ಜಪವಿಧಾನವನ್ನು ತಿಳಿಸಿರುವರು.

**ವಿನಿಯೋಗ:**

**ತದೋಂಕಾರೇಣಾಚಮನಂ ಯದ್ವಾ ವ್ಯಾಹೃತಿಭಿರ್ಭವೇತ್ ।**
**ಸಾವಿತ್ರ್ಯಾ ವಾಽಪಿ ಕರ್ತವ್ಯಂ ಯದ್ವಾಽಕಾರ್ಯಮಮಂತ್ರಕಮ್ ॥**

*-ಸ್ಮೃತ್ಯರ್ಥಸಾರ.*

ಆಚಮನವನ್ನು ಪ್ರಣವದಿಂದ ಅಥವಾ ವ್ಯಾಹೃತಿಮಂತ್ರಗಳಿಂದ ಯಾ ಗಾಯತ್ರೀಮಂತ್ರದಿಂದ ಮಾಡಬೇಕು. ಮಂತ್ರವಿಲ್ಲದೆ ಆಚಮನಮಾಡಲು ಕೆಲವು ಸಂದರ್ಭಗಳಲ್ಲಿ ಹೇಳಿದ್ದುಂಟು.

ಯತಿಗಳಿಗೆ ಓಂಕಾರದಿಂದ, ಸ್ತ್ರೀಶೂದ್ರರಿಗೆ ಅಮಂತ್ರಕವಾಗಿ ಎಂದು ವಿಶೇಷ ಪ್ರಮಾಣವಿದೆ.

* * * * *

**ಯಜ್ಞೋಪವೀತಂ ಕುರ್ವೀತ ನವತಂತುಸಮನ್ವಿತಮ್ ।**
**ಸಾವಿತ್ರ್ಯಾಃ ದಶಕೃತ್ವೋಽದ್ಭಿರ್ಮಂತ್ರಿತಾಭಿಸ್ತದುಕ್ಷಯೇತ್ ॥**

ಒಂಭತ್ತು ದಾರದಿಂದ ಮಾಡಿದ ಉಪವೀತಕ್ಕೆ ಹತ್ತು ಬಾರಿ ಗಾಯತ್ರೀ ಮಂತ್ರ ಹೇಳಿ ಅಭಿಮಂತ್ರಿಸಿದ ನೀರನ್ನು ಪ್ರೋಕ್ಷಿಸಬೇಕು.

ಯಜ್ಞೋಪವೀತಧಾರಣೆಯ ಸಂದರ್ಭದಲ್ಲಿ ಹೊಸ ಉಪವೀತವನ್ನು ಮುಟ್ಟಿಕೊಂಡು ಗಾಯತ್ರೀಮಂತ್ರವನ್ನು ಜಪಿಸಬೇಕು. ಆ ಸಂದರ್ಭದಲ್ಲಿ ಮೂರೆಳೆಯ ಉಪವೀತಕ್ಕೆ ಮೂರು ವೇದದಿಂದ ರೂಪುಗೊಂಡ ಪ್ರಣವ ಮತ್ತು ವ್ಯಾಹೃತಿ ಹಾಗೂ ಗಾಯತ್ರಿಯನ್ನು ಹೇಳುವ ಕ್ರಮ. ಇಲ್ಲಿ ಅಷ್ಟಾಕ್ಷರವನ್ನು ಜಪಿಸಲೇಬೇಕೆಂಬ ನಿಯಮವಾಕ್ಯ ಇಲ್ಲ. ಯಾವ ಮಂತ್ರಗಳನ್ನು ಯೋಗ್ಯತಾಸಿದ್ಧಿ ಗಾಗಿ ಮುಟ್ಟಿಕೊಂಡು ಜಪಿಸಬಹುದು.

* * * * *

## ಬಲಗೈಯನ್ನು ಬಟ್ಟೆಯಿಂದ ಮುಚ್ಚಿಕೊಳ್ಳಬೇಕು

**ವಸ್ತ್ರೇಣಾಚ್ಛಾದ್ಯ ತು ಕರಂ ದಕ್ಷಿಣಂ ಯಃ ಸದಾ ಜಪೇತ್ ।**
**ತಸ್ಯ ಸ್ಯಾತ್ ಸಫಲಂ ಜಾಪ್ಯಂ ತದ್ಧೀನಮಫಲಂ ಸ್ಮೃತಮ್ ॥**

'ವೃದ್ಧಮನು' ತಿಳಿಸುವಂತೆ ಬಲಗೈಯನ್ನು ಬಟ್ಟೆಯಿಂದ ಮುಚ್ಚಿಕೊಂಡು ಜಪಿಸಬೇಕು. ಅಂತಹವನ ಜಪ ಸಫಲ ಆಗುವುದು. ಇಲ್ಲದಿದ್ದಲ್ಲಿ ವಿಫಲ ಎನಿಸುವುದು.

ಸವ್ಯಾಹೃತಿಂ ಸಪ್ರಣವಾಂ ಗಾಯತ್ರೀಂ ಶಿರಸಾ ಸಹ ।
ತ್ರಿಃ ಪಠೇದಾಯತಃಪ್ರಾಣಃ ಪ್ರಾಣಾಯಾಮಃ ಸ ಉಚ್ಯತೇ ॥
–ಅಗ್ನಿಪುರಾಣ.

ಓಂ ಭೂಃ ಓಂ ಭುವಃ ಓಂ ಸುವಃ ಓಂ ಮಹಃ ಓಂ ಜನಃ ಓಂ ತಪಃ ಓಂ ಸತ್ಯಂ । ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್ । ಓಂ ಆಪೋ ಜ್ಯೋತೀರಸೋಽಮೃತಂ ಬ್ರಹ್ಮ ಭೂರ್ಭುವಃಸ್ವರೋಮ್ ॥

ಈ ಮಂತ್ರವನ್ನು ಮೂರುಬಾರಿ ಕುಂಭಕಾವಸ್ಥೆ(ಮೂಗು ಮುಚ್ಚಿ ಹಿಡಿದು) ಯಲ್ಲಿ ಹೇಳಿದಾಗ 'ಪ್ರಾಣಾಯಾಮ' ಎನಿಸುವುದು.

"ಗಾಯತ್ರ್ಯಾ ದಶತಾರಕೈಃ" ಎಂದು ಆಚಾರ್ಯಮಧ್ವರ ತಂತ್ರಸಾರ ಸಂಗ್ರಹದ ವಾಕ್ಯ ಇದಕ್ಕೆ ಪೂರಕವಾಗಿದೆ.

ಸೂತಕೇ ಮೃತಕೇ ವಾಪಿ ಪ್ರಾಣಾಯಾಮಮಮಂತ್ರಕಮ್

ಆಶೌಚದಲ್ಲಿ ಪ್ರಾಣಾಯಾಮ ಮಾಡುವಾಗ ಮಂತ್ರ ಹೇಳಲಿಕ್ಕಿಲ್ಲ.

* * * * *

## ಸೂರ್ಯಾರ್ಘ್ಯ ನೀಡುವ ಭಂಗಿ

ಈಷನ್ನಮ್ರಃ ಪ್ರಭಾತೇ ತು ಮಧ್ಯಾಹ್ನೇ ಋಜುಸಂಸ್ಥಿತಃ ।
ದ್ವಿಜೋಽರ್ಘ್ಯಂ ಪ್ರಕ್ಷಿಪೇದ್ದೇವ್ಯಾ ಸಾಯಂ ತೂಪವಿಶನ್ ಭುವಿ ॥

ಶೌನಕರು ತಿಳಿಸುವಂತೆ ಬೆಳಗ್ಗೆ ಸ್ವಲ್ಪ ಬಾಗಿ, ಮಧ್ಯಾಹ್ನ ನೇರವಾಗಿ ನಿಂತು, ಸಾಯಂಕಾಲ ಕುಳಿತುಕೊಂಡು ಸೂರ್ಯಾರ್ಘ್ಯವನ್ನು ನೀಡಬೇಕು.

** ** **

## ಕಾಲಾತೀತತೆಯ ಪ್ರಾಯಶ್ಚಿತ್ತವಾಗಿ ಗಾಯತ್ರೀಜಪ

ಸಂಧ್ಯಾಕಾಲೇ ತ್ವತಿಕ್ರಾಂತೇ ಸ್ನಾತ್ವಾಽಽಚಮ್ಯ ಯಥಾ ವಿಧಿ ।
ಜಪೇದಷ್ಟಶತಂ ದೇವೀಂ ತತಃ ಸಂಧ್ಯಾಂ ಸಮಾಚರೇತ್ ॥

ಸಂಧ್ಯಾಕಾಲ ಮುಗಿದುಹೋದಮೇಲೆ ಜಪ ಮಾಡುವುದಾದರೆ ಮೊದಲು ನೂರೆಂಟು ಬಾರಿ ಗಾಯತ್ರಿಯನ್ನು ಜಪಿಸಿ (ಪ್ರಾಯಶ್ಚಿತ್ತವಾಗಿ) ಮತ್ತೆ ಸಂಧ್ಯಾವಂದನೆ ಮಾಡಬೇಕು.

— *ಸಂಗ್ರಹ: ಗೋವಿಂದದಾಸ*

ಕರಾಭ್ಯಾಂ ತೋಯಮಾದಾಯ ಗಾಯತ್ರ್ಯಾ ಚಾಭಿಮಂತ್ರಿತಮ್ ।
ಆದಿತ್ಯಾಭಿಮುಖಸ್ತಿಷ್ಠನ್ ತ್ರಿರೂರ್ಧ್ವಮಥ ತತ್ ಕ್ಷಿಪೇತ್ ॥

ಬೊಗಸೆತುಂಬ ನೀರು ತುಂಬಿಕೊಂಡು ಗಾಯತ್ರೀಮಂತ್ರ ಹೇಳಿ ಸೂರ್ಯ ನೆಡೆಗೆ ಮುಖಮಾಡಿ ನಿಂತು ಮೇಲಕ್ಕೆ ಮೂರುಬಾರಿ ಅರ್ಘ್ಯ ನೀಡಬೇಕು.

ನದಿ ಸರೋವರದ ಬಳಿ ಅರ್ಘ್ಯ ನೀಡುವಾಗ ಗೋಶೃಂಗದಂತೆ ಕೈಗಳನ್ನೆತ್ತಿ ಅರ್ಘ್ಯ ನೀಡಬೇಕೆಂದು ಇತರ ಪ್ರಮಾಣವಾಕ್ಯಗಳು ತಿಳಿಸಿವೆ.

* * * * *

ಗಾಯತ್ರ್ಯಾ ಜಲಮಾದಾಯ ದಶಕೃತ್ವೋಽಭಿಮಂತ್ರ್ಯ ಚ ।
ಶಿರಶ್ಚಾಂಗಾನಿ ಸರ್ವಾಣಿ ಪ್ರೋಕ್ಷಯೇತ್ತೇನ ವಾರಿಣಾ ।
ಸ್ನಾನಂ ಗಾಯತ್ರಕಂ ನಾಮ ಸರ್ವಪಾಪಪ್ರಣಾಶನಮ್ ॥

ನೀರು ಹಿಡಿದುಕೊಂಡು ಹತ್ತುಬಾರಿ ಗಾಯತ್ರೀಮಂತ್ರ ಹೇಳಿ ಆ ನೀರನ್ನು ತಲೆಗೆ ಹಾಗೂ ದೇಹದ ಎಲ್ಲ ಕಡೆ ಪ್ರೋಕ್ಷಿಸಿದರೆ ಗಾಯತ್ರೀಸ್ನಾನ ಎನಿಸುವುದು. ಈ ಬಗೆಯ ಸ್ನಾನ ಎಲ್ಲ ಪಾಪವನ್ನು ಕಳೆಯುವುದು.

ಆಗ್ನೇಯ, ವಾರುಣ ಮುಂತಾದ ಹತ್ತಾರು ಬಗೆಯ ಸ್ನಾನಗಳಲ್ಲಿ ಮಂತ್ರಸ್ನಾನ ಎನ್ನುವುದಾಗಿ ಕರೆಯಲ್ಪಡುವ ಈ ಗಾಯತ್ರಸ್ನಾನ ವಿಶೇಷವಾಗಿ ಎಲ್ಲರಿಗೂ ವಿಹಿತವೇ. ಆದರೂ ರೋಗಿಗಳಿಗೆ, ನೀರಿನಿಂದ ಸ್ನಾನಮಾಡಲು ಅಶಕ್ತರಿಗೆ ಮುಖ್ಯವಾಗಿ ಜಪಾಧಿಕಾರ ಸಿದ್ಧಿಸಲು ಈ ಸ್ನಾನ ಬೇಕೇ ಬೇಕು.

* * * * *

ಅಶುಚಿರ್ವಾ ಶುಚಿರ್ವಾಪಿ ಕಾಲೇ ಸಂಧ್ಯಾಂ ಸಮಾಚರೇತ್ ।

ದೇಹ ಶುಚಿಯಾಗಿರಲಿ ಇಲ್ಲದಿರಲಿ ಕ್ಲಪ್ತ ಕಾಲದಲ್ಲಿ ಜಪಮಾಡಬೇಕು. ರೋಗಿಗೆ ಅಥವಾ ಪ್ರಯಾಣಿಕನಿಗೆ ಜಪಮಾಡಲು ಅನುಕೂಲವಿಲ್ಲದಿರಬಹುದು. ಆದರೂ ಮೈಲಿಗೆಯಲ್ಲೇ ಮಾನಸಜಪವನ್ನು ಮಾಡಬೇಕು.

ನಿರ್ಮಾಲ್ಯ ಹಿಡಿದು ಜಪಮಾಡಬೇಕೆಂದು ಸ್ಮೃತಿವಿಹಿತ ಪದ್ಧತಿ. ಆದರೆ ಕೆಲವೊಮ್ಮೆ ಉಪಕರಣಗಳ ಅಭಾವದಿಂದ ಜಪವನ್ನೇ ಬಿಡಬಾರದು. ಯಾವ್ಯಾವುದೇ ಕಾರಣಗಳಿಂದ ಜಪತ್ಯಾಗ ನಿಷಿದ್ಧ. "ಕುರ್ಯಾದನ್ಯನ್ನವಾ ಕುರ್ಯಾತ್ ಮೈತ್ರೋ ಬ್ರಾಹ್ಮಣ ಉಚ್ಯತೇ" ಗಾಯತ್ರೀಮಂತ್ರಜಪ ಬ್ರಾಹ್ಮಣ್ಯವನ್ನು ಉಳಿಸುವುದು–ಬೆಳೆಸುವುದು.

*

## ಅನ್ನಕ್ಕೆ ಅಭಿಮಂತ್ರಣ

'ಧರ್ಮಸಿಂಧು'ವಿನಲ್ಲಿ (ತೃತೀಯ ಪರಿಚ್ಛೇದ –ಸರ್ವಸಾಧಾರಣಭೋಜನಾದಿ ವಿಧಿಪ್ರಕರಣ) "...... ವ್ಯಾಹೃತಿಭಿರ್ಗಾಯತ್ರ್ಯಾ ಚಾಭಿಮಂತ್ರ್ಯ....." ಎಂಬುದಾಗಿ ಆಹಾರಪದಾರ್ಥಗಳನ್ನು ಸ್ವೀಕರಿಸುವ ಮುಂಚೆ ವ್ಯಾಹೃತಿ ಹಾಗೂ ಗಾಯತ್ರಿಯಿಂದ ಅಭಿಮಂತ್ರಣ ನಡೆಸಬೇಕೆಂದು ತಿಳಿಸಲಾಗಿದೆ.

# ಗಾಯತ್ರಿಯ ೨೪ ಮುದ್ರೆಗಳು

ಉಡುಪಿ ರಾಮನಾಥ ಆಚಾರ್ಯ

ವ್ಯಕ್ತಿಯೊಬ್ಬ ಮರುಹುಟ್ಟು ಪಡೆಯುವುದು ಆಧ್ಯಾತ್ಮಿಕಪ್ರಪಂಚದಲ್ಲಿ ಮಂತ್ರದೀಕ್ಷಿತನಾದಾಗ. ಆಗ ತಾಯಿ ಗಾಯತ್ರಿ, ತಂದೆ ಆಚಾರ್ಯ.

ಇಲ್ಲಿ ಛಂದಸ್ಸಿನ ಹೆಸರಿನಿಂದ ಗಾಯತ್ರಿ ಎಂದು ಕರೆದರೆ ವಿನಾ ಹೆಣ್ಣು ದೇವತೆ ಎನ್ನುವ ಅಭಿಪ್ರಾಯದಿಂದಲ್ಲ. ಮಂತ್ರಸ್ವರೂಪವನ್ನು ಲಕ್ಷಣದಲ್ಲಿ ತಿಳಿಸಿದ್ದೇ ಹೊರತು ಮಂತ್ರದೇವತೆಯ ರೂಪವನ್ನಲ್ಲ. ೨೪ ಅಕ್ಷರದ ಮಂತ್ರಕ್ಕೆ ವೈದಿಕವಾದ ಹೆಸರು ಗಾಯತ್ರೀ ಎಂದು. ಅಂತಹ ಮಂತ್ರಗಳು ಸಾವಿರಾರು ಇದ್ದರೂ ಪ್ರಸಿದ್ಧವಾದ 'ತತ್ಸವಿತುರ್ವರೇಣ್ಯಂ' ಎನ್ನುವ ಮಂತ್ರವನ್ನು ಗಾಯತ್ರಿ ಎಂದು ಗುರುತಿಸಿದರು. ಹತ್ತಾರು ಗೀತೆಗಳಿದ್ದರೂ 'ಗೀತೆ' ಎಂದು ಪ್ರಸಿದ್ಧಿಯಿರುವುದು ಭಗವದ್ಗೀತೆಯೊಂದಕ್ಕೆ ತಾನೆ.

ಇದು ದೇವರ ಮಂತ್ರ ಎನ್ನಲು ಆ ಮಂತ್ರದೊಳಗಿನ 'ದೇವಸ್ಯ' ಎಂಬ ಪದವೆ ಸಾಕ್ಷಿ. ಉಳಿದ ವಿಶೇಷಣಗಳು ಅವನ ಸೃಷ್ಟಿಕರ್ತೃತ್ವವನ್ನು ಸರ್ವನಿಯಮನಶಕ್ತಿಯನ್ನು ಸರ್ವೋತ್ತಮತೆಯನ್ನು ಬಣ್ಣಿಸುತ್ತವೆ. ದೇವರ ಮೊದಲ ಪ್ರತಿಮೆಯಾಗಿ ಸೂರ್ಯನನ್ನು ಸಾಧಕರು ಗುರುತಿಸಿದ್ದಾರೆ. ಇದು ದೇಹದ ಒಳಗೂ–ಹೊರಗೂ ಅನ್ವಯಿಸುವ ಪ್ರತೀಕ. ಸೂರ್ಯನ ಪ್ರತೀಕದಲ್ಲಿ ಉಪಾಸನೆಗೆ ಈ ಗಾಯತ್ರಿಯನ್ನು ಬಳಸಿದ್ದಾರೆ. ಅದಕೆಂದೆ ಇಲ್ಲಿ 'ಸವಿತೃನಾರಾಯಣ' ಪ್ರತಿಪಾದ್ಯ. ಸವಿತೃಮಂಡಲ ಮಧ್ಯವರ್ತಿಯಾದ ನಾರಾಯಣನೆ ಮನುಜರಿಂದ ಧ್ಯೇಯ ಎಂದು ನೃಸಿಂಹಪುರಾಣ ಸಾರಿದೆ.

ಭೀಷ್ಮರು ಕೊನೆಯ ಕಾಲದಲ್ಲಿ ಕಳಕಳಿಯಿಂದ ಸಂದೇಶವೊಂದನ್ನು ನೀಡಿದ್ದಾರೆ –ಏನಾದರೂ ಮಾಡಿ–ಬಿಡಿ, ಗಾಯತ್ರೀಜಪ ಬಿಡಬೇಡಿ ಎಂದು. ಇದು ಇತಿಹಾಸ –ಪುರಾಣಗಳಲ್ಲಿ, ಸ್ಮೃತಿ–ತಂತ್ರಗಳಲ್ಲಿ ಸಾದರಪಡಿಸಿರುವ ಮಾತು.

ವಹ್ನಿಪುರಾಣದಲ್ಲಂತು ಗಾಯತ್ರೀಕಲ್ಪ ಎಂಬ ಪ್ರಕರಣದಲ್ಲಿ ಇದರ ಅಪೂರ್ವ ಮಾಹಿತಿ ಸಿಗುವುದು. ಸೂರ್ಯಪ್ರತೀಕದಲ್ಲಿ ಉಪಾಸನೆಯಿಂದ ಉತ್ತಮ ಗತಿಯನ್ನು ಹೇಳುತ್ತಾ ಮುಕ್ತಿಯನ್ನು ಪಡೆಯುವ ತಂತ್ರಗಾರಿಕೆಯನ್ನು ಪದ್ಮಪುರಾಣ ಬಣ್ಣಿಸಿದೆ–

**ವಾಚ್ಯವಾಚಕಸಂಬಂಧೋ ಗಾಯತ್ರ್ಯಾಃ ಸವಿತುರ್ದ್ವಯೋಃ ।**
**ವಾಚ್ಯೋಽಸೌ ಸವಿತಾ ಸಾಕ್ಷಾತ್ ಗಾಯತ್ರೀ ವಾಚಿಕಾ ಪರಾ ॥**
**ತಾಂ ದೇವೀಮುಪತಿಷ್ಠಂತೇ ಬ್ರಾಹ್ಮಣಾ ಯೇ ಜಿತೇಂದ್ರಿಯಾಃ ।**
**ಸೂರ್ಯಲೋಕಂ ತೇ ಪ್ರಯಾಂತಿ ಕ್ರಮಾನ್ಮುಕ್ತಿಶ್ಚ ಪಾರ್ಥಿವ ॥**

ಮುಖ್ಯವಾಗಿ ಸವಿತಾ ಎನಿಸಿಕೊಳ್ಳುವ ದೇವ ಗಾಯತ್ರೀಮಂತ್ರವಾಚ್ಯ ಎಂದು ಇಲ್ಲಿ ಸ್ಪಷ್ಟವಾಗಿ ತಿಳಿಯಬಹುದು. ಇದು ಗೀತೆ ಹೇಳುವ ಉತ್ತರಾಯಣ ಮಾರ್ಗದ ವಿಷಯವನ್ನು ತಿಳಿಸಿದೆ.

ಅರ್ಥಚಿಂತನೆಯಲ್ಲಿ ಶಬ್ದನಿರ್ವಚನವನ್ನು ವಹ್ನಿಪುರಾಣ ಹೀಗೆ ಹೇಳಿದೆ–

**ಗಾಯಂತಂ ತ್ರಾಯತೇ ಯಸ್ಮಾತ್ ಗಾಯತ್ರೀ ತ್ವಂ ತತಃ ಸ್ಮೃತಾ**

**'ಗಾಯತಿ ತ್ರಾಯತಿ ಚ'** ಎಂದು ಉಪನಿಷತ್ ತಿಳಿಸಿಕೊಡುತ್ತದೆ.

**'ಗಾಯತಿ ತ್ರಾತಿ ಗಾಯಕಾನ್'** ಎಂದು ಗೀತಾತಾತ್ಪರ್ಯದಲ್ಲಿದೆ.

**'ತ್ರಿಕಾಲೇಷು ಗೀಯತೇ ಯತಃ'** ಎನ್ನುವುದೂ ಆಚಾರ್ಯಮಧ್ವರ ಭಾಷ್ಯ.

ಇದಕ್ಕೆ ಪ್ರಮಾಣವಾಗಿ ವಹ್ನಿಪುರಾಣ ವಿಸ್ತಾರವಾಗಿ ಹೇಳಿದೆ–

**ದೈವತಂ ಸವಿತಾ ತ್ವಸ್ಯಾ ಗಾಯತ್ರಂ ಛಂದ ಏವಚ ।**
**ವಿಶ್ವಾಮಿತ್ರ ಋಷಿಶ್ಚೈವ ಪ್ರೋಚ್ಯತೇ ಋಷಿಸತ್ತಮ ॥**
**ಗಾಯತ್ರೀಂ ಜಪತೇ ಯಸ್ತು ತ್ರಿಕಾಲಂ ಬ್ರಾಹ್ಮಣಃ ಸದಾ ॥**

ಮೂರು ಸಂಧ್ಯಾಕಾಲದಲ್ಲೂ ಗಾಯತ್ರಿ ಜಪಮಾಡಬೇಕು. ಆಗ ಮಾತ್ರವೆ ೨೪ ಗಂಟೆ ನಮ್ಮ ದೇಹ ಶಕ್ತಿಯುತವಾಗಿರಬಲ್ಲುದು. ಒಂದು ಶಬ್ದ ಉಚ್ಚಾರಣೆಯಿಂದ ಮುಖ್ಯವಾದ ೭೨ ಸ್ನಾಯುಗಳು ಕೆಲಸ ಮಾಡುತ್ತವೆ. ಒಟ್ಟು ೭೨,೦೦೦ ನಾಡಿಗಳು ನಮ್ಮ ದೇಹದಲ್ಲಿವೆ. ೨೪ ಅಕ್ಷರದ ಗಾಯತ್ರಿಯನ್ನು ಹೊತ್ತಿಗೊಂದು ಸಾವಿರದಂತೆ ಪಠಿಸಿದಾಗ ೭೨,೦೦೦ ಅಕ್ಷರ ಹೇಳಿದಂತಾಗುವುದು. ೭೨,೦೦೦ ನಾಡಿಗಳ ಪ್ರಚೋದನೆ ಇಲ್ಲಿದೆ. ನಾವು ಬದುಕುವ ಹಗಲು–ರಾತ್ರಿಗಳ ಸಂಖ್ಯೆಯೂ ೭೨,೦೦೦. ಇದು ಸಾಧಕನೊಬ್ಬನ ಬದುಕುವ ತಂತ್ರವೆನಿಸಿದೆ.

'ತ್ರೀಣಿ ಗೀಯತೇ ಅತ್ರ' ಎಂದೂ ಗಾಯತ್ರಿಯ ಅರ್ಥವೆ. ಇಲ್ಲಿ ಮೂರಿದೆ. ಜಡ–ಜೀವ ಮತ್ತು ಈಶ್ವರ. 'ಧೀಯಃ, ನಃ, ಯಃ'. ನಮ್ಮ ಬುದ್ಧಿಯನ್ನು ಪ್ರೇರಣೆಗೈಯಲಿ ಎನ್ನುವಲ್ಲಿ ಪ್ರೇರಿಸುವವನು ದೇವನು, ನಾವು ಜೀವರು. ನಮ್ಮ ಬುದ್ಧಿ ಜಡವಾದ್ದು. ಹೀಗೆ ವೇದಗಳ ಸಾರವಾದ ವೇದಮಾತೆಯೆನಿಸಿದ ಗಾಯತ್ರಿ ಪ್ರಪಂಚವನ್ನು, ಪ್ರಪಂಚದೊಳಗಿನ ಈ ಮೂರನ್ನು ಹೊತ್ತಿದೆ.

ಮಂತ್ರದ ೨೪ ಅಕ್ಷರಗಳು ಪ್ರತಿಯೊಬ್ಬನ ದೇಹದ ೨೪ ತತ್ತ್ವಗಳನ್ನು ಮಿಡಿಯುತ್ತವೆ.

ಷಡಧ್ವಗಳಲ್ಲಿನ ಮಂತ್ರಾಧ್ವದಲ್ಲಿ ಗಾಯತ್ರೀಮಂತ್ರ ಸೇರಿಲ್ಲ. ಇದು ಮೊದಲಿನ ತತ್ತ್ವಾಧ್ವದಲ್ಲೆ ಅಂತರ್ಭೂತವಾಗಿದೆ.

ಜಪದ ಪೂರ್ಣಾಂಗವಾಗಿ ೨೪ ಮುದ್ರೆಗಳನ್ನೂ ತಿಳಿಸಿದ್ದಾರೆ. ಅವುಗಳ ಲಕ್ಷಣ ಬಹಳ ಅಪರೂಪವಾಗಿ ಅಲ್ಲಲ್ಲಿ ಕಂಡುಬರುತ್ತದೆ. ಮಂತ್ರಸಿದ್ಧಿ ಮುದ್ರೆಯಿಲ್ಲದೆ ಆಗಲಾರದೆನ್ನುವ ಮಾತೂ ಗಾಯತ್ರೀತಂತ್ರದಲ್ಲಿ ಹೇಳಲಾಗಿದೆ. ಮುದ್ರೆಗಳ ರಚನಾಕ್ರಮವನ್ನು ಸಾಧಕರಿಂದ ತಿಳಿಯಬೇಕು. ಚಿತ್ರವನ್ನಿಲ್ಲಿ ನೀಡಲಾಗಿದೆ.


1
ಸುಮುಖ


2
ಸಂಪುಟ


3
ವಿತತ


4
ವಿಸ್ತೃತ


5
ದ್ವಿಮುಖ


6
ತ್ರಿಮುಖ


7
ಚತುರ್ಮುಖ


8
ಪಂಚಮುಖ


9
ಷಣ್ಮುಖ


10
ಅಧೋಮುಖ


11
ವ್ಯಾಪಕಾಂಜಲಿ


12
ಶಕಟ


13
ಯಮಪಾಶ


14
ಗ್ರಂಥಿತ


15
ಸನ್ಮುಖೋನ್ಮುಖ


16
ಪ್ರಬಿಂಬ


17
ಮುಷ್ಟಿ


18
ಮತ್ಸ್ಯ


19
ಕೂರ್ಮ


20
ವರಾಹ


21
ಸಿಂಹಾಕ್ರಾಂತ


22
ಮಹಾಕ್ರಾಂತ


23
ಮುದ್ಗರ


24
ಪಲ್ಲವ

# ಗಾಯತ್ರಿಯ ೮ ಮುದ್ರೆಗಳು

ಉಡುಪಿ ರಾಮನಾಥ ಆಚಾರ್ಯ

ಪ್ರತಿನಿತ್ಯದ ಜಪದಲ್ಲಿ ಗಾಯತ್ರಿಜಪದ ಮೊದಲು 'ಸುಮುಖ' ಮುಂತಾದ ೨೪ ಮುದ್ರೆಗಳನ್ನು ರಚಿಸಿದಂತೆ ಕೊನೆಯಲ್ಲಿ ೮ ಮುದ್ರೆಗಳನ್ನು ನಡೆಸಬೇಕು. ಧೇನುಮುದ್ರೆ, ಜ್ಞಾನಮುದ್ರೆ, ವೈರಾಗ್ಯಮುದ್ರೆ, ಯೋನಿಮುದ್ರೆ, ಶಂಖಮುದ್ರೆ, ಪದ್ಮಮುದ್ರೆ, ಲಿಂಗಮುದ್ರೆ ಮತ್ತು ಸಂಹಾರಮುದ್ರೆ.

ಇಲ್ಲಿ ಎರಡೂ ಕೈಗಳಿಂದ ನಡೆಸುವ ಮುದ್ರೆಗಳನ್ನು ತಿಳಿಸಿದ್ದಾರೆ. ಆದುದ ರಿಂದ ಇಲ್ಲಿ ಇನ್ನೊಂದು ರೀತಿಯಲ್ಲಿ ಜ್ಞಾನವೈರಾಗ್ಯಮುದ್ರೆಗಳನ್ನು ಚಿತ್ರಿಸಲಾಗಿದೆ. ಧೇನುಮುದ್ರೆಯನ್ನು 'ಸುರಭಿಮುದ್ರೆ' ಎಂದೂ 'ಕಾಮಧೇನುಮುದ್ರೆ' ಎಂದೂ ಅಲ್ಲಲ್ಲಿ ಕರೆಯುವರು. ದನದ ನಾಲ್ಕು ಕೆಚ್ಚಲಿನಂತೆ ಕಾಣಿಸಿಕೊಳ್ಳುವುದು ಧೇನು ಮುದ್ರೆ –ಪರಸ್ಪರವಾಗಿ ನಡುಬೆರಳನ್ನು ತೋರುಬೆರಳಿಗೆ, ಉಂಗುರಬೆರಳನ್ನು ಕಿರುಬೆರಳಿಗೆ ತಾಗಿಸಬೇಕು.

ನಮ್ಮ ಮೋರೆಗೆ ಇದಿರಾಗಿ ಕಿರುಬೆರಳೆರಡು ಪರಸ್ಪರ ಕೂಡಿರುವಂತೆ ಕೈಗಳನ್ನು ಅಗಲಿಸಿ ಹಿಡಿದಿರಬೇಕು. ಕಿರುಬೆರಳ ಬೆನ್ನಲ್ಲೆ ಉಂಗುರಬೆರಳು ತಾಗಿ ನಿಲ್ಲುವಂತೆ ನಡೆಸಬೇಕು. ಆ ನಾಲ್ಕು ಬೆರಳನ್ನು ಸಮಾನಾಂತರವಾದ ಅಂಗೈಯಲ್ಲಿ ನೇರವಾಗಿರುವಂತೆ ನೋಡಿಕೊಳ್ಳಬೇಕು. ಹೆಬ್ಬೆರಳ ತುದಿಗಳನ್ನು ಕಿರುಬೆರಳ ಬುಡದಲ್ಲಿಡಬೇಕು. ಸಮಾನಾಂತರವಾಗಿರುವ ಬಲಗೈಯ ನಡುಬೆರಳನ್ನು ಎಡ ಕೈಯ ತೋರುಬೆರಳಿಂದ ಹಿಡಿದಿರಬೇಕು. ಹೀಗೆಯೆ ಎಡಗೈಯ ನಡುಬೆರಳನ್ನು ಬಲಗೈಯ ತೋರುಬೆರಳಿನಿಂದ ಹಿಡಿಯಬೇಕು. ಇದು ಯೋನಿಮುದ್ರೆ.

ಚಿತ್ರದಲ್ಲಿ ತೋರಿಸಿರುವಂತೆ ಶಂಖಮುದ್ರೆ ಸಾಮಾನ್ಯವಾಗಿ ಎಲ್ಲೆಡೆ ಬಳಕೆ ಯಲ್ಲಿದೆ. ಇದನ್ನು ಮುದ್ರಾಪ್ರಕಾಶದಲ್ಲಿ ಕಾಣಬಹುದು.

ಎಡಕೈಯ ಹೆಬ್ಬೆರಳನ್ನು ಬಲಕೈ ಮುಷ್ಟಿಯೊಳಗೆ ತರಬೇಕು. ಬಲಹೆಬ್ಬೆರಳು ನೆಟ್ಟಗಿರಬೇಕು. ಎಡಕೈಯ ಉಳಿದ ಬೆರಳುಗಳು ಬಲಹೆಬ್ಬೆರಳಿಗೆ ಎದುರಾಗಿ ನೇರ ತಾಗಿಕೊಂಡು ಚಾಚಿರಬೇಕು. ಇದು ಶಂಖಮುದ್ರೆ ಎನಿಸುವುದು. ಇದರಲ್ಲಿಯ ಕ್ರಮವ್ಯತ್ಯಾಸ ಏನೂ ಇಲ್ಲದೆ ಕೈಗಳ ವ್ಯತ್ಯಾಸದಿಂದ ನಡೆಸುವ ಶಂಖಮುದ್ರೆ ಇನ್ನೊಂದು ರೀತಿಯದು. ಇದನ್ನು ತಂತ್ರಸಮುಚ್ಚಯ ತಿಳಿಸಿದೆ.

ಈ ಕ್ರಮದಲ್ಲಿ ಎಡಕೈ ಹೆಬ್ಬೆರಳು ನೇರವಾಗಿರುವುದು. ಬಲಕೈ ಹೆಬ್ಬೆರಳು ಮುಷ್ಟಿಯೊಳಗಿರುವುದು. ಇದು ಬಲಮುರಿಶಂಖ. ಮುದ್ರಾಪ್ರಕಾಶದಲ್ಲಿ ಹೇಳಿದ್ದು ಎಡಮುರಿ.

ಇನ್ನೊಂದು ಬಗೆಯಲ್ಲೂ ತಂತ್ರಸಮುಚ್ಚಯ ಕೊನೆಯಲ್ಲಿ ಶಂಖ ಮುದ್ರೆಯನ್ನು ತಿಳಿಸಿದೆ.

ಇಲ್ಲಿ ಬಲಹೆಬ್ಬೆರಳ ಜೊತೆಗೆ ತೋರುಬೆರಳೂ ನೆಟ್ಟಗಿರಬೇಕು. ಈ ಎರಡು ಬೆರಳುಗಳಿಗೆ ಎಡಕೈಯ ಹೆಬ್ಬೆರಳ ಹೊರತು ಉಳಿದ ನಾಲ್ಕು ಬೆರಳುಗಳು ಆನಿಸಿನಿಂತಾಗ ತುದಿ ಚೂಪಾದ ಶಂಖಾಕಾರ ಏರ್ಪಡುವುದು. ಇದು ಹೂವಿನ ಮೊಗ್ಗಿನಂತೆಯೂ ಕಾಣುವುದು.

ಎಲ್ಲ ತಂತ್ರಗ್ರಂಥಗಳೂ ಒಂದೇ ರೀತಿಯ ಪದ್ಮಮುದ್ರೆಯನ್ನು ತಿಳಿಸಿವೆ. ಮುಗಿದ ಕೈ ಅರಳಿದರೆ ಪದ್ಮಮುದ್ರೆಯಾಗುವುದು. ಹೆಬ್ಬೆರಳುಗಳೆರಡೂ ನಡುವೆ ಬರಬೇಕು. ಆಗ ಉಳಿದೆಂಟು ಬೆರಳುಗಳು ಎಂಟು ಎಸಳಿನ ಕಮಲವನ್ನು ಪ್ರತಿಬಿಂಬಿಸುತ್ತವೆ. ನಡುವಿನ ಬೆರಳುಗಳು ಪದ್ಮದ ಕೇಸರವನ್ನು ಪ್ರತಿನಿಧಿಸಿವೆ.

ಸಂಹಾರಮುದ್ರೆಯನ್ನು ನಿರ್ವಾಣಮುದ್ರೆ ಎಂದೂ ಕರೆಯುವರು.

ಲಿಂಗಮುದ್ರೆಯಲ್ಲಿ ಎಡಕೈಯ ಮೇಲೆ ಬಲಕೈ ಇಡುವುದು.

ಮುದ್ರಾರಚನೆಯನ್ನು ಬಲ್ಲವರಿಂದ ತಿಳಿಯಬೇಕು.

*

## ಸ್ರವತ್ಯನೋಂಕೃತಂ ಬ್ರಹ್ಮ..... ಸಾಪವಾದ ನಿಯಮ

'ಸ್ರವತ್ಯನೋಂಕೃತಂ ಬ್ರಹ್ಮ ' ಪರಸ್ತಾಚ್ಚ ವಿಶೀರ್ಯತೇ' -ಎಂಬ ನಿಯಮವು ಓಂಕಾರಪೂರ್ವಕವಾಗಿ ಇಲ್ಲದಿದ್ದಲ್ಲಿ ಬ್ರಹ್ಮವಿದ್ಯೆಯು ಸೋರಿಹೋಗುವುದು; ಕೊನೆಯಲ್ಲಿ ಓಂಕಾರವನ್ನು ಉಚ್ಚರಿಸದಿದ್ದಲ್ಲಿ ಬ್ರಹ್ಮವಿದ್ಯೆ ನಾಶವಾಗಿ ಹೋಗುವುದೆಂದು ತಿಳಿಸುವುದು. ಆದರೆ ಈ ನಿಯಮವನ್ನು ಓಂಕಾರದ ವಿಷಯದಲ್ಲಿ ಅಳವಡಿಸಿಕೊಳ್ಳಲಾಗುವುದಿಲ್ಲ ಎಂದಮೇಲೆ ಇದು ಸಾಪವಾದ ನಿಯಮ ಎಂಬುದು ಸ್ಪಷ್ಟ. ಗಾಯತ್ರಿಯ ವಿಷಯದಲ್ಲೂ ಕೊನೆಯಲ್ಲಿ ಗೃಹಸ್ಥರು ಓಂಕಾರವನ್ನು ಉಚ್ಚರಿಸಬಾರದೆಂದು ನಿಷೇಧವಿರುವುದರಿಂದ ಈ ನಿಯಮ ಅನ್ವಯವಾಗುವುದಿಲ್ಲ. ಓಂಕಾರವು ಬ್ರಹ್ಮಚರ್ಯವನ್ನು ವಿಶೇಷವಾಗಿ ಅಪೇಕ್ಷಿಸುವುದರಿಂದ, ಬ್ರಹ್ಮಚರ್ಯಕ್ಕೆ ಹೆಚ್ಚು ಹೊಂದಿಕೆಯಾಗದ ಗೃಹಸ್ಥಧರ್ಮವನ್ನು ಪಾಲಿಸುವವರಿಗೆ ಓಂಕಾರದ ಉಚ್ಚಾರಣೆಯನ್ನು ಶಾಸ್ತ್ರಕಾರರು ಆದಷ್ಟು ಕಡಿಮೆಗೊಳಿಸಿರುವರು. ಆದ್ದರಿಂದ ಗೃಹಸ್ಥರು ಗಾಯತ್ರಿಯ ಕೊನೆಯಲ್ಲಿ ಓಂಕಾರವನ್ನು ಉಚ್ಚರಿಸಬಾರದು. — *ಬನ್ನಂಜೆ ಗೋವಿಂದಾಚಾರ್ಯ*

* * *

## ಜಪಸಂಖ್ಯೆ

**ಶ್ರಾದ್ಧೇ ಪ್ರದೋಷೇ ದರ್ಶೇ ಚ ಗಾಯತ್ರೀಂ ದಶಸಂಖ್ಯಯಾ ।**

**ಅಷ್ಟಾವಿಂಶತ್ಯನಧ್ಯಾಯೇ ಯಥೋಕ್ತಂ ಸುದಿನೇ ಜಪೇತ್ ॥**

— *ಸಂಗ್ರಹ: ಕಾಪು ಹಯಗ್ರೀವ ಆಚಾರ್ಯ.*



1
ಧೇನುಮುದ್ರೆ



2
ಜ್ಞಾನಮುದ್ರೆ



3
ವೈರಾಗ್ಯಮುದ್ರೆ



4
ಯೋನಿಮುದ್ರೆ



5
ಶಂಖಮುದ್ರೆ



6
ಪದ್ಮಮುದ್ರೆ



7
ಲಿಂಗಮುದ್ರೆ



8
ಸಂಹಾರಮುದ್ರೆ

# ಗಾಯತ್ರೀಹೋಮ

ಎ. ಕೃಷ್ಣರಾಜ ಉಪಾಧ್ಯಾಯ

ಗಾಯತ್ರೀಮಂತ್ರವು ಜಪ ಉಪಾಸನೆಗಳಲ್ಲಿ ಹೇಗೋ ಹಾಗೆಯೇ ಅನೇಕ ಹೋಮಗಳಲ್ಲೂ ವಿನಿಯೋಗಿಸಲ್ಪಡುವುದು.

ಗಾಯತ್ರೀವಿನಿಯೋಗ ಉಳ್ಳ ಕೆಲವು ಪ್ರಸಿದ್ಧ ಹೋಮಗಳು:

೧) ತಿಲಹೋಮ
೨) ಬ್ರಹ್ಮಕೂರ್ಚಹೋಮ
೩) ಭಾಗವತೋದ್ಯಾಪನಹೋಮ
೪) ಅಷ್ಟಮಹಾಮಂತ್ರಹೋಮ

### ತಿಲಹೋಮ:

ತಿಲವು ಅತ್ಯಂತ ಪವಿತ್ರವಾದ ದ್ರವ್ಯ –ದೇವತೆಗಳಿಗೆ, ಪಿತೃಗಳಿಗೆ ಪ್ರಿಯ· ಎನಿಸಿದೆ. ಹಾಗಾಗಿ ತಿಲದ್ರವ್ಯವು ವಿಶೇಷವಾಗಿ ಪಾಪಾಪಹಾರಕವೆನಿಸಿದೆ. ಅಗ್ನಿಮುಖದಲ್ಲಿ ತಿಲದ್ರವ್ಯವನ್ನು ತ್ಯಾಗಮಾಡುವುದರಿಂದ ಯಜಮಾನನ ಮತ್ತು ಅವನ ಪಿತೃಗಳ ಪಾಪವು ಪರಿಹಾರವಾಗುತ್ತದೆ. ಆದ್ದರಿಂದ ಸಪಿಂಡೀಕರಣವೇ ಮೊದಲಾದ ಪಿತೃಕಾರ್ಯದಲ್ಲಿ ಗಾಯತ್ರೀಮಂತ್ರದಿಂದ ತಿಲಹೋಮವನ್ನು ಮಾಡುತ್ತಾರೆ. ಪ್ರಮುಖ ಪ್ರಾಯಶ್ಚಿತ್ತಹೋಮವೆನಿಸಿದ ತಿಲಹೋಮದಲ್ಲಿ ಗಾಯತ್ರೀಪ್ರತಿಪಾದ್ಯ ಸವಿತೃನಾಮಕ ಲಕ್ಷ್ಮೀನಾರಾಯಣನೇ 'ಪ್ರಧಾನದೇವತೆ' ಎನಿಸಿದ್ದಾನೆ.

### ಬ್ರಹ್ಮಕೂರ್ಚಹೋಮ:

ವಿಷ್ಣ್ವಾದಿ ಸಪ್ತದೇವತೆಗಳು ಇಲ್ಲಿ ಪ್ರಧಾನರಾಗಿದ್ದರೂ ಸವಿತೃನಾಮಕ ಲಕ್ಷ್ಮೀನಾರಾಯಣನೇ ಈ ಹೋಮಕ್ಕೂ ದೇವತೆ ಎನಿಸಿದ್ದಾನೆ. ವಿಷ್ಣ್ವಾದಿ ಸಪ್ತದೇವತೆಗಳಿಗೆ ಇಲ್ಲಿ ಪಂಚಗವ್ಯ ಅಥವಾ ಆಜ್ಯದಿಂದ ಒಂದೊಂದು ಆಹುತಿ ಆದರೆ ಸವಿತೃನಾಮಕ ಲಕ್ಷ್ಮೀನಾರಾಯಣನಿಗೆ ಕೇವಲ ತುಪ್ಪದಿಂದ ಅಷ್ಟೋತ್ತರ ಶತ ಯಾ ಸಹಸ್ರ ಸಂಖ್ಯೆಯಲ್ಲಿ ಹೋಮವು ವಿಹಿತವಾಗಿದೆ.

### ಭಾಗವತೋದ್ಯಾಪನಹೋಮ:

ಈ ಹೋಮದಲ್ಲಿ ಅನೇಕ ಪ್ರಭೇದಗಳಿವೆ. ಬ್ರಹ್ಮಗಾಯತ್ರೀಮಂತ್ರವನ್ನೂ ಉಪಯೋಗಿಸಿ ಭಾಗವತೋದ್ಯಾಪನಹೋಮವನ್ನು ಮಾಡಬಹುದಾಗಿದೆ. ಬ್ರಹ್ಮ ಗಾಯತ್ರೀಮಂತ್ರದಿಂದ ಮಾಡುವ ಪಕ್ಷದಲ್ಲಿ ಅಶ್ವತ್ಥಸಮಿತ್–ಪಾಯಸ–ಆಜ್ಯ–ತಿಲ–ಮಧು–ದ್ರವ್ಯಗಳನ್ನು ಅಗ್ನಿಮುಖದಲ್ಲಿ ವಿವಕ್ಷಿತ ಸಂಖ್ಯೆಯಲ್ಲಿ ಹೋಮಿಸಿ ಭಾಗವತ ಸಪ್ತಾಹವನ್ನು ಸಾಂಗೋಪಾಂಗವನ್ನಾಗಿಸಬಹುದು.

**ಅಷ್ಟಮಹಾಮಂತ್ರಹೋಮ:**

ಬ್ರಹ್ಮಗಾಯತ್ರೀಮಂತ್ರವು ಅಷ್ಟಮಹಾಮಂತ್ರಗಳಲ್ಲಿ ಒಂದು ಎನಿಸಿದ ಪ್ರಯುಕ್ತ ಅಷ್ಟಮಹಾಮಂತ್ರಹೋಮದಲ್ಲೂ ಬ್ರಹ್ಮಗಾಯತ್ರಿಯ ವಿನಿಯೋಗವು ಇದೆ. ತಂತ್ರಸಾರೋಕ್ತ ವಿಧಾನದಿಂದ ದೇವತಾಪ್ರತಿಷ್ಠಾಪನಾದಿಗಳ ಕಾಲದಲ್ಲಿ ಪ್ರಾಯಶ್ಚಿತ್ತ ರೂಪದಲ್ಲಿ ಬ್ರಹ್ಮಗಾಯತ್ರೀಮಂತ್ರದಿಂದ ೧,೦೦೮, ೧೦,೦೦೮ ಮೊದಲಾದ ವಿವಕ್ಷಿತ ಸಂಖ್ಯೆಯಲ್ಲಿ ಅಗ್ನಿಮುಖದಲ್ಲಿ ತುಪ್ಪದ ಹೋಮವು ವಿಹಿತವಾಗಿದೆ.

ಬ್ರಹ್ಮಗಾಯತ್ರೀಮಂತ್ರಕ್ಕೆ ತುಂಬ ಪ್ರಭಾವವಿರುವುದರಿಂದ ಅದರ ಹೋಮದಿಂದ ಸತ್ಫಲಗಳು ದೊರಕುವವು. ಕೇವಲ ಭಗವಂತನ ಸಂತೃಪ್ತಿಗೋಸ್ಕರ ಮಾಡುವ ದ್ರವ್ಯತ್ಯಾಗದಿಂದ ಪುರುಷಾರ್ಥೋಪಯೋಗಿ ಭಗವದನುಗ್ರಹಪ್ರಾಪ್ತಿಯಾಗುತ್ತದೆ ಮತ್ತು ಯೋಗ್ಯತಾನುಸಾರಿಯಾಗಿ ಲೌಕಿಕ ಫಲಗಳೂ ಸಿದ್ಧಿಸುತ್ತವೆ.

ಜಪ ಉಪಾಸನೆ ಮಾಡುವಾಗ ಹೇಗೋ ಹಾಗೆಯೇ ಹೋಮಾದಿಗಳನ್ನು ನಡೆಸುವಾಗಲೂ ಗಾಯತ್ರೀಮಂತ್ರ ಪ್ರತಿಪಾದ್ಯನಾದ ಸೂರ್ಯಮಂಡಲ ಮಧ್ಯಸ್ಥನಾದ ಸೂರ್ಯನಾರಾಯಣನನ್ನೇ ಧ್ಯಾನಿಸಬೇಕು, ಚಿಂತಿಸಬೇಕು ಹೊರತು ಗಾಯತ್ರೀ ಎಂಬುದು ಸಾಮಾನ್ಯ ಸ್ತ್ರೀದೇವತೆ ಎಂದು ತಿಳಿದುಕೊಳ್ಳಬಾರದು. ನಮ್ಮ ಕರ್ಮಗಳಲ್ಲಿ ಅನುಸಂಧಾನವು ಹೆಚ್ಚಿದಂತೆ ಫಲಪ್ರಾಪ್ತಿಯು ಪ್ರತಿಶತದಲ್ಲಿ ಹೆಚ್ಚುತ್ತಾ ಹೋಗುತ್ತದೆ.

*

**ಬ್ರಹ್ಮಾಸ್ತ್ರದಲ್ಲಿ ಹಾಗೂ ಬ್ರಹ್ಮಶಿರೋಽಸ್ತ್ರದಲ್ಲಿ ಗಾಯತ್ರಿಯ ಬಳಕೆ**

**ವರ್ಣಾನಾಂ ಪ್ರಾತಿಲೋಮ್ಯೇನ ಬ್ರಹ್ಮಾಸ್ತ್ರಮಭಿಧೀಯತೇ ।**
**ಪಾದಾನಾಂ ಪ್ರಾತಿಲೋಮ್ಯೇನ ಬ್ರಹ್ಮಶೀರ್ಷಾಭಿಧಂ ಭವೇತ್ ॥**

ಗಾಯತ್ರೀಮಂತ್ರದ ಅಕ್ಷರಗಳಲ್ಲಿ ಪ್ರತಿಲೋಮವಾಗಿ (ಕೊನೆಯಿಂದ ಮೊದಲಿಗೆ) ಜಪಿಸಿದರೆ ಬ್ರಹ್ಮಾಸ್ತ್ರದ ಮಂತ್ರವಾಗುವುದು. ಮಂತ್ರದ ಪಾದಗಳನ್ನು ಹಿಂದು ಮುಂದಾಗಿ ಹೇಳಿದರೆ ಬ್ರಹ್ಮಶೀರ್ಷ ಎನ್ನುವ ಅಸ್ತ್ರವಾಗುವುದು.

*— ಉಡುಪಿ ರಾಮನಾಥ ಆಚಾರ್ಯ*

* * *

**ಪುರಶ್ಚರಣ**

ಸಿದ್ಧಿಗಾಗಿ ಗಾಯತ್ರೀಮಂತ್ರವನ್ನು ಅಕ್ಷರ ಲಕ್ಷ ಜಪಿಸಬೇಕು. ಅಂದರೆ ೨೪ ಲಕ್ಷ. 'ಕಲೌ ಚತುರ್ಗುಣಂ ಪ್ರೋಕ್ತಂ' ಎಂದಂತೆ ನಿಜವಾಗಿ ೯೬ ಲಕ್ಷ ಜಪಿಸಬೇಕಾಗುವುದು.

*— ಕಾಪು ಹಯಗ್ರೀವ ಆಚಾರ್ಯ.*

# ಅಕ್ಷರನ್ಯಾಸ

ಉಡುಪಿ ರಾಮನಾಥ ಆಚಾರ್ಯ

ಮಂತ್ರಜಪದ ಸಂದರ್ಭದಲ್ಲಿ ಅಂಗನ್ಯಾಸ–ಕರನ್ಯಾಸ ನಡೆಸುವಂತೆ ಅಕ್ಷರ ನ್ಯಾಸವನ್ನೂ ನಡೆಸಲು ತಂತ್ರಗ್ರಂಥಗಳು ತಿಳಿಸಿವೆ. ಅದರಂತೆ ಗಾಯತ್ರೀಮಂತ್ರದ ಅಕ್ಷರನ್ಯಾಸವನ್ನು ತಂತ್ರಸಾರಸಂಗ್ರಹದಲ್ಲಿ ಆಚಾರ್ಯಮಧ್ವರು ಹೇಳಿದ್ದಾರೆ. ಇದು ವಿಶ್ವಾಮಿತ್ರ ಗಾಯತ್ರಿಯ ಅಕ್ಷರನ್ಯಾಸವಲ್ಲ. ಆದರೆ ಸಾಮಾನ್ಯವಾಗಿ ಸಂಧ್ಯಾ ವಂದನೆಯಲ್ಲಿ ೨೪ ಅಕ್ಷರದ ಗಾಯತ್ರಿಯ ಅಕ್ಷರನ್ಯಾಸವನ್ನೆ ಮಾಡುತ್ತಾರೆ. ಕೇಶವಾದಿರೂಪಗಳ ಚಿಂತನೆಯನ್ನೂ, ಧ್ಯೇಯಮೂರುತಿಯನ್ನೂ ಬ್ರಹ್ಮಗಾಯತ್ರಿ ಯಂತೆ ಉಪಾಸಿಸುವರು.

ದೋಃಪತ್ಸಂಧಿಷು ಸಾಗ್ರೇಷು ನಾಭಿಹೃನ್ಮುಖಕೇಷು ಚ

ಕೈಕಾಲುಗಳ ಸಂಧಿಗಳಲ್ಲಿ ಹಾಗೂ ತುದಿಗಳಲ್ಲಿ ಮತ್ತು ನಾಭಿ, ಹೃದಯ, ಮುಖ, ತಲೆಗಳಲ್ಲಿ ೨೪ ಅಕ್ಷರಗಳ ನ್ಯಾಸವನ್ನು ಮಾಡಬೇಕು. ಬನ್ನಂಜೆಯವರು ಅನುವಾದದಲ್ಲಿ 'ಕೈ ಮತ್ತು ಕಾಲುಬೆರಳುಗಳ ಸಂಧಿ' ಎಂದಿರುವರು. ಹೀಗೆ ನ್ಯಾಸದ ಅಭಿಪ್ರಾಯವಿದ್ದಲ್ಲಿ 'ಬೆರಳಸಂಧಿಗಳಲ್ಲಿ' ಎಂದಿಷ್ಟೆ ಹೇಳಿದರೆ ನಾಕಿತ್ತು. ಕೈ–ಕಾಲುಗಳ ಬೆರಳುಗಳ ಸಂಧಿಗಳಲ್ಲೆಂದು ಹೇಳಬೇಕೆಂದಿಲ್ಲ. ಬೆರಳುಗಳಿರುವುದು ಕೈ–ಕಾಲುಗಳಿಗೇ ತಾನೆ. ಅಷ್ಟೆ ಅಲ್ಲದೆ, ಆಚಾರ್ಯಮಧ್ವರು ಸಂಕ್ಷೇಪವಾಗಿ ಹೇಳಹೊರಟ ತಂತ್ರಗ್ರಂಥದಲ್ಲಿ ಅರ್ಥವಾಗುವುದಕ್ಕಿಂತ ಹೆಚ್ಚು ಅಕ್ಷರಗಳು ಬೇಕಾಗಿರದು.

ಕೈಕಾಲುಗಳ ಸಂಧಿಗಳಲ್ಲೆಂದೆ ಸಹಜವಾಗಿ ಅರ್ಥವಾಗುವುದು.

ಇದರಂತೆ ನ್ಯಾಸಕ್ರಮವನ್ನಿಲ್ಲಿ ಪೂರ್ಣವಾಗಿ ನೀಡಲಾಗಿದೆ.

| | |
|---|---|
| ಓಂ ತಂ ಕೇಶವಾಯ ನಮಃ | ಓಂ (ಬಲತೋಳಿನ ಮೊದಲ ಸಂದು; ಭುಜಸಂಧಿ) Shoulder |
| ಓಂ ಸಂ ನಾರಾಯಣಾಯ ನಮಃ | ಓಂ (ಬಲತೋಳಿನ ಗಂಟು; ಮೊಣಕೈ ಗಂಟು) Elbow |
| ಓಂ ವಿಂ ಮಾಧವಾಯ ನಮಃ | ಓಂ (ಬಲತೋಳಿನ ಮಣಿಗಂಟು) Wrist |
| ಓಂ ತುಂ ಗೋವಿಂದಾಯ ನಮಃ | ಓಂ (ಬಲತೋಳಿನ ಬೆರಳಗಂಟು) Knuckle |
| ಓಂ ವಂ ವಿಷ್ಣವೇ ನಮಃ | ಓಂ (ಬಲತೋಳ ಬೆರಳತುದಿ) |
| ಓಂ ರೇಂ ಮಧುಸೂದನಾಯ ನಮಃ | ಓಂ (ಎಡತೋಳ ಮೊದಲ ಸಂದು) |
| ಓಂ ಣಿಂ ತ್ರಿವಿಕ್ರಮಾಯ ನಮಃ | ಓಂ (ಎಡತೋಳ ಎರಡನೆಯ ಸಂದು –ಕೈಗಂಟು) |

ಓಂ ಯಂ ವಾಮನಾಯ ನಮಃ ಓಂ (ಎಡತೋಳ ಮೂರನೆಯ ಸಂದು –ಮಣಿಗಂಟು)
ಓಂ ಭಂ ಶ್ರೀಧರಾಯ ನಮಃ ಓಂ (ಎಡತೋಳ ನಾಲ್ಕನೆಯ ಸಂದು –ಬೆರಳ ಮೂಲ)
ಓಂ ಗೋಂ ಹೃಷೀಕೇಶಾಯ ನಮಃ ಓಂ (ಎಡತೋಳ ಬೆರಳ ತುದಿ)
ಓಂ ದೇಂ ಪದ್ಮನಾಭಾಯ ನಮಃ ಓಂ (ಬಲಕಾಲ ಮೊದಲ ಸಂದು –ಸೊಂಟದ ಸನಿಹ)
ಓಂ ವಂ ದಾಮೋದರಾಯ ನಮಃ ಓಂ (ಬಲಕಾಲ ಮೊಣಗಂಟು) Knee
ಓಂ ಸ್ಯಂ ಸಂಕರ್ಷಣಾಯ ನಮಃ ಓಂ (ಬಲ ಪಾದದ ಸಂಧಿ) Ankle
ಓಂ ಧೀಂ ವಾಸುದೇವಾಯ ನಮಃ ಓಂ (ಬಲಕಾಲ ಬೆರಳ ಮೂಲ)
ಓಂ ಮಂ ಪ್ರದ್ಯುಮ್ನಾಯ ನಮಃ ಓಂ (ಬಲಕಾಲ ಬೆರಳತುದಿ) Toe
ಓಂ ಹಿಂ ಅನಿರುದ್ಧಾಯ ನಮಃ ಓಂ (ಎಡಕಾಲ ಮೊದಲ ಸಂದು)
ಓಂ ಧಿಂ ಪುರುಷೋತ್ತಮಾಯ ನಮಃ ಓಂ (ಎಡಕಾಲ ಗಂಟು)
ಓಂ ಯೋಂ ಅಧೋಕ್ಷಜಾಯ ನಮಃ ಓಂ (ಎಡಕಾಲ ಮೂರನೆಯ ಸಂದು/ ಹಿಮ್ಮಡಿಯ ಎದುರುಭಾಗ)
ಓಂ ಯೋಂ ನಾರಸಿಂಹಾಯ ನಮಃ ಓಂ (ಎಡಕಾಲ ಬೆರಳಮೂಲ)
ಓಂ ನಂ ಅಚ್ಯುತಾಯ ನಮಃ ಓಂ (ಎಡಕಾಲ ಬೆರಳತುದಿ)
ಓಂ ಪ್ರಂ ಜನಾರ್ದನಾಯ ನಮಃ ಓಂ (ಹೊಕ್ಕುಳು)
ಓಂ ಚೋಂ ಉಪೇಂದ್ರಾಯ ನಮಃ ಓಂ (ಎದೆ)
ಓಂ ದಂ ಹರಯೇ ನಮಃ ಓಂ (ಮೋರೆ)
ಓಂ ಯಾಂ ಕೃಷ್ಣಾಯ ನಮಃ ಓಂ (ತಲೆ)

Wrist, elbow, knuckle ಶಬ್ದಗಳು ಕೈಯ ಹಿಂಭಾಗವನ್ನು ಸ್ಪಷ್ಟವಾಗಿ ನಿರ್ದೇಶಿಸಿದ್ದರೆ ಇಲ್ಲಿ ಕೈಯ ಮುಂಭಾಗದಲ್ಲಿ ನ್ಯಾಸವನ್ನು ಹೇಳಿದ್ದು. ಸ್ಥಾನ ನಿರ್ದೇಶಕ್ಕಾಗಿಯಷ್ಟೆ ಇಂಗ್ಲಿಷ್ ಪದಗಳನ್ನು ಬಳಸಲಾಗಿದೆ.

ವಿಶ್ವಾಮಿತ್ರಗಾಯತ್ರಿಯಲ್ಲಿ ವ್ಯಾಹೃತಿಯೂ ಸೇರಿಕೊಂಡದ್ದರಿಂದ ವ್ಯಾಹೃತಿಯ ನ್ಯಾಸವನ್ನು ನಡೆಸುವುದು ಸೂಕ್ತವೆನಿಸಿದೆ.

ನಾಭಿಹೃತ್ಕೇಷು ಸರ್ವೇಷು ಚತಸ್ರೋ ವ್ಯಾಹೃತೀರ್ನ್ಯಸೇತ್

ಓಂ ಭೂಃ ಅನಿರುದ್ಧಾಯ (ವಾಸುದೇವಾಯ) ನಮಃ ಓಂ –ಹೊಕ್ಕುಳು.
ಓಂ ಭುವಃ ಪ್ರದ್ಯುಮ್ನಾಯ (ಸಂಕರ್ಷಣಾಯ) ನಮಃ ಓಂ –ಎದೆ.
ಓಂ ಸ್ವಃ ಸಂಕರ್ಷಣಾಯ (ಪ್ರದ್ಯುಮ್ನಾಯ) ನಮಃ ಓಂ –ತಲೆ.
ಓಂ ಭೂರ್ಭುವಃ ಸ್ವಃ ವಾಸುದೇವಾಯ (ಅನಿರುದ್ಧಾಯ) ನಮಃ ಓಂ –ಇಡಿಯ ದೇಹ.

ಇದರಂತೆ ಸಂಧ್ಯಾವಂದನೆಯಲ್ಲಿಯ ಗಾಯತ್ರಿಯಲ್ಲಿ ಪ್ರಣವವೂ ಸೇರಿರುವುದರಿಂದ ಪ್ರಣವದ ನ್ಯಾಸವನ್ನೂ ನಡೆಸಬೇಕು.

ಆದಿವರ್ಣತ್ರಯಂ ನಾಭಿಹೃಚ್ಛಿರಸ್ಸು ಯಥಾ ಕ್ರಮಮ್ ।
ನ್ಯಸನೀಯಂ ಚ ತದ್ವರ್ಣದೇವತಾಧ್ಯಾನಪೂರ್ವಕಮ್ ॥

ಓಂ ಅಂ ವಿಶ್ವಾಯ ನಮಃ ಓಂ –ಹೊಕ್ಕುಳು.
ಓಂ ಉಂ ತೈಜಸಾಯ ನಮಃ ಓಂ –ಎದೆ.
ಓಂ ಮಂ ಪ್ರಾಜ್ಞಾಯ ನಮಃ ಓಂ –ತಲೆ.

ಒಟ್ಟು ವಿಶ್ವಾಮಿತ್ರಗಾಯತ್ರಿಯಲ್ಲಿ ಅಕ್ಷರಗಣನೆ ಮಾಡಿದಲ್ಲಿ, ಪ್ರಣವವನ್ನು ಒಂದು ಎಂದು ಇಟ್ಟುಕೊಂಡಲ್ಲಿ ೨೯ ಅಕ್ಷರಗಳಾಗುವವು. ಮೂರೆಂದು ಪರಿಗಣಿಸಿದಲ್ಲಿ ೩೧ ಆಗುವುದು. ಈ ಎರಡು ರೀತಿಯ ಅಕ್ಷರನ್ಯಾಸವನ್ನು ಆಚಾರ್ಯ ಮಧ್ವರ ಬೃಹನ್ನ್ಯಾಸವಾಕ್ಯದಲ್ಲಿ ತಿಳಿಯಬಹುದು. ಇಲ್ಲಿ ಒಟ್ಟಿಗೆ ೩೩ ನ್ಯಾಸ ಸ್ಥಾನಗಳನ್ನು ತಿಳಿಸಿದ್ದಾರೆ (ತಂತ್ರಸಾರಸಂಗ್ರಹ ೪–೧೨೪ರಿಂದ).

*

## ಆಚಮನ

**ಆಚಾಮೇನ್ನಿತ್ಯಮೇವಂ ಯೋ ಭಗವನ್ನಾಮಭಿಃ ಕ್ರಮಾತ್ ॥**

ಜಪದ ಮೊದಲು ಆಚಮನವನ್ನು ಮಾಡಲು ತಿಳಿಸಿರುವರು. ಇದರಲ್ಲಿ ತುಂಬಾ ವಿಧಗಳಿವೆ. ಅದರಲ್ಲೊಂದು ರೀತಿ –ಕೇಶವಾದಿ ೨೪ ನಾಮಗಳಿಂದ ಆಚಮನವನ್ನು ನಡೆಸುವುದು. ಈ ಭಗವದ್ರೂಪಗಳು ಗಾಯತ್ರೀಪ್ರತಿಪಾದ್ಯಗಳು ಎನ್ನುವುದು ವಿಶೇಷ.

— *ಗೋವಿಂದದಾಸ*

* * *

## ಊರ್ಧ್ವಪುಂಡ್ರ

**ಪೂಜಾಕಾಲೇ ಚ ಹೋಮೇ ಚ ಸಾಯಂಕಾಲೇ ಸಮಾಹಿತಃ ।**
**ನಾಮಾನ್ಯುಚ್ಚಾರ್ಯ ವಿಧಿನಾ ಧಾರಯೇದೂರ್ಧ್ವಪುಂಡ್ರಕಮ್ ॥**

*ಬ್ರಹ್ಮಾಂಡಪುರಾಣ*

ಜಪಕ್ಕಿಂತ ಮೊದಲು ಗೋಪಿಯಿಂದ ೧೨ ಊರ್ಧ್ವಪುಂಡ್ರಗಳನ್ನು ಧರಿಸಬೇಕು. ಆಗ ದೇವರ ದ್ವಾದಶನಾಮಗಳನ್ನು ಹೇಳಬೇಕು. ಈ ನಾಮಗಳು ಗಾಯತ್ರೀಪ್ರತಿಪಾದ್ಯ ಕೇಶವಾದಿಗಳು ೧೨ ಮತ್ತು ಸಂಕರ್ಷಣಾದಿಗಳು ೧೨. ಶುಕ್ಲ–ಕೃಷ್ಣಪಕ್ಷ ಭೇದದಿಂದ ಹನ್ನೆರಡು ನಾಮಗಳಿಂದ ಪುಂಡ್ರಧಾರಣೆಯನ್ನು ತಿಳಿಸಿದ್ದಾರೆ. "ಸಂಕರ್ಷಣಾದಿಭಿಃ ಕೃಷ್ಣೇ ಶುಕ್ಲೇ ಚೇತ್ಕೇಶವಾದಿಭಿಃ". ದೇವರನಾಮಗಳು ಹಾಗೂ ಪುಂಡ್ರಗಳು ಇವುಗಳೆರಡರ ಸಂಬಂಧ ಎಷ್ಟು ಗಾಢವಾಗಿದೆ ಎಂದರೆ ಪುಂಡ್ರಧಾರಣೆ ಎಂದರೆ 'ನಾಮಹಾಕುವುದು' ಎಂದೇ ಚಾಲ್ತಿಯಲ್ಲಿದೆ. ನಾಮ ಹೇಳಿ ಪುಂಡ್ರಹಾಕುವುದು ಎಂದು ಅರ್ಥೈಸಬೇಕು.

— *ಉಡುಪಿ ರಾಮನಾಥ ಆಚಾರ್ಯ*

## ಬ್ರಹ್ಮೋಪದೇಶ

'ಬ್ರಹ್ಮೋಪದೇಶ' ಎಂದೇ ಪ್ರಸಿದ್ಧವಿರುವ ಉಪನಯನಸಂಸ್ಕಾರದ ಅಂಗವಾಗಿ 'ಬ್ರಹ್ಮ' ಎನಿಸುವ ಸಮಗ್ರ ವೇದದ ಉಪದೇಶ ನಡೆಯಬೇಕು. ಆದರೆ ಅದು ಕಷ್ಟಸಾಧ್ಯ ಎಂಬ ದೃಷ್ಟಿಯಿಂದ ಮೂರು ವೇದಗಳ ಪ್ರತಿನಿಧಿಯಾಗಿ ಪ್ರಣವ, ವ್ಯಾಹೃತಿ ಸಹಿತವಾದ ಗಾಯತ್ರಿಯನ್ನು ಉಪದೇಶಿಸಲಾಗುವುದು. ಇದರಲ್ಲಿ ಪ್ರಣವವು ಸಾಮ ವೇದಕ್ಕೆ ಪ್ರತಿನಿಧಿ ಎನಿಸಿದರೆ, ವ್ಯಾಹೃತಿಯು ಯಜುರ್ವೇದದ ಪ್ರತಿನಿಧಿ. ಗಾಯತ್ರಿಯು ಋಗ್ವೇದದ ಪ್ರತಿನಿಧಿ. ಅಲ್ಲದೆ, ಈ ಮೂರು ಪಂಚರಾತ್ರ, ಇತಿಹಾಸ ಪುರಾಣ ಹಾಗೂ ಮೂಲರಾಮಾಯಣ -ಇವುಗಳಿಗೂ ಕ್ರಮವಾಗಿ ಪ್ರತಿನಿಧಿಗಳೆನಿಸುವವು.

ಆದುದರಿಂದ 'ಋಗ್ವೇದಮಧೀಷ್ವ, ಯಜುರ್ವೇದಮಧೀಷ್ವ, ಸಾಮವೇದಮಧೀಷ್ವ, ಸರ್ವಶಾಸ್ತ್ರಾಣಿ ಅಧೀಷ್ವ' ಎಂದು ಹರಸುವಂತೆ ಮುಂದೆ ನಡೆಸಬೇಕಾದ ಸಮಸ್ತ ಶಾಸ್ತ್ರಗಳ ಅಧ್ಯಯನಕ್ಕೆ ನಾಂದಿಹಾಡಿದಂತಾಗುವುದು.

*ಉಡುಪಿ ರಾಮನಾಥ ಆಚಾರ್ಯ*

* * *

## ಗಾಯತ್ರೀಕವಚ

ವಿಶ್ವಾಮಿತ್ರಸಂಹಿತೆಯಲ್ಲಿ ಬ್ರಹ್ಮಕೌಶಿಕ ಸಂವಾದದಲ್ಲಿ ಗಾಯತ್ರೀಕವಚವಿದೆ. ಗಾಯತ್ರೀತಂತ್ರದಲ್ಲಿರುವ ಗಾಯತ್ರೀಕವಚದಲ್ಲಿ ಬಂದ ಶ್ಲೋಕಗಳು ಹೀಗಿವೆ-

**ತತ್ ಪದಂ ಪಾತು ಮೇ ಪಾದೌ ಜಂಘೇ ಮೇ ಸವಿತುಃ ಪದಮ್ ।**
**ವರೇಣ್ಯಂ ಕಟಿದೇಶೇ ತು ನಾಭಿಂ ಭರ್ಗಸ್ತಥೈವ ಚ ॥**
**ದೇವಸ್ಯ ಪಾತು ಹೃದಯಂ ಧೀಮಹೀತಿ ಗಳಂ ತಥಾ ।**
**ಧಿಯಃ ಪದಂ ಪಾತು ನೇತ್ರೇ ಯಃ ಪದಂ ತು ಭ್ರುವೋಽಂತರಮ್ ॥**
**ನಃ ಪದಂ ಮೇ ಲಲಾಟಂ ಸ್ಯಾನ್ಮೂರ್ಧಾನಂ ಮೇ ಪ್ರಚೋದಯಾತ್ ॥**

ಹೀಗೆಯೆ ಅಕ್ಷರಗಳಿಂದಲೂ ರಕ್ಷಣೆಯನ್ನು ಪ್ರಾರ್ಥಿಸಿದ್ದಾರೆ.

*— ಕಾಪು ಹಯಗ್ರೀವ ಆಚಾರ್ಯ.*

* * *

## ಅಷ್ಟಮಹಾಮಂತ್ರದಲ್ಲಿ ಗಾಯತ್ರೀ

**ತಾರೋಷ್ಟವರ್ಣೋ ದ್ವಿಷಡಕ್ಷರೋಽನ್ಯಃ**
**ಷಡಕ್ಷರೋ ವ್ಯಾಹೃತಯಃ ಕ್ರಮೇಣ ।**
**ಪಂಚಾಶದರ್ಣಾಃ ಸವಿತುಶ್ಚ ಪತ್ನೀ**
**ಪುಂಸೂಕ್ತಮಿತ್ಯೇವ ಹಿ ಮೂಲಮಂತ್ರಾಃ ॥**
**ಏತೇ ಹ್ಯಷ್ಟಮಹಾಮಂತ್ರಾಃ ಜ್ಞಾನಮೋಕ್ಷಫಲಪ್ರದಾಃ ॥**

ಪ್ರಣವವೇ ಮುಂತಾದ ಅಷ್ಟಮಹಾಮಂತ್ರಗಳಲ್ಲಿ 'ಸವಿತುಶ್ಚ ಪತ್ನೀ' ಎಂಬ ಶಬ್ದದಿಂದ 'ಸಾವಿತ್ರೀ' ಎನಿಸುವ ಬ್ರಹ್ಮಗಾಯತ್ರಿಯು ಒಂದಾಗಿ ಪರಿಗಣಿತವಾಗಿದೆ.

## ಪರ್ವಗಳ ಮೂಲಕ ಎರಡು ಬಗೆಗಳಲ್ಲಿ ಜಪ

ಗಾಯತ್ರಿಯನ್ನು ಬೆರಳುಗಳ ಒಳಭಾಗದಲ್ಲಿರುವ ರೇಖೆಗಳಿಂದ ಎಣಿಕೆಮಾಡಿ ಜಪಿಸಬೇಕು. ಇಲ್ಲಿ ಎರಡು ತೆರನಾದ ಸಂಪ್ರದಾಯಗಳಿವೆ-

೧) ಅನಾಮಿಕಾಮೂಲದಿಂದ ಆರಂಭಿಸಿ ಮಧ್ಯಮಾಂಗುಲಿಮೂಲದವರೆಗೆ ಹತ್ತು ಸಂಖ್ಯೆಯನ್ನು ಪೂರೈಸುವುದು. ಈ ವಿಧಾನದ ಪ್ರಕಾರ, ಮಧ್ಯಮಾಂಗುಲಿಯ ಮತ್ತು ಅನಾಮಿಕಾಂಗುಲಿಯ ಮಧ್ಯದ ಎರಡು ರೇಖೆಗಳು 'ಮೇರು' ಎನಿಸುತ್ತದೆ. ಇದನ್ನು ಪ್ರದಕ್ಷಿಣೆಮಾಡಿ ಜಪವನ್ನು ಮಾಡಬೇಕು-

**ಮಧ್ಯಮಾನಾಮಿಕಾಮಧ್ಯಂ ಮೇರುದ್ವಿತಯಕಲ್ಪಿತಮ್ ।**
**ಮೇರುಂ ಪ್ರದಕ್ಷಿಣೀಕುರ್ವನ್ ಅನಾಮೀಮೂಲಪರ್ವ ತು ।**
**ಆರಭ್ಯ ಮಧ್ಯಮಾಮೂಲಪರ್ವಾಂತಂ ಗಣಯೇತ್ ಕ್ರಮಾತ್ ॥**

೨) ಅನಾಮಿಕ ಮಧ್ಯದ ರೇಖೆಯಿಂದ ಆರಂಭಿಸಿ, ಆದರ ಕೆಳರೇಖೆ ಅನಂತರ ಕಿರುಬೆರಳಿನಿಂದ ಮುಂದುವರಿಯುತ್ತ ತರ್ಜನೀ ಮೂಲಭಾಗದವರೆಗೆ ಹತ್ತಾಗಿ ಎಣಿಕೆಮಾಡಿ ಜಪಿಸಬೇಕು. ಈ ಪದ್ಧತಿಯಲ್ಲಿ ನಡುಬೆರಳಿನಲ್ಲಿರುವ ಎರಡು ಸಂಧಿಗಳೇ ವರ್ಜತಗಳೆನಿಸುತ್ತವೆ-

**ಆರಭ್ಯಾನಾಮಿಕಾಮಧ್ಯಪರ್ವಪ್ರಾದಕ್ಷಿಣಕ್ರಮಾತ್ ।**
**ತರ್ಜನೀಮೂಲಪರ್ಯಂತಂ ಸಂಖ್ಯಯಾ ತ್ರಿಪದೀಂ ಜಪೇತ್ ।**
**ಮಧ್ಯಪರ್ವದ್ವಯಂ ಮೇರುಃ ತಾಂ ಮೇರುಂ ನಾತಿಲಂಘಯೇತ್ ॥**

ಈ ಎರಡು ಪದ್ಧತಿಗಳಲ್ಲಿ ಯಾವುದೇ ಕ್ರಮದಿಂದಲಾಗಲೀ ಮೇರುಪ್ರದಕ್ಷಿಣಾಕಾರವಾಗಿ ಪರ್ವಗಳಲ್ಲಿ ಎಣಿಕೆಮಾಡಿ ಗಾಯತ್ರಿಯನ್ನು ಜಪಿಸಬೇಕು.

*ಸಂಗ್ರಹ: ಆನಂದತೀರ್ಥ, ನಾಗಸಂಪಿಗೆ*

* * *

## ಸೂರ್ಯಾರ್ಘ್ಯ ನೀಡುವ ಮುಂಚೆ ಸೂರ್ಯನಾರಾಯಣನ ಧ್ಯಾನ

ಗಾಯತ್ರೀಜಪದ ಮುಂಚೆ ಸೂರ್ಯಮಂಡಲದಲ್ಲಿರುವ ಸೂರ್ಯನಾರಾಯಣನನ್ನು 'ಪ್ರೋದ್ಯದಾದಿತ್ಯವರ್ಣಶ್ಚ......' ಎಂಬ ಪದ್ಯದ ಮೂಲಕವೂ, 'ಧ್ಯೇಯಃ ಸದಾ......' ಎಂಬ ಶ್ಲೋಕದ ಮೂಲಕವೂ ಧ್ಯಾನಿಸಲಾಗುವುದು.

ಹಾಗೆಯೇ ಗಾಯತ್ರೀಮಂತ್ರವನ್ನು ಜಪಿಸಿ, ಸೂರ್ಯಾರ್ಘ್ಯವನ್ನು ನೀಡುವ ಮುಂಚೆಯೂ ಸೂರ್ಯಮಂಡಲದಲ್ಲಿರುವ ಸೂರ್ಯನಾರಾಯಣನನ್ನು ಧ್ಯಾನಿಸಬೇಕೆಂದು ಶ್ರೀಮದಾಚಾರ್ಯರು ತಮ್ಮ ಸದಾಚಾರಸ್ಮೃತಿಯಲ್ಲಿ (೫) ತಿಳಿಸಿದ್ದಾರೆ -"**ಗಾಯತ್ರ್ಯಾ ಚಾಂಜಲಿಂ ದತ್ವಾ ಧ್ಯಾತ್ವಾ ಸೂರ್ಯಗತಂ ಹರಿಮ್**".

ಆದರೆ ಈ ಸಂದರ್ಭದಲ್ಲಿ ಧ್ಯಾನಿಸುವುದು ನಮ್ಮ ಆಚರಣೆಯಲ್ಲಿ ಹರಿದುಬಂದಿಲ್ಲ. ಅದನ್ನು ರೂಢಿಯಲ್ಲಿ ತರಬೇಕಾಗಿದೆ. *-ಸಗ್ರಿ*

## ಸೂರ್ಯಾರ್ಘ್ಯಪ್ರದಾನದ ನಿಯಮಗಳು

**ದ್ವೌ ಪಾದೌ ಚ ಸಮೌ ಕೃತ್ವಾ ರವಿಂ ವೀಕ್ಷ್ಯ ಜಲಾಂಜಲಿಮ್ ।**
**ಗೋಶೃಂಗಮಾತ್ರಮುದ್ಧೃತ್ಯ ಪಾಣಿನಾ ಪ್ರಕ್ಷಿಪೇಜ್ಜಲೇ ॥**

ವಸಿಷ್ಠರು ತಿಳಿಸುವಂತೆ ಸೂರ್ಯಾರ್ಘ್ಯವನ್ನು ನೀಡುವಾಗ ಎರಡೂ ಪಾದಗಳನ್ನು ಸಮವಾಗಿ ಇಟ್ಟುಕೊಳ್ಳಬೇಕು. ಸೂರ್ಯನನ್ನು ನೋಡಿ ಹಸುವಿನ ಕೊಂಬು ಇರುವಂತೆ ಕೈಗಳನ್ನು ಎತ್ತರಕ್ಕೆ ಹಿಡಿದು ಬೊಗಸೆಯಿಂದ ನೀರನ್ನು ಎತ್ತಿ, ನೀರಿನಲ್ಲಿ ಅರ್ಘ್ಯವನ್ನು ಬಿಡಬೇಕು.

**ಓಂಕಾರಾತ್ತೋಯಮಾದಾಯ ಗಾಯತ್ರ್ಯಾ ಚಾಭಿಮಂತ್ರಿತಮ್ ।**
**ಆದಿತ್ಯಾಭಿಮುಖಸ್ತಿಷ್ಠನ್ ತ್ರಿಃ ಕ್ಷಿಪೇತ್ ಸಂಧ್ಯಯೋರ್ದ್ವಯೋಃ ।**
**ಅಂಗುಷ್ಠಾಭ್ಯಾಂ ತು ತರ್ಜನ್ಯೋಃ ಸ್ಪರ್ಶನಂ ತು ವಿವರ್ಜಯೇತ್ ॥**

ಶ್ರೀ ವ್ಯಾಸರ ಪ್ರಕಾರ ಓಂಕಾರವನ್ನು ಪಠಿಸಿ, ಬೊಗಸೆಯಿಂದ ನೀರನ್ನು ತೆಗೆದು, ಗಾಯತ್ರಿಯಿಂದ ಅದನ್ನು ಅಭಿಮಂತ್ರಿಸಿ, ಆದಿತ್ಯಾಭಿಮುಖನಾಗಿ ಮೂರು ಬಾರಿ ಅರ್ಘ್ಯವನ್ನು ನೀಡಬೇಕು. ಬೊಗಸೆಯಿಂದ ಅರ್ಘ್ಯ ನೀಡುವಾಗ ಅಂಗುಷ್ಠಬೆರಳುಗಳಿಗೆ ತೋರ್ಬೆರಳುಗಳ ಸ್ಪರ್ಶ ಆಗದಂತೆ ನೋಡಿಕೊಳ್ಳಬೇಕು.

** ** **

## ಗಾಯತ್ರಿಯ ಅಕ್ಷರಗಳಿಂದ ಇಪ್ಪತ್ನಾಲ್ಕು ತತ್ತ್ವಗಳ ಸೂಚನೆ

**ಕರ್ಮೇಂದ್ರಿಯಾಣಿ ಪಂಚೈವ ಪಂಚ ಬುದ್ಧೀಂದ್ರಿಯಾಣಿ ಚ ।**
**ಪಂಚೇಂದ್ರಿಯಾರ್ಥಾಃ ಸುಮಹತ್ ಭೂತಾನಾಂ ಪಂಚ ಪಂಚಕಮ್ ॥**
**ಮನೋಬುದ್ಧಿಸ್ತಥೈವಾತ್ಮಾ ಅವ್ಯಕ್ತಮ್ಯೃಷಿಸತ್ತಮ ।**
**ಚತುರ್ವಿಂಶತ್ಯಥೈತಾನಿ ಗಾಯತ್ರ್ಯಾಸ್ತ್ವಕ್ಷರಾಣಿ ತು ॥**

ಗಾಯತ್ರೀಮಂತ್ರದ ಇಪ್ಪತ್ನಾಲ್ಕು ಅಕ್ಷರಗಳು ೨೪ ತತ್ವಗಳನ್ನು ತಿಳಿಸುತ್ತವೆ. ಐದು ಘಟಕಗಳಾಗಿ ಐದು ಗುಂಪುಗಳಲ್ಲಿವೆ. ೧. ಪಂಚ ಕರ್ಮೇಂದ್ರಿಯಗಳು. ೨. ಪಂಚ ಜ್ಞಾನೇಂದ್ರಿಯಗಳು. ೩. ಐದು ಇಂದ್ರಿಯವಿಷಯಗಳು. ೪. ಪಂಚಭೂತಗಳು. ೫. ಮನಸ್ಸು, ಬುದ್ಧಿ, ಅವ್ಯಕ್ತ, ಪುರುಷ.

*— ಸಂಗ್ರಹ : ಉಡುಪಿ ರಾಮನಾಥ ಆಚಾರ್ಯ*

ಓಂ

## ಭಾಗ – ೨

*

# ಗಾಯತ್ರಿಯ ಅರ್ಥಾನುಸಂಧಾನ–ಉಪಾಸನೆ

*

ಅನರ್ಥಜ್ಞೋದಿತೋ ಮಂತ್ರೋ ನಿರರ್ಥಸ್ತ್ರಾತಿ ಮಾನತಃ ।
ಯನ್ಮಂತ್ರಸ್ತೇನ ಕಥಿತೋ ಮಂತ್ರಾರ್ಥೋ ಜ್ಞೇಯ ಏವ ತತ್ ॥

(ಪೈಂಗಿಶ್ರುತಿ)

ಅರ್ಥವನ್ನು ತಿಳಿದುಕೊಳ್ಳದೇ ಹೇಳಿದ ಮಂತ್ರವು ನಿರರ್ಥಕ.
ಏಕೆಂದರೆ ಅರ್ಥಜ್ಞಾನವುಳ್ಳವನನ್ನು ರಕ್ಷಿಸುವುದರಿಂದಲೇ
ಮಂತ್ರಕ್ಕೆ ಮಂತ್ರ ಎಂದು ಹೆಸರು.
ಆದ್ದರಿಂದ ಮಂತ್ರದ ಅರ್ಥವನ್ನು ತಿಳಿದುಕೊಳ್ಳಲೇಬೇಕು.

ಯೋ ಹವಾ ಅವಿದಿತಾರ್ಷಛ್ಛಂದೋದ್ದೈವತ
ಬ್ರಾಹ್ಮಣೇನ ಮಂತ್ರೇಣ ಯಜತಿ ಯಾಜಯತಿ
ವಾಧ್ಯಾಪಯತಿ ವಾ ಸ್ಥಾಣುಂ ವರ್ಚ್ಛತಿ ಗರ್ತೇ ವಾ
ಪದ್ಯತೇ ಪ್ರವಾಮೀಯತೇ ಪಾಪೀಯಾನ್ ಭವತಿ
ತಸ್ಮಾದೇತಾನಿ ಮಂತ್ರೇ ಮಂತ್ರೇ ವಿದ್ಯಾತ್ ॥

# ಗಾಯತ್ರೀ ಯಾರು?

———————————————ಶ್ರೀ ವಿದ್ಯೇಶತೀರ್ಥರು

ಸಾಮಾನ್ಯವಾಗಿ 'ಗಾಯತ್ರೀ' ಎಂಬ ಸ್ತ್ರೀಲಿಂಗದ ಶಬ್ದದಿಂದ ವಾಚ್ಯಳಾಗಿರುವವಳು ಒಬ್ಬ ದೇವಿಯಾಗಿದ್ದು, ಆಕೆಯೇ ಗಾಯತ್ರೀಮಂತ್ರದಿಂದಲೂ ಪ್ರತಿಪಾದ್ಯಳೆಂದು ಭಾವಿಸಲಾಗುವುದು.

## ಗಾನ ತ್ರಾಣ ನಡೆಸುವವನು:

ಆದರೆ ಛಾಂದೋಗ್ಯೋಪನಿಷತ್ತು (೩–೨–೧) ಗುಣಪರಿಪೂರ್ಣಗಳಾದ ಭಗವಂತನ ಮತ್ಸ್ಯಕೂರ್ಮಾದಿ ರೂಪಗಳನ್ನೇ 'ಗಾಯತ್ರೀ' ಎಂದು ಕರೆದಿದೆ:

ಗಾಯತ್ರೀ ವಾ ಇದಂ ಸರ್ವಂ ಭೂತಂ ಯದಿದಂ....

ಮತ್ಸ್ಯಕೂರ್ಮಾದಿ ರೂಪಗಳನ್ನು ಹೊಂದಿರುವ ಭಗವಂತನೇ ಯಾಕೆ ಗಾಯತ್ರೀ ಎನಿಸುವನೆಂಬ ಸಮರ್ಥನೆಯನ್ನು ಉಪನಿಷತ್ತು ಮುಂದೆ ನೀಡುತ್ತದೆ:

ಗಾಯತಿ ತ್ರಾಯತೇ ಚ ಯಾ ವೈ ಸಾ ಗಾಯತ್ರೀ

ಯಾರು ವೇದದ ಗಾನವನ್ನು ನಡೆಸುವನೋ, ಎಲ್ಲರನ್ನೂ ರಕ್ಷಿಸುವನೋ ಅಂತಹ ವಾಸುದೇವನೇ ಗಾಯತ್ರೀ ಎನಿಸುವನು.

## ತ್ರಿಕಾಲಗಳಲ್ಲಿ ಸ್ತುತನಾಗುವವನು:

ಮತ್ತೊಂದು ಪ್ರಮಾಣದಲ್ಲಿ (ಐ. ಉ. ಭಾ. ೨–೨–೪–೧) ವೈದಿಕರಿಂದ ಪ್ರಾತಃ, ಮಧ್ಯಾಹ್ನ ಹಾಗೂ ಸಾಯಂ ಹೀಗೆ ಮೂರು ಕಾಲಗಳಲ್ಲೂ ಗಾಯತ್ರೀ ಮಂತ್ರದಿಂದ ಸ್ತುತ್ಯನಾಗಿರುವುದರಿಂದ, ಹಾಗೂ ಬ್ರಹ್ಮಾದಿದೇವತೆಗಳಿಂದ ಭೂತ, ವರ್ತಮಾನ ಹಾಗೂ ಭವಿಷ್ಯತ್ ಈ ಮೂರು ಕಾಲಗಳಲ್ಲೂ ಸ್ತುತ್ಯನಾಗಿರುವುದರಿಂದ ಅನಿರುದ್ಧರೂಪೀ ಪರಮಾತ್ಮನು 'ಗಾಯತ್ರೀ' ಎನಿಸುವನೆಂದು ತಿಳಿಸಲಾಗಿದೆ:

ಗಾಯತ್ರೀ ತ್ವನಿರುದ್ಧೋಽಸೌ ತ್ರಿಕಾಲೇ ಗೀಯತೇ ಯತಃ

## ಸ್ತುತಿಸುವವರನ್ನು ಪೊರೆಯುವವನು:

ಎಂಟೆಂಟು ಅಕ್ಷರಗಳ ಮೂರು ಪಾದಗಳನ್ನು ಹೊಂದಿದ ಛಂದಸ್ಸು 'ಗಾಯತ್ರೀ' ಎಂಬುದಾಗಿ ಕರೆಸಿಕೊಳ್ಳಲ್ಪಡುವುದು. ಆದರೆ ಆ ಛಂದಸ್ಸು ಉಳಿದೆಲ್ಲ ಛಂದಸ್ಸುಗಳಿಗಿಂತ ಶ್ರೇಷ್ಠ ಎನಿಸುವಂತೆ ನಿಯಮಿಸುವ ತನ್ನ 'ಗಾಯತ್ರೀ' ಎಂಬ ವಿಭೂತಿರೂಪದ ಸಂಪರ್ಕದಿಂದಾಗಿಯಷ್ಟೇ ಅದಕ್ಕೆ ಗಾಯತ್ರೀ ಎಂಬ ಹೆಸರು ಬಂದದ್ದೆಂದು ಗೀತಾಚಾರ್ಯನು (ಗೀ. ೧೦–೩೫) ಅಭಿಪ್ರಾಯಪಡುವನು:

.......ಗಾಯತ್ರೀ ಛಂದಸಾಮಹಮ್ ।

ಭಗವಂತ ಯಾಕೆ ಗಾಯತ್ರೀ ಎನಿಸುವನೆಂಬುದನ್ನು 'ವಿಭೂತಿತತ್ತ್ವ' ತಿಳಿಸುತ್ತದೆ. "......ಗಾಯತ್ರೀ ತ್ರಾತಿ ಗಾಯಕಾನ್"

ತನ್ನನ್ನು ಯಾರು ಭಕ್ತಿಯಿಂದ ಸ್ತುತಿಸುವರೋ ಅವರನ್ನು ರಕ್ಷಿಸುವುದರಿಂದಾಗಿ ಭಗವಂತನು 'ಗಾಯತ್ರೀ' ಎನಿಸುವನು.

## ಸ್ತ್ರೀಲಿಂಗದ ಶಬ್ದದಿಂದ ವಾಚ್ಯನಾಗಬಲ್ಲ:

ವಾಸ್ತವವಾಗಿ ಸಂಸ್ಕೃತದಲ್ಲಿ ಶಬ್ದಗಳ ಲಿಂಗವು ಆಯಾ ಶಬ್ದದ ಸ್ವಭಾವವೇ ಹೊರತು ಶಬ್ದಾರ್ಥದ ಲಿಂಗಕ್ಕನುಗುಣವಾಗಿ ಇರುವಂತಹದ್ದಲ್ಲ. ಆದುದರಿಂದ ಶ್ರೀಹರಿ ಸ್ತ್ರೀಲಿಂಗದ ಗಾಯತ್ರೀ ಶಬ್ದದಿಂದ ಪ್ರತಿಪಾದ್ಯನಾಗಬಹುದು.

ಅಲ್ಲದೆ, ಭಗವಂತನಿಗೆ ಸ್ತ್ರೀಯ ಗುಣಗಳೂ, ಪುರುಷನ ಗುಣಗಳೂ ನಪುಂಸಕಪದಾರ್ಥದ ಗುಣಗಳೂ ಅಧೀನಗಳಾಗಿರುವುದರಿಂದ ಆಯಾ ಪದಾರ್ಥ ವಾಚಕಶಬ್ದಗಳಿಂದ ಅವನೂ ವಾಚ್ಯನಾಗುವನು.

**ಸ್ತ್ರೀಗುಣಾಃ ಪುಂಗುಣಾಶ್ಚೈವ ನಪುಂಸಕಗುಣಾ ಅಪಿ ।**
**ಯದಧೀನಾಃ ವ್ಯತ್ಯಯಃ ಸ್ಯಾಲ್ಲಿಂಗಾನಾಂ ತತ್ರ ಸರ್ವಶಃ ।**

*–ಬೃಹದ್ಭಾಷ್ಯ (೭–೩–೩)*

ಪ್ರಕೃತ ಸ್ತ್ರೀಲಿಂಗದ ಗಾಯತ್ರೀಶಬ್ದವಾಚ್ಯತ್ವವೂ ಹೀಗೆ ಕೂಡಬಹುದಾಗಿದೆ.

ಅಲ್ಲದೆ, ಭಗವಂತನಿಗೆ ಪುರುಷಾಕಾರದಂತೆ ಸ್ತ್ರೀಯರ ಆಕಾರವೂ ರೂಪವೂ ಇರುವುದರಿಂದ ಅವನು ಪುರುಷವಾಚಕ ಶಬ್ದದಿಂದಲೂ ಸ್ತ್ರೀವಾಚಕ ಶಬ್ದ ದಿಂದಲೂ ವಾಚ್ಯನಾಗಬಹುದೆಂದು 'ಗಾರುಡ' (ಐ. ಉ. ಭಾ. ೨–೨–೭–೪) ತಿಳಿಸಿದೆ:

**ಸ್ತ್ರೀರೂಪಶ್ಚೈವ ಪುಂರೂಪೋ ಯಸ್ಮಾನ್ನಾರಾಯಣಃ ಸ್ಥಿತಃ ।**
**ಪುಮಾನ್ ಸ್ತ್ರೀ ಚೇತಿ ವಾಚ್ಯೋಽಸೌ..... ॥**

## ಗಾಯತ್ರೀ ಪ್ರತಿಪಾದ್ಯ ಸ್ತ್ರೀರೂಪ:

ಪ್ರಕೃತ ಗಾಯತ್ರೀ ಪ್ರತಿಪಾದ್ಯ ಭಗವಂತನಿಗೆ ಸ್ತ್ರೀರೂಪವೂ ಇದೆ. ಗಾಯತ್ರೀ ಪ್ರತಿಪಾದ್ಯ ಆರು ಭಗವದ್ರೂಪಗಳಲ್ಲಿ ಮೂರು ಸ್ತ್ರೀರೂಪಗಳೇ ಆಗಿವೆ:

**ಗಾಯತ್ರ್ಯಾಂ ಸಂಸ್ಥಿತೋ ವಿಷ್ಣುಃ ಸ್ತ್ರೀರೂಪಃ ಸೂರ್ಯಸಪ್ರಭಃ ।**
**....ತೃತೀಯೋ ವಾಚಿ ಸಂಸ್ಥಶ್ಚ ಸ್ತ್ರೀರೂಪೋ ಹಯಶೀರ್ಷಕಃ ।**
**ಚತುರ್ಥಃ ಪೃಥಿವೀಸಂಸ್ಥಃ ಸ್ತ್ರೀರೂಪಃ ಪೀತವರ್ಣಕಃ ।**

*(ಛಾಂ. ಉ. ಭಾ. ೩–೨–೨)*

ಹೀಗೆ ಗಾಯತ್ರೀ, ವಾಕ್, ಪೃಥಿವೀ ಎನಿಸುವ ಭಗವದ್ರೂಪಗಳು. ಗಾಯತ್ರೀ ಪ್ರತಿಪಾದ್ಯಗಳಾಗಿದ್ದು ಈ ಪ್ರಯುಕ್ತವೂ ಭಗವಂತನು ಸ್ತ್ರೀಲಿಂಗದ ಗಾಯತ್ರೀ ಶಬ್ದವಾಚ್ಯನಾಗುವನು.

ಒಂದೊಮ್ಮೆ ದೇವಿಯು ಗಾಯತ್ರೀಮಂತ್ರಪ್ರತಿಪಾದ್ಯಳೆಂದರೆ ಅಂತಹ ಗಾಯತ್ರೀಮಂತ್ರದಲ್ಲಿ 'ಸವಿತುಃ' ಎಂಬುದಾಗಿ ಪುಲ್ಲಿಂಗದ ಶಬ್ದದ ಬದಲು ಸ್ತ್ರೀಲಿಂಗದ ಶಬ್ದ ಇರಬೇಕಾದೀತು!

## ಗಾಯತ್ರೀ ಎಂದರೆ ಶ್ರೀವಿಷ್ಣು:

ಹೀಗೆ ಮುಖ್ಯವಾಗಿ ಭಗವಂತನು ಗಾಯತ್ರೀ ಎನಿಸುತ್ತಿದ್ದು, ಅಂತಹ ಭಗವಂತನನ್ನು ಪ್ರತಿಪಾದಿಸುವ ಪ್ರಯುಕ್ತ ಮಂತ್ರವೂ ಗಾಯತ್ರೀ ಎನಿಸುವುದು. ಬ್ರಹ್ಮನನ್ನು ಪ್ರತಿಪಾದಿಸುವ ಪ್ರಯುಕ್ತ ವೇದ ಹೇಗೆ ಬ್ರಹ್ಮ ಎನಿಸುವುದೋ ಹಾಗೆ. ಗಾಯತ್ರೀ ಛಂದಸ್ಸಿನಿಂದ ಬದ್ಧವಾಗಿರುವ ಪ್ರಯುಕ್ತವೂ ಈ ಮಂತ್ರ ಗಾಯತ್ರೀ ಎನಿಸಿದೆ.

ಗಾಯತ್ರೀಮಂತ್ರಪ್ರತಿಪಾದ್ಯನಾದ ಭಗವಂತನು ಪರಮಮುಖ್ಯವಾಗಿ ಗಾಯತ್ರೀ ಎನಿಸಿದರೆ, ಗಾಯತ್ರೀಮಂತ್ರಕ್ಕೆ ಮುಖ್ಯ ಹಾಗೂ ಅಮುಖ್ಯ ಅಭಿಮಾನಿನಿಯರಾಗಿರುವ ಪ್ರಯುಕ್ತ ಲಕ್ಷ್ಮೀ ಮತ್ತು ಸರಸ್ವತಿಯರೂ ಗಾಯತ್ರೀ ಎನಿಸುವರು–

ಅಭಿಮಾನೀ ತು ಗಾಯತ್ರ್ಯಾಃ ಮುಖ್ಯಾ ಶ್ರೀಃ ಪರಿಕೀರ್ತಿತಾ ।
ಬ್ರಹ್ಮಾಣ್ಯಮುಖ್ಯತೋ ಜ್ಞೇಯಾ ಸಾ ತು ಬ್ರಹ್ಮಾಣಮಾಶ್ರಿತಾ ॥

–ಬೃಹದ್ಭಾಷ್ಯ ೭-೧೯-೫

*

### ಸವಿತುರ್ವರೇಣ್ಯಂ

ಸಜ್ಜನರು ಭಗವಂತನು 'ಸವಿತಾ' ನಮ್ಮ ಸಾಧನಶರೀರವನ್ನು ಸೃಷ್ಟಿಸಿದವನೆಂದು ತಿಳಿದು ಕೃತಜ್ಞತೆಯಿಂದ ಆತನನ್ನು ಸ್ಮರಿಸುವರು. ಈ ಭಾಗವನ್ನು ಸೂಚಿಸಲು 'ಸವಿತುರ್ವರೇಣ್ಯಂ' ಎಂಬುದಾಗಿ ಸಂಯುಕ್ತವಾಗಿಯೇ ಪ್ರಯೋಗ ಬಂದಿದೆ. ಸಾಧನಶರೀರಾದಿಗಳ ಸ್ರಷ್ಟೃ ಎನಿಸಿದ ಆತನ ರೂಪವು ಭಜನೀಯ; ಧ್ಯೇಯವೆಂದು ಈ ವಚನದ ಆಶಯ.

ಹೀಗೆ ಮಹೋಪಕಾರವನ್ನು ಮಾಡಿದ ಹರಿಯನ್ನು ಕೃತಜ್ಞತಾಪೂರ್ವಕವಾಗಿ ಧ್ಯಾನಿಸದೆ ಹೋದರೆ ನಾವು ಕೃತಘ್ನರೆನಿಸಿಯೇವು. ಕೃತಘ್ನತೆ ಪ್ರಾಯಶ್ಚಿತ್ತವೇ ಇಲ್ಲದ ಪಾಪ. 'ಕೃತಘ್ನೇ ನಾಸ್ತಿ ನಿಷ್ಕೃತಿಃ'.

— ಶ್ರೀ ವಿದ್ಯೇಶತೀರ್ಥರು

# ಪ್ರಣವದ ಅರ್ಥವಿಸ್ತಾರ

ಬನ್ನಂಜೆ ಗೋವಿಂದಾಚಾರ್ಯ

ಓಂಕಾರವು ವೇದವೃಕ್ಷದ ಬೀಜರೂಪದಲ್ಲಿದೆ. ಸಮಗ್ರ ವೈದಿಕಸಾಹಿತ್ಯ, ಯಾಕೆ ಪ್ರಪಂಚದ ಎಲ್ಲ ಭಾಷೆಗಳ ಎಲ್ಲ ವಿಧದ ಸಾಹಿತ್ಯ ಓಂಕಾರಬೀಜದಿಂದ ಬೆಳೆದು ಹಬ್ಬಿದ ಹೆಮ್ಮರ. ಹೆಮ್ಮರವಾಗಿ ಬೆಳೆಯಲು ಬೇಕಾದ ಸತ್ವ ಬೀಜದಲ್ಲಿ ಅಡಗಿರುವಂತೆ ಓಂಕಾರದಲ್ಲಿ ಸಮಗ್ರ ಸಾಹಿತ್ಯಸತ್ವವೂ ಅಡಗಿದೆ. ಇದನ್ನೇ 'ಓಂಕಾರೇಣೈವ ಸರ್ವಾ ವಾಕ್ ಸಂತೃಣ್ಣಾ' ಎಂದಿದೆ ಉಪನಿಷತ್ತು.

## ಮೂರು ಮುಖಗಳ ವಿಶ್ಲೇಷಣೆ:

ಓಂಕಾರವನ್ನು ಮೂರು ಮುಖಗಳಿಂದ ವಿಶ್ಲೇಷಿಸಿ, ಅದರ ಅರ್ಥವ್ಯಾಪ್ತಿಯನ್ನು ಕಂಡುಹಿಡಿಯಬಹುದಾಗಿದೆ. ಅಖಂಡಶಬ್ದವಾಗಿ, ಮೂರು ವರ್ಣಗಳನ್ನೊಳಗೊಂಡದ್ದನ್ನಾಗಿ ಹಾಗೂ ಎಂಟು ವರ್ಣಗಳನ್ನೊಳಗೊಂಡದ್ದನ್ನಾಗಿ ಓಂಕಾರವನ್ನು ವಿವೇಚಿಸಬಹುದು.

## ಅಖಂಡ ಶಬ್ದವಾಗಿ:

ಓಂಕಾರವನ್ನು ಅಖಂಡ ಶಬ್ದವಾಗಿ ವಿವೇಚಿಸಿಕೊಳ್ಳುವಾಗ ಅದು ತಂತುಸಂತಾನ–ಹೆಣೆಯುವುದು ಎಂಬ ಅರ್ಥದಲ್ಲಿರುವ 'ವೇಞ್' ಅಥವಾ 'ಊಯೀ' ಎಂಬ ಧಾತುವಿನಿಂದ ನಿಷ್ಪನ್ನವಾದುದೆಂದಾಗಲೀ, ರಕ್ಷಣಾದ್ಯರ್ಥಗಳಲ್ಲಿರುವ 'ಅವ' ಧಾತುವಿನಿಂದ ನಿಷ್ಪನ್ನವಾದುದೆಂದಾಗಲೀ ಇಟ್ಟುಕೊಳ್ಳಬಹುದು.

'ವೇಞ್' ಅಥವಾ 'ಊಯೀ' ಎಂಬ ಧಾತುವಿನಿಂದ ನಿಷ್ಪನ್ನವೆಂದು ಇಟ್ಟುಕೊಂಡಲ್ಲಿ, ಎಲ್ಲೆಡೆ ವಿಶ್ವದ ಪ್ರತಿಯೊಂದು ಪದಾರ್ಥದಲ್ಲೂ ಒಳಗೂ ಹೊರಗೂ ಹೆಣೆದುಕೊಂಡಿರುವಂತೆ ವ್ಯಾಪಿಸಿರುವವನು (**ವಯತಿ ಊಯತೇ ವಾ ಸರ್ವಮಿತಿ ಓಂ**) ಎಂಬ ಅರ್ಥವು ಸಿದ್ಧಿಸುವುದು. ಅಥವಾ ಜಗತ್ತೆಲ್ಲ ಇವನಲ್ಲಿ ಹೆಣೆದುಕೊಂಡಿದೆ, ಗುಣಗಳೆಲ್ಲ ಇವನಲ್ಲಿ ಹೆಣೆದುಕೊಂಡಿವೆ, ಅರ್ಥಾತ್ ಆಶ್ರಯಿಸಿಕೊಂಡಿವೆ (**ವಯತಿ ಸರ್ವಮತ್ರೇತಿ, ವಯಂತಿ ಸರ್ವೇ ಗುಣಾ ಅತ್ರೇತಿ ಓಂ**) ಎಂಬ ಅರ್ಥವು ಫಲಿಸುವುದು.

## ಅರುವತ್ತು ಅರ್ಥಗಳು:

ರಕ್ಷಣೆ ಮುಂತಾದ ಅರ್ಥಗಳಲ್ಲಿ ಇರುವ 'ಅವ' ಧಾತುವಿನಿಂದ ನಿಷ್ಪನ್ನವಾದುದು ಓಂಕಾರ ಎಂದಿಟ್ಟುಕೊಂಡಲ್ಲಿ, ಓಂಕಾರದ ಮೂಲಕ ಭಗವಂತನ

ಪರವಾಗಿ ಸುಮಾರು ಅರ್ವತ್ತು ಅರ್ಥಗಳನ್ನು ಅನುಸಂಧಾನ ಮಾಡಿಕೊಳ್ಳ ಬಹುದಾಗಿದೆ.

೧) 'ಅವ ರಕ್ಷಣೇ' ಎಲ್ಲರನ್ನೂ ರಕ್ಷಿಸುವವನು (ಅವತಿ ರಕ್ಷತಿ ಸರ್ವಮಿತಿ ಓಂ) 'ಅತೋ ದೇವಾ ಅವಂತು ನೋ ಯತೋ ವಿಷ್ಣುರ್ವಿಚಕ್ರಮೇ' ಎಂದಿರು ವಂತೆ ತತ್ತ್ವಾಭಿಮಾನಿದೇವತೆಗಳ ಮೂಲಕ ರಕ್ಷಿಸುವವನು (ಆವಯತಿ ರಕ್ಷಯತೀತಿ ಓಮ್). 'ಗೋಪಾಯ ಮಾಂ ಶೇವಧಿಷ್ಟೇ' ಎಂದು ವಿದ್ಯಾಭಿ ಮಾನಿ ದೇವತೆಗಳು ಪ್ರಾರ್ಥಿಸಿರುವಂತೆ ಭಗವಂತನು ಅಯೋಗ್ಯರಿಗೆ ತಲುಪದಂತೆ ಜ್ಞಾನಿಗಳಿಂದ ರಕ್ಷಿಸಲ್ಪಡುವವನು (ಅವ್ಯತೇ ರಕ್ಷ್ಯತೇ ಜ್ಞಾನಿ ಭಿರಿತಿ ಓಂ).

೨) 'ಅವ ಗತೌ' ಭಕ್ತರಲ್ಲಿಗೆ ಭಕ್ತಿಪರವಶನಾಗಿ ಹೋಗುವವನು (ಅವತಿ ಗಚ್ಛತೀತಿ ಓಂ). ಭಕ್ತರಿಗೆ ಅಭೀಷ್ಟವನ್ನು ತಲುಪಿಸಿಕೊಡುವವನು (ಅವಯತಿ ಗಮಯತೀತಿ ಓಂ). ಜ್ಞೇಯಂ ಗಮ್ಯಂ..... ಎಂದಿರುವಂತೆ ಭಕ್ತರಿಂದ ಹೊಂದಲ್ಪಡುವವನು (ಅವ್ಯತೇ ಗಮ್ಯತ ಇತಿ ಓಂ).

೩) 'ಅವ ಕಾಂತೌ' ಕಾಂತಿ ಎಂದರೆ ರಮಣೀಯತೆ–ಮತ್ತೂ ಮತ್ತೂ ನೋಡ ಬೇಕೆನಿಸುವ ಸೌಂದರ್ಯ. 'ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ' ಎಂದು ಸ್ವಾಯಂಭುವಮನು ಹಂಬಲಿಸಿರುವಂತೆ ಭಕ್ತರಿಗೆ, ಜ್ಞಾನಿಗಳಿಗೆ ಮತ್ತೂ ಮತ್ತೂ ನೋಡಬೇಕೆನಿಸುವಷ್ಟು ರಮಣೀಯನಾಗಿರು ವವನು (ಅವತಿ ಕಾಂತೋ ಭವತೀತಿ ಓಂ). ಕೆಲವು ಪದಾರ್ಥಗಳು ರಮಣೀಯಗಳೆನಿಸುವಂತೆ ಮಾಡಿರುವವನು (ಆವಯತಿ ಕಾಂತಾನ್ ಭಾವಯ ತೀತಿ ಓಂ).

೪) 'ಅವ ಪ್ರೀತೌ' '......... ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್' ಎಂದಿರುವಂತೆ ನಿತ್ಯಪ್ರೀತನಾಗಿರುವವನು (ಅವತಿ ಪ್ರೀಣಾತೀತಿ ಓಂ). 'ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ......' ಎಂದಿರುವಂತೆ ಪ್ರಿಯರೆ ನಿಸುವ ಪತಿ ಮೊದಲಾದವರು ಪ್ರಿಯರಾಗುವಂತೆ ಮಾಡುವವನು (ಆವ ಯತಿ ಪ್ರೀಣಯತೀತಿ ಓಂ) 'ಪ್ರೀಣಯಾಮೋ ವಾಸುದೇವಂ ......' ಎಂದು ಸ್ತುತಿಸಿರುವಂತೆ ಭಕ್ತರಿಂದ ಪ್ರೀತಿಸಲ್ಪಡುವವನು (ಅವ್ಯತೇ ಪ್ರೀಯತೇ ಭಕ್ತೈರಿತಿ ಓಂ).

೫) 'ಅವ ಅವಗಮೇ' ಎಲ್ಲವನ್ನೂ ಬಲ್ಲವನು (ಅವತಿ ಅವಗಚ್ಛತಿ ಸರ್ವಮಿತಿ ಓಂ). 'ಯಸ್ಮಾದ್ ಬ್ರಹ್ಮೇಂದ್ರರುದ್ರಾದಿದೇವತಾನಾಂ ಶ್ರಿಯೋಽಪಿ ಚ । ಜ್ಞಾನಸ್ಫೂರ್ತಿಃ ಸದಾ ತಸ್ಮೈ ಹರಯೇ ಗುರವೇ ನಮಃ' ಎಂದು ಪ್ರಾರ್ಥಿ ಸಿರುವಂತೆ ಲಕ್ಷ್ಮೀಸಹಿತರಾದ ಉಳಿದೆಲ್ಲರಿಗೂ ತಿಳಿವಳಿಕೆ ನೀಡುವವನು (ಆವಯತಿ ಅವಗಮಯತೀತಿ ಓಂ). ಜ್ಞಾನಿಗಳಿಂದ ತಿಳಿಯಲ್ಪಡುವವನು (ಅವ್ಯತೇ ಅವಗಮ್ಯತೇ ಜ್ಞಾನಿಭಿರಿತಿ ಓಂ).

೬) 'ಅವ ತೃಪ್ತೌ' ನಿತ್ಯತೃಪ್ತನಾಗಿರುವವನು (ಅವತಿ ನಿತ್ಯಂ ತೃಪ್ಯತೀತಿ ಓಂ). ಭೋಜ್ಯಪದಾರ್ಥಗಳಲ್ಲಿದ್ದು ತೃಪ್ತಿಗೊಳಿಸುವವನು (ಆವಯತಿ ತರ್ಪಯತೀತಿ ಓಂ). ಭಕ್ತರಿಂದ ತೃಪ್ತಿಪಡಿಸಲ್ಪಡುವವನು (ಅವ್ಯತೇ ಭಕ್ತೈಃ ತರ್ಪ್ಯತ ಇತಿ ಓಂ).

೭) 'ಅವ ಪ್ರವೇಶೇ' 'ತದೇವಾನು ಪ್ರಾವಿಶತ್' ಎಂದಿರುವಂತೆ ತಾನು ಸೃಷ್ಟಿಸಿದ ಪದಾರ್ಥಗಳನ್ನೆಲ್ಲ ಪ್ರವೇಶಿಸಿರುವವನು (ಅವತಿ ಪ್ರವಿಶತಿ ಸರ್ವಮಿತಿ ಓಂ). ತತ್ತ್ವಾಭಿಮಾನಿದೇವತೆಗಳು ಜೀವಾತ್ಮರ ದೇಹವನ್ನು ಪ್ರವೇಶಿಸುವಂತೆ ಮಾಡುವವನು (ಅವಯತಿ ಪ್ರವೇಶಯತೀತಿ ಓಂ). ಮುಕ್ತಾತ್ಮರಿಂದ ಪ್ರವೇಶಿಸಲ್ಪಡುವವನು (ಅವ್ಯತೇ ಪ್ರವಿಶ್ಯತೇ ಮುಕ್ತೈರಿತಿ ಓಂ).

೮) 'ಅವ ಶ್ರವಣೇ' 'ಶ್ರೋತಾ ಮಂತಾ......' ಎಂಬುದಾಗಿ ಶ್ರುತಿಯು ಅವನೇ ಸ್ವತಂತ್ರವಾಗಿ ಕೇಳುವವನೆಂದು ಸಾರಿದೆ. ಅಲ್ಲದೆ, ಭಕ್ತರು ಮಾಡಿದ ಸ್ತುತಿಯನ್ನು ಅವನು ಕೇಳುವನು (ಅವತಿ ಶೃಣೋತೀತಿ ಓಂ). 'ಸಹ ನಾವವತು' ಎಂಬುದಾಗಿ ಗುರುಶಿಷ್ಯರ ಪಾಠಪ್ರವಚನ ಭಗವಂತನ ಕಿವಿಗೆ ಬೀಳುವಂತಾಗಲಿ ಎಂದು ಪ್ರಾರ್ಥಿಸಲಾಗಿದೆ. 'ಯೇನ ಶ್ರೋತ್ರಮಿದಂ ಶ್ರುತಂ' ಎಂದಿರುವಂತೆ ಅಥವಾ 'ಶ್ರೋತ್ರಸ್ಯ ಶ್ರೋತ್ರಂ........' ಎಂದಿರುವಂತೆ ಉಳಿದವರು ಕೇಳುವಂತೆ ಮಾಡುವವನೂ ಅವನು (ಆವಯತಿ ಶ್ರಾವಯತೀತಿ ಓಂ). 'ಆತ್ಮಾವಾಽರೇ ದ್ರಷ್ಟವ್ಯಃ ಶ್ರೋತವ್ಯೋ......' ಎಂದಿರುವಂತೆ ಶ್ರುತಿಗಳ ಮೂಲಕ ಕೇಳಲ್ಪಡುವವನು (ಅವ್ಯತೇ ಶ್ರೂಯತ ಇತಿ ಓಂ)

೯) 'ಅವ ಸಾಮರ್ಥ್ಯೇ' ಸರ್ವಸಮರ್ಥನಾಗಿರುವವನು (ಅವತಿ ಸಮರ್ಥೋ ಭವತೀತಿ ಓಂ). ಪಾಂಡವರೇ ಮುಂತಾದ ಭಕ್ತರನ್ನು ಸಮರ್ಥರನ್ನಾಗಿ ಮಾಡುವವನು (ಆವಯತಿ ಸಮರ್ಥಾನ್ ಕರೋತೀತಿ ಓಂ). ಸಕಲಶಾಸ್ತ್ರಗಳಿಂದ ಸರ್ವೋತ್ತಮನೆಂದು ನಿರೂಪಿಸಲ್ಪಡುವವನು (ಅವ್ಯತೇ ಸಕಲ ಶಾಸ್ತ್ರೈಃ ಸಮರ್ಥ್ಯತ ಇತಿ ಓಂ).

೧೦) 'ಅವ ಯಾಚನೇ' ವಾಮನಾವತಾರದಲ್ಲಿ ಬಲಿಯಿಂದ ದಾನವನ್ನು ಬೇಡಿರುವವನು (ಅವತಿ ಯಾಚತ ಇತಿ ಓಂ). ಮುಕ್ತಾತ್ಮರೂ ತನ್ನಲ್ಲಿ ಆನಂದ ಭಿಕ್ಷೆಯನ್ನು ಬೇಡುವಂತೆ ಮಾಡುವವನು (ಆವಯತಿ ಯಾಚಯತೀತಿ ಓಂ). ಬ್ರಹ್ಮಾದಿಗಳಿಂದ ಬೇಡಲ್ಪಡುವವನು (ಅವ್ಯತ ಯಾಚ್ಯತ ಇತಿ ಓಂ).

೧೧) 'ಅವ ಕ್ರಿಯಾಯಾಮ್' ಎಲ್ಲವನ್ನೂ ಸ್ವತಂತ್ರವಾಗಿ ಮಾಡುವವನು (ಅವತಿ ಸರ್ವಂ ಸ್ವಾತಂತ್ರ್ಯೇಣ ಕರೋತೀತಿ ಓಂ). 'ಕಾಮಃಕರ್ತಾ ಕಾಮಃಕಾರಯಿತಾ' ಎಂದು ನಾರಾಯಣೋಪನಿಷತ್ತು ಹೇಳಿದಂತೆ ನಮ್ಮಿಂದ ಬೇರೆ ಬೇರೆ ಚಟುವಟಿಕೆಯನ್ನು ಮಾಡಿಸುವವನು (ಆವಯತಿ ಕಾರಯತೀತಿ ಓಂ). ತನ್ನಿಂದಲೇ ತಾನು ಸೃಷ್ಟಿಸಲ್ಪಡುವವನು (ಅವ್ಯತೇ ಸ್ವಯಂ ಸ್ವೇನೈವ ಕ್ರಿಯತ

ಇತಿ ಓಂ). '........ ಸ್ವಯಮಕುರುತ' ಎಂಬುದಾಗಿ ಉಪನಿಷತ್ತಿನಲ್ಲಿ ಭಗವಂತನು ತನ್ನಿಂದ ತಾನೇ ಸೃಷ್ಟಿಸಲ್ಪಟ್ಟಿರುವನೆಂದು ಹೇಳಲಾಗಿದೆ.

೧೨) 'ಅವ ಇಚ್ಛಾಯಾಮ್' 'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' ಎಂದಿರುವಂತೆ ಎಲ್ಲವನ್ನೂ ಸೃಷ್ಟಿಸಲು ಇಚ್ಛಿಸುವವನು (ಅವತಿ ಸ್ರಷ್ಟುಂ ಇಚ್ಛತೀತಿ ಓಂ). ಭಕ್ತರಲ್ಲಿ ಸದಿಚ್ಛೆಗಳನ್ನು ಉಂಟುಮಾಡುವವನು (ಆವಯತಿ ಏಷಯತೀತಿ ಓಂ). ಎಲ್ಲರಿಂದಲೂ ಇಚ್ಛಿಸಲ್ಪಡುವವನು (ಅವ್ಯತೇ ಇಷ್ಯತೇ ಸರ್ವೈರಿತಿ ಓಂ).

೧೩) 'ಅವ ದೀಪ್ತೌ' ಪ್ರಕಾಶಸ್ವರೂಪಿ (ಅವತಿ ದೀಪ್ತೋ ಭವತೀತಿ ಓಂ). 'ತಸ್ಯ ಭಾಸಾ ಸರ್ವಮಿದಂ ವಿಭಾತಿ' ಎಂದಿರುವಂತೆ ಪ್ರಕಾಶಕಪದಾರ್ಥಗಳೆಲ್ಲ ಪ್ರಕಾಶಿಸುವಂತೆ ಮಾಡುವವನು (ಆವಯತಿ ದೀಪಯತೀತಿ ಓಂ). ಜ್ಞಾನಿಗಳಿಂದ ಉಪದೇಶಗಳ ಮೂಲಕ ಪ್ರಕಾಶಿಸಲ್ಪಡುವವನು (ಅವ್ಯತೇ ಜ್ಞಾನಿಭಿಃ ಜ್ಞಾನೇನ ವಾ ದೀಪ್ಯತ ಇತಿ ಓಂ).

೧೪) 'ಅವ ಅವಾಪ್ತೌ' '..... ತ್ರಿಷು ಲೋಕೇಷು ಕಿಂಚನ। ನಾನಾವಾಪ್ತಮವಾಪ್ತವ್ಯಂ' ಎಂದು ಗೀತಾಚಾರ್ಯ ಹೇಳಿಕೊಂಡಿರುವಂತೆ ಸರ್ವಾಭೀಷ್ಟಗಳನ್ನೂ ಹೊಂದಿರುವವನು (ಅವತಿ ಸರ್ವಾಭೀಷ್ಟಾನಿ ಅವಾಪ್ನೋತೀತಿ ಓಂ). '........ ಅವಾಪ್ತಿದಃ ಸಜ್ಜನಾನಾಮ್' ಎಂದಿರುವಂತೆ ತನ್ನನ್ನು ನಂಬಿರುವ ಭಕ್ತರ ಎಲ್ಲ ಅಭೀಷ್ಟಗಳನ್ನೂ ಪೂರೈಸುವವನು (ಆವಯತಿ ಭಕ್ತಾನ್ ಅಭೀಷ್ಟಾನಿ ಆವಾಪಯತೀತಿ ಓಂ). ಭಕ್ತರಿಂದ ಹೊಂದಲ್ಪಡುವವನು (ಅವ್ಯತೇ ಭಕ್ತೈರವಾಪ್ಯತ ಇತಿ ಓಂ).

೧೫) 'ಅವ ಆಲಿಂಗನೇ' ಸುಷುಪ್ತಿದೆಶೆಯಲ್ಲಿ ಜೀವಾತ್ಮರನ್ನು ಆಲಿಂಗಿಸುವವನು (ಅವತಿ ಆಲಿಂಗತೀತಿ ಓಂ). ಪತಿಪತ್ನಿಯರು ಅನುರಾಗಪೂರ್ವಕವಾಗಿ ಪರಸ್ಪರ ಆಲಿಂಗಿಸಿಕೊಳ್ಳುವಂತೆ ಮಾಡುವವನು (ಆವಯತಿ ಆಲಿಂಗಯತೀತಿ ಓಂ). ಲಕ್ಷ್ಮೀದೇವಿಯಿಂದ ಆಲಿಂಗಿಸಲ್ಪಡುವವನು (ಅವ್ಯತೇ ಲಕ್ಷ್ಮ್ಯಾ ಆಲಿಂಗ್ಯತ ಇತಿ ಓಂ).

೧೬) 'ಅವ ಹಿಂಸಾಯಾಮ್' ಪ್ರಳಯಕಾಲದಲ್ಲಿ ಎಲ್ಲರನ್ನೂ ಸಂಹರಿಸುವವನು (ಅವತಿ ಪ್ರಲಯೇ ಸರ್ವಂ ಹಿನಸ್ತೀತಿ ಓಂ). ಭೀಮಾದಿಗಳ ಮೂಲಕ ದುರ್ಜನರನ್ನು ಸಂಹರಿಸಿರುವವನು (ಆವಯತಿ ಭೀಮಾದಿದ್ವಾರಾ ದುರ್ಜನಾನ್ ಹಿಂಸಯತೀತಿ ಓಂ). 'ಯೇ ಕೇಚಾತ್ಮಹನೋ ಜನಾಃ......' ಎಂದಿರುವಂತೆ ಭಗವಂತನನ್ನು ಅನ್ಯಥಾ ಉಪಾಸಿಸುವುದೇ ಅವನ ಹಿಂಸೆ ನಡೆಸಿದಂತೆ ಆಗಿದ್ದು, ದುರ್ಜನರ ಅಂತಹ ಹಿಂಸೆಗೆ ಒಳಗಾಗುವನು (ಅವ್ಯತೇ ಹಿಂಸ್ಯತೇ ಅನ್ಯಥಾ ಉಪಾಸ್ಯತ ಇತಿ ಓಂ).

೧೭) 'ಅವ ಆದಾನೇ' ಎಲ್ಲವನ್ನೂ ತನ್ನದ್ದನ್ನಾಗಿ ಸ್ವೀಕರಿಸುವವನು (ಅವತಿ ಸರ್ವಂ ಸ್ವಾತ್ಮೀಯತಯಾ ಆದತ್ತ ಇತಿ ಓಂ). ಯೋಗ್ಯರಾದ ಗುರುಗಳಿಂದ ಜ್ಞಾನವನ್ನು ಸ್ವೀಕರಿಸುವಂತೆ ಮಾಡುವವನು (ಆವಯತಿ ಜ್ಞಾನಂ ಆವಾಪ ಯತೀತಿ ಓಂ). ಭಕ್ತರಿಂದ ತಮ್ಮ ಹೃದಯದಲ್ಲಿ ಸ್ವೀಕರಿಸಲ್ಪಡುವವನು (ಅವ್ಯತೇ ಆದೀಯತ ಇತಿ ಓಂ).

೧೮) 'ಅವ ಭಾಗೇ' ಪುಣ್ಯಪಾಪಗಳನ್ನು ವಿಭಾಗಿಸುವವನು (ಅವತಿ ವಿಭಜತ ಇತಿ ಓಂ). ತತ್ತ್ವಾಭಿಮಾನಿದೇವತೆಗಳ ಮೂಲಕ ಪುಣ್ಯಪಾಪಗಳನ್ನು ವಿಭಾಗಿಸುವಂತೆ ಮಾಡುವವನು (ಆವಯತಿ ಪುಣ್ಯಪಾಪೇ ವಿಭಾಜಯತೀತಿ ಓಂ). ತನ್ನಿಂದ ತಾನೇ ವಾಸುದೇವಾದಿ ರೂಪಗಳಿಂದ ವಿಭಜಿಸಲ್ಪಡುವವನು (ಅವ್ಯತೇ ಸ್ವಯಮೇವ ಸ್ವಾತ್ಮನಾ ವಿಭಜ್ಯತ ಇತಿ ಓಂ).

೧೯) 'ಅವ ವೃದ್ಧೌ' ಸಮೃದ್ಧನಾಗಿ ಇರುವವನು (ಅವತಿ ವೃದ್ಧೋ ಭವತೀತಿ ಓಂ). 'ಬ್ರಹ್ಮವಿದ್ ಬ್ರಹ್ಮೈವ ಭವತಿ' ಎಂದು ಸಾರಿರುವಂತೆ ಮುಕ್ತಾತ್ಮರನ್ನು ಅವರವರ ಯೋಗ್ಯತೆಗೆ ತಕ್ಕಂತೆ ಅಭಿವೃದ್ಧಿಗೊಳಿಸಿರುವವನು (ಆವಯತಿ ವರ್ಧಯತೀತಿ ಓಂ). ಜ್ಞಾನಿಗಳಿಂದ ಅಭಿವೃದ್ಧವಾದ ಗುಣಮಹಿಮೆಯುಳ್ಳವನು. (ಭಗವಂತನ ಗುಣಾಭಿವೃದ್ಧಿ ಎಂದರೆ ಅಭಿವ್ಯಕ್ತಿ ಮಾತ್ರ). (ಅವ್ಯತೇ ವರ್ಧ್ಯತೇ ಜ್ಞಾನಿಭಿರಿತಿ ಓಂ.)

೨೦) 'ಅವ ವ್ಯಾಪ್ತೌ' ಎಲ್ಲವನ್ನೂ ವ್ಯಾಪಿಸಿರುವವನು (ಅವತಿ ಸರ್ವಂ ವ್ಯಾಪ್ನೋತೀತಿ ಓಂ). ಕಾಲ, ಆಕಾಶ ಮುಂತಾದವು ವ್ಯಾಪಿಸುವಂತೆ ಮಾಡಿರುವವನು (ಆವಯತಿ ವ್ಯಾಪಯತೀತಿ ಓಂ). ಅನ್ನಮಯಾದಿರೂಪಗಳಲ್ಲಿ ತನ್ನಿಂದ ತಾನೇ ವ್ಯಾಪಿಸಲ್ಪಟ್ಟಿರುವವನು (ಅವ್ಯತೇ ಸ್ವಯಂ ಸ್ವೇನೈವ ವ್ಯಾಪ್ಯತ ಇತಿ ಓಂ).

ಹೀಗೆ ಅವಧಾತುವಿಗೆ ಸಾಮಾನ್ಯವಾಗಿ ೨೦ ಅರ್ಥಗಳೆಂದು ಇಟ್ಟುಕೊಂಡರೆ, ಅವುಗಳ ಕರ್ತ್ರರ್ಥಗಳನ್ನಷ್ಟೇ ಅಲ್ಲದೆ, ಕರ್ಮಾರ್ಥಗಳನ್ನೂ ಣಿಜಂತಾರ್ಥಗಳನ್ನೂ ಪರಿಗಣಿಸಿದರೆ, ಒಟ್ಟು ಸುಮಾರಾಗಿ ಅರುವತ್ತು ಅರ್ಥಗಳನ್ನು ಓಂಕಾರದಿಂದ ತಿಳಿಯಬಹುದಾಗಿದೆ.

## ಓಂಕಾರ ವರ್ಣತ್ರಯೋಪೇತವಾಗಿ:

ಅಕಾರ, ಉಕಾರ ಹಾಗೂ ಮಕಾರ ಎಂಬುದಾಗಿ ವರ್ಣತ್ರಯೋಪೇತವನ್ನಾಗಿ ಓಂಕಾರವನ್ನು ಪರಿಶೀಲಿಸಿದರೆ, ಆ ವರ್ಣಗಳು ಭಗವಂತನ ವ್ಯಕ್ತಿತ್ವದ ಬೇರೆ ಬೇರೆ ಮುಖಗಳನ್ನು ತಿಳಿಸುವ ಪದಗಳ 'ಅಬ್ರಿವಿಯೇಷನ್' ಎನಿಸಿದ್ದು, ಭಗವಂತನ ಅನೇಕ ಗುಣಧರ್ಮಗಳನ್ನು ಸೂಚಿಸಿಕೊಡಬಲ್ಲವು.

ಭೇದ ಎಂಬ ಅರ್ಥದ ಅಕಾರವು ಭಗವಂತನನ್ನು ಸರ್ವವಿಲಕ್ಷಣನನ್ನಾಗಿ ಉಪಾಸಿಸಬೇಕೆಂದೂ, ಉಕಾರವು ಉನ್ನತನನ್ನಾಗಿ ಉಪಾಸಿಸಬೇಕೆಂದೂ,

ಮಕಾರವು ಮೇಯ–ತಿಳಿಯಲು ಯೋಗ್ಯನನ್ನಾಗಿ ಉಪಾಸಿಸಬೇಕೆಂದೂ ತಿಳಿಸಿ ಕೊಡುವವು.

'ತ್ರಿವೃತ್ಕರಣ'ದ ಚೌಕಟ್ಟಿಗೆ ಒಳಪಟ್ಟ ಪ್ರಪಂಚದ ಮೂರು ಲೋಕಗಳೂ, ಮೂರು ಕಾಲಗಳೂ, ತ್ರಿಗುಣಗಳೂ, ತ್ರಿಗುಣಗಳ ಪ್ರಭಾವದಿಂದ ಉಂಟಾಗುವ ಎಚ್ಚರ–ಕನಸು–ನಿದ್ರೆ ಎಂಬ ಮೂರು ಅವಸ್ಥೆಗಳೂ, ಸೃಷ್ಟಿ–ಸ್ಥಿತಿ–ಸಂಹಾರಗಳೂ, ಕಾಯ–ವಾಕ್–ಮನಸ್ಸು ಎಂಬ ತ್ರಿಕರಣಗಳೂ ಓಂಕಾರದ ಅಕಾರದಿಂದ ಸೂಚಿತವಾದ 'ಆಪ್ತಿ' ಅಥವಾ 'ಆದಿಮತ್ತ್ವ' ಉಕಾರದಿಂದ ಸೂಚಿತವಾದ ಉತ್ಕರ್ಷ ಅಥವಾ ಉಭಯವತ್ತ್ವ, ಮಕಾರದಿಂದ ಸೂಚಿತವಾದ ಮಿತಿ ಅಥವಾ ಅಪೀತಿ –ಇವುಗಳಿಂದ ಸಂಗ್ರಹಿಸಲ್ಪಡುವವು.

## ಓಂಕಾರ ಅಷ್ಟವರ್ಣೋಪೇತವಾಗಿ:

ಓಂಕಾರದಲ್ಲಿ ಮೇಲ್ನೋಟಕ್ಕೆ ಮೂರು ವರ್ಣಗಳು ಇರುವಂತೆ ಕಂಡರೂ ಇನ್ನೂ ಐದು ವರ್ಣಗಳು ಅದರಲ್ಲಿ ಇವೆ.

'ಸೋऽಯಮಷ್ಟಾಕ್ಷರೋ ಮತಃ' ಎಂಬುದಾಗಿ ಪ್ರಣವವು ಎಂಟು ವರ್ಣಗಳನ್ನೊಳಗೊಂಡಿದೆ ಎಂದು ಶ್ರೀಮದಾಚಾರ್ಯರು ಪ್ರತಿಪಾದಿಸಿರುವರು. ಓಂಕಾರದಲ್ಲಿ ಅಕಾರ, ಉಕಾರ, ಮಕಾರಗಳಲ್ಲದೆ ನಾದ, ಬಿಂದು, ಕಲಾ, ಶಾಂತ ಹಾಗೂ ಅತಿಶಾಂತ ಎಂಬ ಮತ್ತೂ ಐದು ವರ್ಣಗಳು ಸೇರಿಕೊಂಡಿವೆ.

ಓಂಕಾರದ ಈ ಎಂಟು ಅಕ್ಷರಗಳಿಂದ ಪ್ರತಿಪಾದ್ಯಗಳಾದ ಭಗವದ್ರೂಪ ಗಳನ್ನು ಶ್ರೀಮದಾಚಾರ್ಯರು ಮೂರು ಪ್ರಕಾರಗಳಲ್ಲಿ ಹೇಳಿರುವರು. ವಿಶ್ವ, ತೈಜಸ, ಪ್ರಾಜ್ಞ, ತುರೀಯ, ಆತ್ಮ, ಅಂತರಾತ್ಮ, ಪರಮಾತ್ಮ ಹಾಗೂ ಜ್ಞಾನಾತ್ಮ ಎಂಬ ಈ ಎಂಟು ಭಗವದ್ರೂಪಗಳು ಓಂಕಾರದ ಎಂಟು ಅಕ್ಷರಗಳಿಂದ ಪ್ರತಿಪಾದ್ಯಗಳಾಗಿವೆ –ಎಂದು ತಂತ್ರಸಾರಸಂಗ್ರಹದಲ್ಲಿ ಹೇಳಿದ್ದರೆ, 'ಯತಿಪ್ರಣ ವಕಲ್ಪ'ದಲ್ಲಿ ಯತಿಗಳ ಉಪಾಸನೆಗಾಗಿ ಕೃಷ್ಣ, ರಾಮ, ನರಸಿಂಹ, ವರಾಹ, ವಿಷ್ಣು, ಪರಂಜ್ಯೋತಿ, ಪರಂಬ್ರಹ್ಮ ಹಾಗೂ ವಾಸುದೇವ –ಎಂದು ತಿಳಿಸಿರುವರು. ಅಲ್ಲದೆ ಹೃಷೀಕೇಶ, ಶ್ರೀಧರ, ವಾಮನ, ತ್ರಿವಿಕ್ರಮ, ಮಧುಸೂದನ, ವಿಷ್ಣು, ಗೋವಿಂದ ಹಾಗೂ ಮಾಧವ ಈ ಕ್ರಮದಲ್ಲೂ ಓಂಕಾರದ ಅಕ್ಷರಗಳಿಂದ ಭಗವದ್ರೂಪಗಳನ್ನು ಉಪಾಸಿಸಲು ತಿಳಿಸಿದ್ದಿದೆ.

ಓಂಕಾರದಲ್ಲಿ ಘಟಕಗಳಾದ ಎಂಟು ವರ್ಣಗಳಿಂದ ಐವತ್ತು ವರ್ಣಗಳೂ ಅಭಿವ್ಯಕ್ತಗಳಾಗಿವೆ. ಓಂಕಾರದ ಅಕಾರದಿಂದ ಸ್ವರವರ್ಣಗಳು; ಉಕಾರ, ಮಕಾರ, ನಾದ, ಬಿಂದು ಹಾಗೂ ಕಲಾ ಎಂಬ ಐದು ವರ್ಣಗಳಿಂದ ಐದು ವರ್ಗಗಳ ಅಕ್ಷರಗಳು; ಶಾಂತವರ್ಣದಿಂದ ಯರಲವ ಅಕ್ಷರಗಳು; ಅತಿಶಾಂತವರ್ಣದಿಂದ ಶಷಸಹಳ ಅಕ್ಷರಗಳು –ಹೀಗೆ ಐವತ್ತು ವರ್ಣಗಳು ಪ್ರಕಟವಾಗಿವೆ. ಯಾವುದೇ ಭಾಷೆಯ ಯಾವುದೇ ಶಬ್ದ ಈ ಐವತ್ತು ಅಕ್ಷರಗಳಲ್ಲಿ ಸೇರಿಕೊಂಡ

ಅಕ್ಷರಗಳಿಂದಲೇ ನಿರ್ಮಾಣವಾಗಿರುವುದು. ಆದ್ದರಿಂದ ಸಕಲ ಶಬ್ದಗಳೂ, ಅವುಗಳನ್ನೊಳಗೊಂಡ ಸಮಗ್ರ ವಾಙ್ಮಯವೂ ಓಂಕಾರದ ಅಭಿವ್ಯಕ್ತಿ 'ಓಂಕಾರೇಣೈವ ಸರ್ವಾವಾಕ್ ಸಂತೃಣ್ಣಾ' ಎಂದು ಹೇಳಲಾಗಿದೆ.

ಹೀಗೆ ಸಕಲ ವಾಙ್ಮಯವೂ ಓಂಕಾರದಿಂದ ಅಭಿವ್ಯಕ್ತವಾಗಿರುವಂತೆ ಅದರ ವ್ಯಾಖ್ಯಾನರೂಪವೂ ಆಗಿದೆ. ಓಂಕಾರವು ಸಾರುವ ಅರ್ಥವಿಸ್ತಾರದ ಏಕದೇಶ ವನ್ನಷ್ಟೇ ಉಳಿದ ಸಾಹಿತ್ಯ ತಿಳಿಸುತ್ತದೆ.

ಆದ್ದರಿಂದಲೇ ಯಾವುದೇ ವಿದ್ಯೆಯ ಆರಂಭದಲ್ಲಿ 'ಹರಿಃ ಓಂ' ಎಂದು ಪ್ರತಿಜ್ಞೆ ಮಾಡುವುದರ ಮೂಲಕ ಹರಿಯು ಓಂಕಾರವಾಚ್ಯನು. ಅಂತಹ ಓಂಕಾರದ ವ್ಯಾಖ್ಯಾನರೂಪದಲ್ಲಿರುವ ಇತರ ವಿದ್ಯೆಗಳಿಂದ ಪ್ರತಿಪಾದ್ಯನೂ ಅವನೇ ಎಂಬುದಾಗಿ ಮನವರಿಕೆ ಮಾಡಿಕೊಳ್ಳುವುದು ಸಂಪ್ರದಾಯ.

*

## 'ಭರ್ಗಃ' ಎಂದರೆ ರುದ್ರ ಅಲ್ಲ

ಅಮರಕೋಶದಲ್ಲಿ 'ಭರ್ಗ' ಶಬ್ದವನ್ನು ರುದ್ರ ಪರ್ಯಾಯವಾಚಕವನ್ನಾಗಿ ಪರಿಗಣಿಸಲಾಗಿದೆ. ಗಾಯತ್ರಿಯಲ್ಲೂ ಪುಲ್ಲಿಂಗ ಭರ್ಗ ಶಬ್ದವೇ ಇದೆ ಎಂದಿಟ್ಟು ಕೊಂಡು, ಆ ಶಬ್ದ ರುದ್ರನನ್ನೇ ಹೇಳುತ್ತಿದೆ. ಹಾಗೆಯೇ, 'ಭರ್ಗೋ ವೈ ರುದ್ರಃ' ಎಂಬುದಾಗಿ ಮೈತ್ರಾಯಣೀ ಉಪನಿಷತ್ತು ರುದ್ರನನ್ನೇ ಭರ್ಗ ಶಬ್ದವಾಚಕನನ್ನಾಗಿ ಹೇಳಿದೆ ಎಂದು ಶಂಕಿಸಬಾರದು.

ವೇದಾರ್ಥವನ್ನು ನಿರ್ಣಯಿಸುವಾಗ ಕೋಶಕ್ಕಿಂತಲೂ ಸ್ಮೃತಿಯೇ ಹೆಚ್ಚು ಮಾನ್ಯ. ಸ್ಮೃತಿಯು 'ಭರ್ಗಾಖ್ಯಂ ವಿಷ್ಣುಸಂಜ್ಞಂ ತು ಯಂ ಜ್ಞಾತ್ವಾಮೃತಮಶ್ನುತೇ' ಎಂಬುದಾಗಿ ಶ್ರೀವಿಷ್ಣುವನ್ನೇ ಭರ್ಗ ಶಬ್ದವಾಚ್ಯನನ್ನಾಗಿ ತಿಳಿಸಿದೆ.

'ರುದ್ರೋ ಬಹುಶಿರಾ ಬಭ್ರುಃ' ಎಂಬುದಾಗಿ ಶ್ರೀವಿಷ್ಣುಸಹಸ್ರನಾಮದಲ್ಲಿ ರುದ್ರ ಶಬ್ದವನ್ನು ಶ್ರೀವಿಷ್ಣುವಿನ ನಾಮವನ್ನಾಗಿ ಪರಿಗಣಿಸಿರುವುದರಿಂದ, ಅಂತಹ ವಿಷ್ಣುವನ್ನೇ ಮೈತ್ರಾಯಣೀ ಉಪನಿಷತ್ತು ರುದ್ರನಾಮದಿಂದ ಪರಾಮರ್ಶಿಸಿ, 'ಭರ್ಗೋ ವೈ ರುದ್ರಃ' ಎಂದು ರುದ್ರನಾಮವಾಚ್ಯನಾದ ವಿಷ್ಣುವನ್ನೇ 'ಭರ್ಗ' ಎನಿಸುವನೆಂದು ಘೋಷಿಸಿದೆ.

ಆದುದರಿಂದ ಗಾಯತ್ರಿಯ ಭರ್ಗ ಶಬ್ದವಾಚ್ಯ ವಿಷ್ಣುವೆ ಹೊರತು ರುದ್ರನಲ್ಲ.

— *ಶ್ರೀ ವಿದ್ಯೇಶತೀರ್ಥರು*

# ಅಹಿರ್ಬುಧ್ನ್ಯಸಂಹಿತೆಯಲ್ಲಿ ಗಾಯತ್ರ್ಯರ್ಥ

— ಬನ್ನಂಜೆ ಗೋವಿಂದಾಚಾರ್ಯ

### ತತ್

ಯಾ ಸಾ ಭೂತಿರ್ಮಹಾಶಕ್ತೇರ್ವೈಷ್ಣವ್ಯಾಃ ಕೋಟಿಭಾಗಜಾ ।
ಶುದ್ಧಾಶುದ್ಧಮಯೈರ್ಭಾವೈಸ್ತನುತೇ ವಿಸ್ತೃಣಾತಿ ತಾಮ್ ॥
ಪ್ರತಿಸಂಚರವೇಲಾಯಾಂ ತಾಮಯತ್ಯೇವ ತಾಂ ಪುನಃ ।
ತಾಯತೇ ತತ್ರ ತತ್ರೈವ ಭೂತ್ಯಂಶೇ ಧಾರಕಾತ್ಮನಾ ॥
ಪ್ರಮಾಣತ್ವೇನ ಭೂಯಶ್ಚ ತತ್ತದರ್ಥತಯಾ ಪುನಃ ।
ಅತಸ್ತದಿತಿ ಸಂಕಲ್ಪಃ ಪ್ರೋಚ್ಯತೇ ವೈಷ್ಣವಃ ಪರಃ ॥

### ಸವಿತುಃ

ಪ್ರಸೌತಿ ಸಕಲಾಶ್ಚೇಷ್ಟಾಃ ಪ್ರಸೂತೇ ಸಕಲಂ ಜಗತ್ ।
ಅವರ್ತೇರ್ಗತಿಕಾಂತ್ಯರ್ಥಾತ್ತರತೇರ್ದಾನಕರ್ಮಣಃ ॥
ಗತೋ ಹ್ಯವತಿ ಸರ್ವತ್ರ ಷಡ್ಭಿಃ ಕಾಂತೋ ಗುಣೈಃ ಪರಃ ।
ಭೋಗಾಪವರ್ಗಯೋರ್ದಾತಾ ಸವಿತೇತಿ ನಿರುಚ್ಯತೇ ॥

### ವರೇಣ್ಯಮ್

ವರೈರ್ನೇಯಂ ವರೇಣ್ಯಂ ತು ವರಾಃ ಖ್ಯಾತಾರ ಈರಿತಾಃ ।
ವರಣೀಯಂ ವರೇಣ್ಯಂ ವಾ ವರಂ ನಯತಿ ತತ್ಪರಮ್ ॥

### ಭರ್ಗಃ

ಭರ್ಗಸ್ತೇಜಃ ಸಮಾಖ್ಯಾತಂ ಪ್ರಭಾವಃ ಕರ್ತೃರೂಪತಾ ।
ಭರತೀದಂ ಜಗತ್ಕೃತ್ಸ್ನಂ ಸಂಭರತ್ಯಪಿ ಚೇಶ್ವರಾನ್ ॥
ರಮಯತ್ಯಪಿ ತತ್ಸರ್ವಂ ರಾತಿ ಚಾರ್ಥಮಭೀಪ್ಸಿತಮ್ ।
ಗಮಯತ್ಯಪಿ ತನ್ನಾಶಂ ಸ್ಯತಿ ಬಂಧಮಶೇಷತಃ ॥
ಭರ್ಜಯತ್ಯಖಿಲಂ ಕಷ್ಟಂ ಭ್ರಸ್ಜತೇಽನೇಹಸಂ ತಥಾ ।
ಅತೋ ಭರ್ಗಃ ಪರಂ ವಿಷ್ಣೋಃ ಸಂಕಲ್ಪಂ ವಿದುರದ್ಭುತಮ್ ॥

### ದೇವಸ್ಯ

ದ್ಯೋತನಃ ಸರ್ವಭಾವಾನಾಂ ದ್ಯೋತಮಾನಃ ಸ್ವಯಂ ಸದಾ ।
ಅಜ್ಞಾನಮಖಿಲಂ ಚಾನ್ಯಚ್ಚೋಧಯತ್ಯಖಿಲಂ ಜಗತ್ ॥

ಅತಃ ಸಕಲಮೇವೇದಂ ತತ್ರೋತಂ ಮಣಿಸೂತ್ರವತ್ ।
ಇತ ಈರಣ ಈಡ್ಯಶ್ಚ ವನಿತಃ ಸಕಲಂ ವಿಯತ್ ॥
ದೇವ ಇತ್ಯುದಿತೋ ವಿಷ್ಣುಃ ಪರಮಾತ್ಮಾ ಸನಾತನಃ ।

## ಧೀಮಹಿ

ಧೀಮಹೀತ್ಯತ್ರ ಧೀರ್ಜ್ಞಾನಂ ಮನನಂ ಭಾವನಂ ತಥಾ ॥

## ಧಿಯೋ ಯೋ ನಃ ಪ್ರಚೋದಯಾತ್

ಧಿಯೋ ಧೀಪೂರ್ವಿಕಾಶ್ಚೇಷ್ಟಾಃ ಪ್ರೇರಣಂ ತು ಪ್ರಚೋದನಮ್ ।
ಯಃ ಸರ್ವಶಕ್ತಿಃ ಸವಿತಾ ದೇವಃ ಸಂವಿನ್ಮಯಶ್ಚ ಯಃ ॥
ಯಶ್ಚ ಸರ್ವವಿದೀಶಾನೋ ಧಿಯಸ್ತಾಸ್ತಾಃ ಪ್ರಚೋದಯಾತ್ ।
ಸೃಷ್ಟಿಸ್ಥಿತಿಲಯತ್ರಾಣಕ್ರಿಯಾಕಾರಣಮವ್ಯಯಮ್ ॥
ತಸ್ಯ ದೇವಸ್ಯ ಸಂಕಲ್ಪಂ ಭರ್ಗಃಸಂಜ್ಞಮುಪಾಸ್ಮಹೇ ।
ಗಾಯಂತಂ ತ್ರಾಯಮಾಣಾಯಾ ಗಾಯತ್ರ್ಯಾ ಅರ್ಥ ಈದೃಶಃ ॥

ಭಗವಂತನನ್ನು ತನ್ನ ಲೀಲಾವಿಭೂತಿಯನ್ನು ನಾನಾರೂಪವಾಗಿ ವಿಸ್ತರಗೊಳಿಸಿ ಪ್ರಳಯಕಾಲದಲ್ಲಿ ಅದನ್ನು ತನ್ನಲ್ಲೇ ಹುದುಗಿಸಿ ಮತ್ತೆ ಸೃಷ್ಟಿಯಲ್ಲಿ ಅದನ್ನು ಬಹುರೂಪವಾಗಿಸುವುದರಿಂದ (ತನುತೇ, ವಿಸ್ಮೃಣಾತಿ, ತಾಮಯತಿ, ತಾಯತೇ ಚೇದಮಿತಿ ತತ್) ಈ ಭಗದಿಚ್ಛೆಯೇ 'ತತ್' ಎನ್ನಿಸಿಕೊಳ್ಳುತ್ತದೆ.

ಎಲ್ಲ ಚೇಷ್ಟೆಗಳನ್ನು ನಿಯಮಿಸುವುದರಿಂದ, ಎಲ್ಲ ಜಗತ್ತನ್ನು ಸೃಜಿಸುವುದರಿಂದ, ಎಲ್ಲೆಡೆಯೂ ವ್ಯಾಪಿಸಿ ಎಲ್ಲವನ್ನೂ ರಕ್ಷಿಸುತ್ತಿರುವುದರಿಂದ, ಷಡ್ಗುಣಗಳ ಸುಂದರಮೂರ್ತಿಯಾದುದರಿಂದ, ಭೋಗಾಪವರ್ಗಗಳನ್ನು ಕೊಡುವುದರಿಂದ ಶ್ರೀಹರಿ 'ಸವಿತೃ' ಎನ್ನಿಸಿಕೊಂಡಿದ್ದಾನೆ. (ಪ್ರಸೌತಿ, ಪ್ರಸೂತೇ ಇತಿ ಸವಿತಾ । ಸೈಃ = ಷಡ್ಗುಣೈಃ ವಃ = ಕಾಂತಃ, ಭೋಗಾಪವರ್ಗೌ ತರತಿ = ದದಾತೀತಿ = ತಾ, ತಥಾಚ ಸವತ್ಯೆವ ಸವಿತಾ)

ಸಜ್ಜನರಿಂದ ಗಮ್ಯವಾದುದರಿಂದ ಅವನ ಸಂಕಲ್ಪವು 'ವರೇಣ್ಯ'ವೆನಿಸಿದೆ.

ಜಗತ್ತನ್ನೆಲ್ಲ ಧರಿಸಿರುವುದರಿಂದ, ರಮಿಸಿರುವುದರಿಂದ, ಇಷ್ಟವನ್ನಿತ್ತು ಸಲಹುವುದರಿಂದ, ಪ್ರಳಯಕಾಲದಲ್ಲಿ ಎಲ್ಲವನ್ನೂ ನಾಶಗೊಳಿಸಿ ಯೋಗ್ಯರಿಗೆ ಮುಕ್ತಿಯನ್ನು ಕರುಣಿಸುವುದರಿಂದ, ಎಲ್ಲ ಕಷ್ಟಗಳನ್ನೂ ಸುಟ್ಟುಬಿಡುವುದರಿಂದ ಕಾಲವನ್ನು ಪರಿಣತಗೊಳಿಸುವುದರಿಂದ ಕೂಡ ಶ್ರೀಹರಿಯ ಸಂಕಲ್ಪ 'ಭರ್ಗಃ' ಎನ್ನಿಸಿಕೊಂಡಿದೆ. (ಭರತೀತಿ = ಭಃ । ರಮಯತಿ ರಾತಿ = ದದಾತಿ ಚೇತಿ = ರಃ, ನಾಶಂ ಗಮಯತೀತಿ = ಗಃ. ಸ್ಯತಿ ಬಂಧಮಿತಿ = ಸ್, ತಥಾ ಚ ಭರ್ಗಃ)

ಎಲ್ಲ ವಸ್ತುಗಳನ್ನು ಬೆಳಗಿಸಿ ತಾನು ಜ್ಯೋತೀರೂಪನಾಗಿದ್ದು ಜಗತ್ತಿನ ಅಜ್ಞಾನದ ಕತ್ತಲನ್ನು ತೊಡೆಯುತ್ತಿರುವುದರಿಂದ, ಜಗತ್ತನ್ನು ನಿಯಮಿಸುವುದರಿಂದ,

ಜಗತ್ತಿನಿಂದ ಸ್ತುತನಾದುದರಿಂದ, ಆಶ್ರಿತನಾದುದರಿಂದ ಹರಿಯೆನ್ನು 'ದೇವ' ನೆನ್ನುವರು. (ಸ್ವಯಂ ದೀವ್ಯತಿ = ದ್ಯೋತತೇ, ಜಗಚ್ಚ ದೇವಯತಿ = ಪ್ರಕಾಶಯತೀತಿ = ದೇವಃ। ದೀವ್ಯತೇ = ಗಮ್ಯತೇ ಇತಿ ದೇವಃ। ದೇವಯತಿ = ಪ್ರೇರಯತೀತಿ = ದೇವಃ। ದೀವ್ಯತೇ ಸ್ತೂಯತ ಇತಿ ದೇವಃ)

*

## '....... ವ್ಯಾಹೃತಿತ್ರಿಗುಣಾತ್ಮನಃ" –ಎನಿದರ ಅರ್ಥ?

ಅನ್ಯೋನ್ಯವಾಗಿ ಬೇರೆ ಬೇರೆ ಮಂತ್ರಗಳ ಅಭಿವ್ಯಕ್ತಿಯನ್ನು ತಿಳಿಸುತ್ತ ಶ್ರೀಮದಾಚಾರ್ಯರು ತಮ್ಮ ತಂತ್ರಸಾರಸಂಗ್ರಹದಲ್ಲಿ (೧-೧೪) ನಾರಾಯಣಾಷ್ಟಾಕ್ಷರಮಂತ್ರದಿಂದ ಗಾಯತ್ರಿಯ ಅಭಿವ್ಯಕ್ತಿಯನ್ನು ಹೀಗೆ ತಿಳಿಸಿರುವರು–

ನಾರಾಯಣಾಷ್ಟಾಕ್ಷರಾಚ್ಚ ವ್ಯಾಹೃತಿತ್ರಿಗುಣಾತ್ಮನಃ ।
ವೇದಮಾತಾ ತು ಗಾಯತ್ರೀ.............. ॥

ಇಲ್ಲಿಯ ವ್ಯಾಹೃತಿ ಶಬ್ದಕ್ಕೆ ವ್ಯಾಹರಣ, ಉಚ್ಚಾರಣ ಎಂಬ ಅರ್ಥ. ಆದುದರಿಂದ ಮೂರುಬಾರಿ ಉಚ್ಚರಿಸಲ್ಪಟ್ಟ ನಾರಾಯಣಾಷ್ಟಾಕ್ಷರದಿಂದ ಗಾಯತ್ರಿಯು ಅಭಿವ್ಯಕ್ತವಾಗಿದೆ ಎಂದು ಈ ಮಾತಿನ ಅರ್ಥ.

ಆದರೆ ಛಲಾರಿ ಶೇಷಾಚಾರ್ಯರ ಟೀಕೆಯಲ್ಲಿ ವ್ಯಾಹೃತಿ ಎಂಬ ಶಬ್ದಕ್ಕೆ ಭೂರಾದಿವ್ಯಾಹೃತಿ ಎಂಬ ಅರ್ಥವನ್ನು ಇಟ್ಟುಕೊಂಡು, ನಾಲ್ಕು ಬಾರಿ ಉಚ್ಚರಿಸಲ್ಪಟ್ಟ ('ಪುನರಪಿ' ಪದದಿಂದ ನಾಲ್ಕನೇ ಬಾರಿಯ ಉಚ್ಚಾರಣೆಯನ್ನಿಟ್ಟುಕೊಳ್ಳಬೇಕು) ಹಾಗೂ ಒಮ್ಮೆ ಉಚ್ಚರಿಸಲ್ಪಟ್ಟ ನಾರಾಯಣಾಷ್ಟಾಕ್ಷರದಿಂದ ಇಪ್ಪತ್ನಾಲ್ಕು ಅಕ್ಷರಗಳ ಗಾಯತ್ರೀ ಮಂತ್ರವು ಅಭಿವ್ಯಕ್ತವಾಗಿದೆ ಎಂದು ವ್ಯಾಖ್ಯಾನಿಸಲಾಗಿದೆ.

ಆದರೆ ಈ ವ್ಯಾಖ್ಯಾನ ಶ್ರೀರಾಘವೇಂದ್ರಸ್ವಾಮಿಗಳಿಗೆ ಅಸಮ್ಮತವಾದದ್ದು. ಶ್ರೀರಾಘವೇಂದ್ರಸ್ವಾಮಿಗಳು ಶ್ರೀಮನ್ನ್ಯಾಯಸುಧಾದ 'ತ್ರಿಪದಾಯಾ ಗಾಯತ್ರ್ಯಾ ವ್ಯಾಹೃತಿತ್ರಯವ್ಯಾಖ್ಯಾನಸ್ಯಾಗಮಸಿದ್ಧತ್ವಾತ್' ಎಂಬ ಮಾತಿನ ಬಗ್ಗೆ ತಮ್ಮ ಪರಿಮಳ ಟಿಪ್ಪಣಿಯಲ್ಲಿ ವಿವರಣೆ ನೀಡುತ್ತ, "ಕೆಲವರು ತಂತ್ರಸಾರದ '....... ವ್ಯಾಹೃತಿ ತ್ರಿಗುಣಾತ್ಮನಃ' ಎಂಬ ಮಾತನ್ನು ವ್ಯಾಹೃತಿಯಿಂದ ಗಾಯತ್ರಿಯ ಅಭಿವ್ಯಕ್ತಿವಿಷಯದಲ್ಲಿ ಪ್ರಮಾಣವನ್ನಾಗಿ ತೋರಿಸಿರುವುದನ್ನು ಉಲ್ಲೇಖಿಸಿ, ಅದು ಮಾತ್ರ ವಿಚಾರಣೀಯ. ಯಾಕೆಂದರೆ ತಂತ್ರಸಾರಸಂಗ್ರಹದ ವ್ಯಾಹೃತಿ ಶಬ್ದಕ್ಕೆ ವ್ಯಾಹರಣ ಎಂಬ ಅರ್ಥ" ಎಂದು ಸ್ಪಷ್ಟಪಡಿಸಿದ್ದಾರೆ.

ಹಾಗಾದರೆ ವ್ಯಾಹೃತಿಯಿಂದ ಗಾಯತ್ರಿಯು ಅಭಿವ್ಯಕ್ತವಾಗಿದೆ ಎಂದು ತಿಳಿಸುವ ಆಗಮ ಯಾವುದು? ಕೆಲವರು ಪಂಚರಾತ್ರಾಗಮ ಎನ್ನುವರು. ಆಚಾರ್ಯರು ಸ್ಪಷ್ಟವಾಗಿ ಎಲ್ಲೂ ಉಲ್ಲೇಖಿಸದಿರುವುದರಿಂದ ಸುಧಾದಲ್ಲೂ ಆ ಆಗಮವನ್ನು ಉದಾಹರಿಸಲಿಲ್ಲ ಎಂದೂ ಶ್ರೀರಾಘವೇಂದ್ರಸ್ವಾಮಿಗಳು ನಿರೂಪಿಸಿರುವರು.

— ಸಗ್ರಿ.

# ಗಾಯತ್ರಿಯಲ್ಲಿ ದಶಾವತಾರಗಳ ಅನುಸಂಧಾನ

ಬನ್ನಂಜೆ ಗೋವಿಂದಾಚಾರ್ಯ

ವೇದವು ತನ್ನ ಉದಾತ್ತಾದಿ ಸ್ವರಗಳಿಂದಲೂ, ಅಕ್ಷರಗಳಿಂದಲೂ, ಶಬ್ದ ಗಳಿಂದಲೂ, ವಾಕ್ಯಗಳಿಂದಲೂ ಪ್ರತ್ಯೇಕವಾಗಿ ಭಗವಂತನನ್ನು ಸ್ತುತಿಸುತ್ತಿದೆ. ಆದ್ದರಿಂದಲೇ ಸ್ವರಸಮನ್ವಯ, ಅಕ್ಷರಸಮನ್ವಯ, ಶಬ್ದಸಮನ್ವಯ, ವಾಕ್ಯ ಸಮನ್ವಯ –ಹೀಗೆ ನಾಲ್ಕು ವಿಧವಾಗಿ ವೇದವನ್ನು ಭಗವಂತನಲ್ಲಿ ಸಮನ್ವಯಿಸ ಬಹುದಾಗಿದೆ.

## ಶ್ರೀಮದಾಚಾರ್ಯರ ಸೂಚನೆ:

'ವೇದಮಾತಾ ತು ಗಾಯತ್ರೀ' ಎಂದು ಪ್ರಸಿದ್ಧವಿರುವಂತೆ ವೇದಸಾಹಿತ್ಯಕ್ಕೆ ಮಾತೃಸ್ಥಾನದಲ್ಲಿರುವ ಗಾಯತ್ರೀ ಮಂತ್ರದಲ್ಲೂ ಈ ಎಲ್ಲಾ ರೀತಿಯ ಸಮನ್ವಯಗಳೂ ಸಂಭವಿಸಿಯೇ ತೀರುವುವು. ಭಗವಂತನಲ್ಲಿ ಗಾಯತ್ರೀ ಮಂತ್ರದ ವಾಕ್ಯಸಮನ್ವಯ ಹೇಗೆಂಬುದನ್ನು ಶ್ರೀಮದಾಚಾರ್ಯರು ಋಗ್ಭಾಷ್ಯದ ಆರಂಭ ದಲ್ಲೇ ತೋರಿಸಿಕೊಟ್ಟಿರುವರು. ಗಾಯತ್ರಿಯ ಶಬ್ದಸಮನ್ವಯವನ್ನು ಭಗವಂತನ ದಶಾವತಾರಗಳಿಗೆ ಸಂಬಂಧಿಸಿದಂತೆ ಮಾಡಬೇಕೆಂಬುದನ್ನು ಶ್ರೀಮದಾಚಾರ್ಯರು ಛಂದೋಗಭಾಷ್ಯದಲ್ಲಿ ಸೂಚಿಸಿರುವರು. 'ಷಡ್ವಿಧಾ ಗಾಯತ್ರೀ' ಎಂಬುದಾಗಿ ಗಾಯತ್ರಿಯಲ್ಲಿ ಆರು ಭಗವದ್ರೂಪಗಳು ಪ್ರತಿಪಾದ್ಯಗಳಾಗಿವೆ ಎನ್ನುವ ಛಾಂದೋಗ್ಯೋಪನಿಷತ್ತು (೩–೨–೧) 'ಗಾಯತ್ರೀ.............ಭೂತಂ ಯದಿದಂ ಕಿಂಚ' ಎಂಬ ಮಾತಲ್ಲಿ ಗಾಯತ್ರೀ ಪ್ರತಿಪಾದ್ಯ ಭಗದ್ರೂಪಗಳಲ್ಲಿ ಎರಡನೇ ರೂಪವನ್ನು ಹೇಳಿದ್ದು, ಅದರ ಅಭಿಪ್ರಾಯವನ್ನು ಶ್ರೀಮದಾಚಾರ್ಯರು 'ಸತ್ತತ್ವ'ದ ಮೂಲಕ ಹೀಗೆ ಸ್ಪಷ್ಟೀಕರಿಸಿರುವರು –ಗಾಯತ್ರ್ಯಾಂ ಸಂಸ್ಥಿತೋ ವಿಷ್ಣುಃ...........ದ್ವಿತೀಯಶ್ಚೈವ ಮತ್ಸ್ಯಾದಿಭೂತನಾಮಾವತಾರಗಃ' ಇದರಿಂದಾಗಿ ಭಗವಂತನ ಮತ್ಸ್ಯಾದಿ ದಶಾವತಾರಗಳು ಗಾಯತ್ರಿ ಪ್ರತಿಪಾದ್ಯಗಳು ಎಂದು ತಿಳಿಯುವುದು. ಆದರೆ ಯಾವ ಶಬ್ದದಿಂದ ಯಾವ ಅವತಾರ? ಅಂದರೆ ಗಾಯತ್ರಿಯಲ್ಲಿ ತತ್, ಸವಿತುಃ, ವರೇಣ್ಯಂ, ಭರ್ಗಃ, ದೇವಸ್ಯ, ಧೀಮಹಿ, ಧಿಯಃ, ಯಃ, ನಃ ಹಾಗೂ ಪ್ರಚೋದಯಾತ್ –ಹೀಗೆ ಹತ್ತು ಶಬ್ದಗಳು ಇದ್ದು, ಇವು ಕ್ರಮವಾಗಿ ಭಗವಂತನ ದಶಾವತಾರಗಳನ್ನು ಉಲ್ಲೇಖಿಸುತ್ತಿವೆ.

## ತತ್–ಮತ್ಸ್ಯ:

ದಶಾವತಾರಗಳಲ್ಲಿ ಮತ್ಸ್ಯಾವತಾರ ಮೊದಲನೆಯದು. ಸತ್ಯವ್ರತ ರಾಜನ ಬೊಗಸೆಯಲ್ಲಿ ಹಿಡಿಯುವಷ್ಟು ಚಿಕ್ಕ ಆಕಾರದಲ್ಲಿದ್ದ ಮತ್ಸ್ಯ ಕ್ರಮೇಣ ದೊಡ್ಡದಾಗುತ್ತಾ ಬಂದು ಕೊಡ, ಕೆರೆ, ಸರೋವರ, ನದಿ ಮೊದಲಾದುವುಗಳಲ್ಲಿ

ಹಿಡಿಸಲಾರದಷ್ಟು ವಿಸ್ತಾರಹೊಂದುತ್ತಾ ಹೋಗುವುದು. ಹೀಗೆ ಮತ್ಸ್ಯಾವತಾರದಲ್ಲಿ ಭಗವಂತನು ತನ್ನ ದೇಶತಃ ವಿಸ್ತಾರ ಹೊಂದಿರುವ ಗುಣವನ್ನು ಪ್ರಕಟಿಸಿದ್ದು, ಗಾಯತ್ರಿಯ ಮೊದಲ ಶಬ್ದ 'ತತ್' ವಿಸ್ತಾರ ಎಂಬ ಅರ್ಥವುಳ್ಳ 'ತನು' ಧಾತುವಿನಿಂದ ನಿಷ್ಪನ್ನವಾಗಿದ್ದು. 'ತನೋತಿ ವಿಸ್ತೃತೋ ಭವತೀತಿ' ಎಂಬುದಾಗಿ ಆ ಗುಣವನ್ನೇ ಉಲ್ಲೇಖಿಸುವುದರ ಮೂಲಕ ಮತ್ಸ್ಯಾವತಾರವನ್ನು ಜ್ಞಾಪಿಸಿ ಕೊಡುವುದು.

**ಸವಿತುಃ–ಕೂರ್ಮ:**

ದೇವಾಸುರರು ಸೇರಿ ಅಮೃತಮಥನದಲ್ಲಿ ತೊಡಗಿದಾಗ ಮಂದರಪರ್ವತ ವನ್ನೇ ಕಡೆಗೋಲನ್ನಾಗಿ ಬಳಸಿಕೊಳ್ಳುವರು. ಅದು ಭಾರದಿಂದ ಸಮುದ್ರದಲ್ಲಿ ಮುಳುಗಿಹೋಗಲು ಅದನ್ನು ತನ್ನ ಬೆನ್ನಿನ ಮೂಲಕ ಹೊತ್ತು ಅಮೃತದ ಮಥನಕ್ಕೆ ಅನುಕೂಲಿಸಿಕೊಟ್ಟ ಅವತಾರ ಕೂರ್ಮಾವತಾರ. ಅಮೃತದ ಅಭಿ ವ್ಯಕ್ತಿಗೆ, ಸವನ ಹಿಂಡುವಿಕೆಗೆ ಕಾರಣವಾದ ಕೂರ್ಮಾವತಾರವು ಸೃಷ್ಟಿಗುಣವನ್ನು ಸಾರುತ್ತಿರುವ ಗಾಯತ್ರಿಯ 'ಸವಿತುಃ' ಶಬ್ದದಿಂದ ಪ್ರತಿವಾದಿಸಲ್ಪಟ್ಟಿದೆ.

**ವರೇಣ್ಯಂ–ವರಾಹ:**

ಭೂಮಿಯು ತನ್ನ ಕಕ್ಷೆಯಿಂದ ಕುಸಿದುಬೀಳುವಂತೆ ಮಾಡಲು ತೊಡಗಿದ ಹಿರಣ್ಯಾಕ್ಷನನ್ನು ಸಂಹರಿಸಿ ಭೂಮಿಯ ಉದ್ಧಾರ ನಡೆಸಿರುವ ಭಗವದವತಾರ ವರಾಹ. ದೋಷದೂರನಾಗಿದ್ದು, ಗುಣಪೂರ್ಣನಾಗಿರುವ ಪ್ರಯುಕ್ತ ಎಲ್ಲರಿಗೂ ಉಪಾದೇಯನಾಗಿರುವುದರಿಂದಲೂ ಯಾರಿಗೂ ಹೇಯವಲ್ಲದಿರುವುದರಿಂದಲೂ (ವ್ರಿಯತೇ ಸಜ್ಜನೈರಿತಿ ವರಃ । ಅಹೇಯತ್ವಾದಹಃ । ವರಾಶ್ಚಾಸಾವಹಶ್ಚ ವರಾಹಃ) ವರಾಹ ಎನಿಸಿರುವ ಭಗವದ್ರೂಪವು ಅದೇ ಅರ್ಥವುಳ್ಳ (ವರಣೀಯತ ತ್ವಃ ವರೇಣ್ಯಂ) 'ವರೇಣ್ಯ' ಶಬ್ದದಿಂದ ವಾಚ್ಯವಾಗಿರುವುದು.

**ಭರ್ಗಃ–ನೃಸಿಂಹ:**

'.........ದಹದಹ ನರಸಿಂಹಾಸಹ್ಯವೀರ್ಯಾಹಿತಂ ಮೇ' ಎಂದು ಪ್ರಾರ್ಥಿಸಿ ಕೊಂಡಿರುವಂತೆ ಹಿರಣ್ಯಕಶಿಪುವೇ ಮೊದಲಾದ ಅಸುರರನ್ನು, ದುಷ್ಟಶಕ್ತಿಯನ್ನು ನಿಗ್ರಹಿಸಿ ಪ್ರಹ್ಲಾದನೇ ಮೊದಲಾದ ಸಜ್ಜನರ ಅಹಿತವನ್ನು ಸುಡುವವನು, ನಾಶಮಾಡುವವನು ನೃಸಿಂಹನು, ಪರಮಪುರುಷನಾಗಿದ್ದು, ಭಕ್ತರ ಅನಿಷ್ಟವನ್ನು ಹೋಗಲಾಡಿಸುವುದರಿಂದಲೇ (ಹಿನಸ್ತಿ ಸಜ್ಜನಾನಾಂ ಅನಿಷ್ಟಂ ನಾಶಯತೀತಿ ಸಿಂಹಃ । ನಾ ಚಾಸೌ ಸಿಂಹಶ್ಚ ನೃಸಿಂಹಃ) ನೃಸಿಂಹ ಎನಿಸಿರುವ ಈ 'ಭಗವದ್ರೂಪವು ಗಾಯತ್ರಿಯ 'ಭರ್ಗಃ' ಎಂಬ ಶಬ್ದದಿಂದ ಪ್ರತಿಪಾದ್ಯವಾಗಿದೆ. ಭರ್ಗ ಶಬ್ದಕ್ಕೆ ಭರ್ಜನಕರ್ತೃ ಎಂಬ ಅರ್ಥವನ್ನು ಇಟ್ಟುಕೊಂಡಾಗ ಅದು ನೃಸಿಂಹ ನಾಮದ ಅರ್ಥವನ್ನೇ ಹೇಳುತ್ತಿದ್ದು, ನೃಸಿಂಹಾವತಾರಕ್ಕೆ ದ್ಯೋತಕ ವಾಗಬಲ್ಲದು.

**ದೇವಸ್ಯ–ವಾಮನ:**

ಬಲಿಯಿಂದ ಭೂಮ್ಯಾದಿಗಳನ್ನೆಲ್ಲಾ ಕಸಿದುಕೊಂಡು ಸ್ವರ್ಗಾಧಿಪತ್ಯವನ್ನು ದೇವತೆಗಳಿಗೆ ಒಪ್ಪಿಸುವುದಕ್ಕಾಗಿ ತಾಳಿದ ಅವತಾರ ವಾಮನಾವತಾರ. ವಟುವಾಗಿ ಹೋದ ವಾಮನ ಬಲಿಯಲ್ಲಿ ಮೂರು ಹೆಜ್ಜೆಯಷ್ಟು ಸ್ಥಳವನ್ನು ದಾನನೀಡಲು ಕೇಳುವನು. ಅಷ್ಟು ಚಿಕ್ಕ ಪ್ರಮಾಣದ ದಾನವನ್ನು ನೀಡಲು ಬಲಿಯು ಸಂಕೋಚ ಪಡುವನು. ದೊಡ್ಡ ಪ್ರಮಾಣದಲ್ಲಿ ದಾನಕೇಳಲು ವಿನಂತಿಸುವನು. ಆದರೆ ವಾಮನನು ತನಗೆ ಅಷ್ಟೇ ಸಾಕೆಂದು ಅಷ್ಟನ್ನೇ ಕೊಡಲು ಒತ್ತಾಯಿಸುವನು. ಹೀಗೆ ದಾನದ ವಿಷಯದಲ್ಲಿ ಬಲಿಯ ಜೊತೆ ವ್ಯವಹಾರ ನಡೆಸಿದ ಅವತಾರ ವಾಮನಾವತಾರ. ವ್ಯವಹಾರಾರ್ಥದಲ್ಲಿರುವ 'ದಿವ್' ಧಾತುವಿನಿಂದ ನಿಷ್ಪನ್ನವಾದ 'ದೇವ' ಶಬ್ದವು ಬಲಿಯ ಜೊತೆ ವ್ಯವಹಾರ ನಡೆಸಿರುವ ಘಟನೆಯನ್ನು ಉಲ್ಲೇಖಿಸುವುದರ ಮೂಲಕ ವಾಮನ ಅವತಾರವನ್ನು ಜ್ಞಾಪಿಸಿಕೊಡುವುದು.

**ಧೀಮಹಿ–ಪರಶುರಾಮ:**

'ಅವಿಜಿತಕುನೃಪತಿ ಸಮಿತಿವಿಖಂಡನ ರಮಾವರ ವೀರಪ ಭವ ಮಮ ಶರಣಮ್' ಎಂದು ಸ್ತುತಿಸಲ್ಪಟ್ಟಿರುವಂತೆ ೨೧ ಬಾರಿ ದುಷ್ಟ ಕ್ಷತ್ರಿಯರನ್ನು ಸಂಹರಿಸಿ ಭೂಭಾರವನ್ನು ಇಳಿಸಿದ ಭಗವದವತಾರ ಪರಶುರಾಮಾವತಾರ. ಹೀಗೆ ಭೂಭಾರವನ್ನು ಇಳಿಸಿರುವುದರಿಂದ ಪರಶುರಾಮನು ಭೂಮಿಯನ್ನು ಪೋಷಿಸಿ ರುವನು, ಅಭಿವೃದ್ಧಿಪಡಿಸಿರುವನು; ಗಾಯತ್ರಿಯ ಧೀಮಹಿ ಶಬ್ದ ಇದನ್ನೇ ಹೇಳುತ್ತಿದೆ. 'ಮಹೀಂ ಧಿನೋತಿ ಪುಷ್ಣಾತೀತಿ ಧೀಮಹಿ' ಎಂಬ ವ್ಯುತ್ಪತ್ತಿಯ ನ್ನಿಟ್ಟುಕೊಂಡಾಗ ಭೂಮಿಯನ್ನು ಪೋಷಿಸಿದ ಪರಶುರಾಮನ ಸ್ಮರಣೆ 'ಧೀಮಹಿ' ಶಬ್ದದಿಂದ ಬರುವುದು.

**ಧಿಯಃ–ರಾಮ:**

ವಾಯುದೇವರ ಪ್ರಥಮಾವತಾರವಾದ ಹನುಮಂತನಿಗೆ ಸಾಕಷ್ಟು ತನ್ನ ಸೇವಾವಕಾಶವನ್ನು ಒದಗಿಸಿ ಆ ಮೂಲಕ ವಾಯುದೇವರು ಸಾಕಷ್ಟು ಪುಷ್ಟಿಯನ್ನು ಹೊಂದುವಂತೆ ಅನುಗ್ರಹಿಸಿದ ಭಗವದವತಾರ ರಾಮಾವತಾರ. ಗಾಯತ್ರಿಯ 'ಧಿಯಃ' ಶಬ್ದ ಈ ಅರ್ಥವನ್ನೇ ಹೇಳುತ್ತಿದೆ. 'ಯಂ' ವಾಯುಬೀಜ ಮಂತ್ರವಾಗಿದ್ದು ವಾಯುದೇವರ ವಾಚಕ. 'ಯಂ ವಾಯುದೇವಂ ಧಿನೋತಿ ಪುಷ್ಣಾತೀತಿ ಧಿಯಃ' ಹೀಗೆ ವಿಶೇಷವಾಗಿ ವಾಯುದೇವರಿಗೆ ಪೋಷಕವಾದ ರಾಮಾವತಾರ 'ಧಿಯಃ' ಶಬ್ದದಿಂದ ಜ್ಞಾಪ್ಯವಾಗಬಲ್ಲದು.

**ಯಃ–ಕೃಷ್ಣ:**

'ಕೃಷ್ಣರಾಮಾದಿರೂಪೇಷು ಬಲಕಾರ್ಯೋ ಜನಾರ್ದನಃ' ಎಂದಿರುವಂತೆ ಕೃಷ್ಣಾವತಾರ ವಿಶೇಷವಾಗಿ ಶತ್ರುಹನನರೂಪವಾದ ಬಲಕಾರ್ಯವನ್ನೇ ನಿರ್ವಹಿಸಿ

ದ್ದರೂ, ಜ್ಞಾನಕಾರ್ಯವನ್ನೂ ನಡೆಸಿದೆ. ಅರ್ಜುನನಿಗೆ ಗೀತೋಪದೇಶ ವನ್ನೂ, ಉದ್ಧವನಿಗೆ ಉದ್ಧವಗೀತೋಪದೇಶವನ್ನೂ, ಭೀಷ್ಮನಲ್ಲಿದ್ದುಕೊಂಡು ಧರ್ಮರಾಜಾದಿಗಳಿಗೆ ವಿಸ್ತೃತವಾಗಿ ಧರ್ಮೋಪದೇಶವನ್ನೂ ನಡೆಸಿಕೊಟ್ಟಿದೆ. ಕೃಷ್ಣನ ಸ್ತುತಿರೂಪದಲ್ಲಿ ಹೊರಟಿರುವ 'ಕೃಷ್ಣಾಯ ಯಾದವೇಂದ್ರಾಯ ಜ್ಞಾನಮುದ್ರಾಯ ಯೋಗಿನೇ.....' ಎಂಬಲ್ಲಿ ಜ್ಞಾನೋಪದೇಶಕ್ಕೆ ಸಂಕೇತವಾದ ಜ್ಞಾನಮುದ್ರೆ ಯನ್ನು ಧರಿಸಿರುವವನನ್ನಾಗಿಯೇ ಉಲ್ಲೇಖಿಸಲಾಗಿದೆ. ಹೀಗೆ ಶ್ರೀಕೃಷ್ಣ ಅವತಾರ ದಲ್ಲಿ ಭಗವಂತನ ಜ್ಞಾನಮಯ ವ್ಯಕ್ತಿತ್ವವೂ ಅಭಿವ್ಯಕ್ತವಾಗಿರುವುದರಿಂದ, ಗಾಯತ್ರಿಯಲ್ಲಿರುವ 'ಯಃ' ಶಬ್ದವು ಚಿದಾತ್ಮಕತ್ವವನ್ನು ಉಲ್ಲೇಖಿಸುತ್ತ ಶ್ರೀಕೃಷ್ಣನನ್ನು ಬೋಧಿಸುವುದು.

### ನಃ–ಬುದ್ಧ:

ತತ್ವಜ್ಞಾನಕ್ಕೆ ಅಯೋಗ್ಯರಾದವರು ತತ್ವಜ್ಞಾನ ಪಡೆಯಲು ತೊಡಗಿದಾಗ ಅವರ ಸ್ವಭಾವಕ್ಕೆ ಯೋಗ್ಯವಾದ ಅನ್ಯಥಾ ಜ್ಞಾನವನ್ನು ಅವರಿಗೆ ನೀಡಲು ಅವತರಿಸಿದ ಬುದ್ಧನು, ಮೇಲ್ನೋಟಕ್ಕೆ ಎಲ್ಲವನ್ನೂ ಅಲ್ಲಗಳೆಯುವಂತೆ ತೋರುತ್ತಿರುವ ಕ್ಷಣಿಕತ್ವ, ಶೂನ್ಯತ್ವಗಳ ಉಪದೇಶವನ್ನು ನೀಡುವನು. ಆ ಮೂಲಕ ಎಲ್ಲವುಗಳ ಅಸ್ತಿತ್ವವನ್ನೂ ನಿಷೇಧಿಸುವ ಬುದ್ಧನನ್ನು ನಿಷೇಧವಾಚಕ 'ನ' ಶಬ್ದದಿಂದಲೇ ಕರೆಯಲಾಗುವುದು. ಗಾಯತ್ರಿಯಲ್ಲೂ 'ನ' ಶಬ್ದದಿಂದ ಸರ್ವವನ್ನೂ ನಿಷೇಧಿಸುವಂತೆ ದೈತ್ಯರಿಗೆ ಉಪದೇಶಿಸಿರುವ ಬುದ್ಧನನ್ನು ಸ್ತುತಿಸಲಾಗಿದೆ.

### ಪ್ರಚೋದಯಾತ್–ಕಲ್ಕಿ:

ಚತುರ್ಮುಖಾದಿ ದೇವತೆಗಳ ಪ್ರಾರ್ಥನಾನುಸಾರವಾಗಿ ಕಲ್ಕಿಯಾಗಿ ಅವತರಿಸಿದ ಭಗವಂತನು, ಭಗವದ್ವಿಮುಖರಾಗಿ ಅಧರ್ಮದಲ್ಲಿ ತೊಡಗಿರುವ ದಸ್ಯುಗಳನ್ನು ಒಂದು ದಿನದಲ್ಲೇ ಸದೆಬಡಿದು 'ಸಂಸ್ಥಾಪಯಾಮಾಸ ಸ ಧರ್ಮಸೇತುಂ ಜ್ಞಾನಂ ಚ ಭಕ್ತಿಂ ಚ ನಿಜಪ್ರಜಾಸು' ಎಂದಿರುವಂತೆ ತನ್ನ ಭಕ್ತರಲ್ಲಿ ಧರ್ಮದ ಆಧಾರವನ್ನೂ, ಜ್ಞಾನ–ಭಕ್ತಿಗಳನ್ನೂ ಸ್ಥಾಪಿಸುವನು. ಹೀಗೆ ಸಜ್ಜನರಲ್ಲಿ ಧರ್ಮಾದಿಗಳಿಗೆ ಪ್ರಚೋದನೆಯನ್ನೂ, ಪ್ರೇರಣೆಯನ್ನೂ ನೀಡಿರುವ 'ಕಲ್ಕಿ'ಯು ಗಾಯತ್ರಿಯ 'ಪ್ರಚೋದಯಾತ್' ಶಬ್ದದಿಂದ ಬೋಧ್ಯನಾಗಿರುವನು.

### ಅನುಸಂಧಾನಕ್ಕೆ ಅನುಕೂಲ:

ಹೀಗೆ ಗಾಯತ್ರಿಯ ಒಂದೊಂದು ಶಬ್ದವೂ ದಶಾವತಾರಗಳಲ್ಲಿಯ ಒಂದೊಂದು ಅವತಾರವನ್ನು, ಅದರಲ್ಲಿ ಅಭಿವ್ಯಕ್ತವಾದ ವಿಶೇಷ ಗುಣದ, ಮಹಿಮೆಯ ಉಲ್ಲೇಖದೊಂದಿಗೆ ಜ್ಞಾಪಿಸಿಕೊಡುತ್ತಿದೆ ಎಂದು ಇಟ್ಟುಕೊಂಡಲ್ಲಿ ದಶಾವತಾರಗಳಲ್ಲಿ ಭಗವಂತನು ಪ್ರಕಟೀಕರಿಸಿದ ಅವನ ಅಸಾಧಾರಣ ಗುಣಗಳನ್ನು ಒಟ್ಟಾಗಿ ಗಾಯತ್ರಿಯ ಮೂಲಕ ಅನುಸಂಧಾನ ಮಾಡಿಕೊಳ್ಳಲು ಅನುಕೂಲವಾಗುವುದು. *

# ಗಾಯತ್ರೀಮಂತ್ರದಲ್ಲಿ ಅಕ್ಷರಸಮನ್ವಯ

ಸಗ್ರಿ ರಾಘವೇಂದ್ರ ಉಪಾಧ್ಯಾಯ

"ಚತುರ್ವಿಂಶನ್ಮೂರ್ತಯೋಽಸ್ಯಾಃ ಕಥಿತಾ ವರ್ಣ ದೇವತಾಃ"

*(ತ.ನಾ.ಸಂ. ೧-೧೫)*

ಗಾಯತ್ರೀಮಂತ್ರದ ಇಪ್ಪತ್ತನಾಲ್ಕು ಅಕ್ಷರಗಳು ಕ್ರಮವಾಗಿ ಕೇಶವಾದಿ ಇಪ್ಪತ್ತನಾಲ್ಕು ಭಗವದ್ರೂಪಗಳನ್ನು ಪ್ರತಿಪಾದಿಸುವವು.

ಭಗವದ್ರೂಪಗಳಲ್ಲಿ ಪರಸ್ಪರವಾಗಿ ಯಾವುದೇ ವ್ಯತ್ಯಾಸವಿರುವುದಿಲ್ಲ. ಪ್ರತಿಯೊಂದು ರೂಪದಲ್ಲೂ ಸಕಲಗುಣಮಹಿಮೆಗಳೂ ಇವೆ. ಒಂದೇ ರೂಪದಿಂದ ಸಕಲ ಚಟುವಟಿಕೆಗಳನ್ನೂ ನಿರ್ವಹಿಸಬಲ್ಲ ಭಗವಂತನು ಲೀಲೆಯಿಂದ ಅನಂತ ರೂಪಗಳನ್ನು ಸ್ವೀಕರಿಸಿದ್ದು, ತನ್ನ ಬೇರೆಬೇರೆ ರೂಪದಲ್ಲಿ ಬೇರೆಬೇರೆ ಮಹಿಮೆಯನ್ನು, ಗುಣಧರ್ಮಗಳನ್ನು ಅಭಿವ್ಯಕ್ತಗೊಳಿಸಿರುವನು. ಈ ಅಭಿವ್ಯಕ್ತಿಗನುಗುಣವಾಗಿ ಆಯಾ ರೂಪವು ಬೇರೆ ಬೇರೆ ನಾಮದಿಂದ ವಾಚ್ಯವಾಗಿದೆ. ಆಯಾ ರೂಪದ ವಾಚಕನಾಮದ ಪ್ರವೃತ್ತಿನಿಮಿತ್ತ ಧರ್ಮಗಳನ್ನು ಆಯಾರೂಪದಲ್ಲಿ ಸಮನ್ವಯಿಸಿಕೊಳ್ಳುವ ಮೂಲಕವಷ್ಟೇ ನಾವು ಆ ರೂಪಗಳನ್ನು ಪ್ರತ್ಯೇಕವಾಗಿ ಪರಿಗಣಿಸಬಹುದಾಗಿದೆ. ಇದಲ್ಲದೆ ಭಗವದ್ರೂಪಗಳಲ್ಲಿಯ ಪ್ರತ್ಯೇಕತೆಯನ್ನು ಗುರುತಿಸಿಕೊಳ್ಳಲು ಬೇರೆ ಮಾರ್ಗವೇ ಇರಲಾರದು.

ಆದುದರಿಂದ ಕೇಶವಾದಿ ಭಗವದ್ರೂಪಗಳು ಗಾಯತ್ರಿಯ ಅಕ್ಷರಗಳಿಂದ ಪ್ರತಿಪಾದ್ಯಗಳೆನ್ನುವಾಗಲೂ, ಆ ಭಗವದ್ರೂಪಗಳಲ್ಲಿ ಕೇಶವಾದಿ ನಾಮವಾಚ್ಯತ್ವ ಪ್ರಯುಕ್ತವಾಗಿ ಅಭಿವ್ಯಕ್ತವಾಗುವ ಗುಣವನ್ನೋ, ಮಹಿಮೆಯನ್ನೋ ವಿವೇಚಿಸಿಕೊಂಡು ಅಂತಹ ಗುಣ ಅಥವಾ ಮಹಿಮೆಯನ್ನು ಪ್ರತಿಪಾದಿಸುವ ಮೂಲಕ, ಸೂಚಿಸುವ ಮೂಲಕ ಗಾಯತ್ರಿಯ ಆಯಾ ಅಕ್ಷರ ಹೇಗೆ ಆಯಾ ಭಗವದ್ರೂಪ ಪ್ರತೀಕವೆನಿಸಿದೆ ಎಂಬುದನ್ನು ಪರಿಶೀಲಿಸಬೇಕು.. ಆಗಷ್ಟೇ ಒಮ್ಮೆ ಗಾಯತ್ರೀ ಮಂತ್ರದ ಜಪ ನಡೆದಾಗ ಇಪ್ಪತ್ತನಾಲ್ಕು ಭಗವದ್ರೂಪಗಳ ಅನುಸಂಧಾನ ನಡೆದಂತಾಗುವುದು.

ಗಾಯತ್ರಿಯ ಇಪ್ಪತ್ತನಾಲ್ಕು ಅಕ್ಷರಗಳು ಹೀಗಿವೆ: 'ತತ್, ಸ, ವಿ, ತುಃ, ವ, ರೇ, ಣಿ, ಯಂ, ಭರ್, ಗೋ, ದೇ, ವ, ಸ್ಯ, ಧೀ, ಮ, ಹಿ, ಧಿ, ಯಃ, ಯಃ, ನಃ, ಪ್ರ, ಚೋ, ದ, ಯಾತ್ ಇವುಗಳಲ್ಲಿ ಅರ್ಧಾಕ್ಷರಗಳನ್ನೊಳಗೊಂಡ 'ತತ್, ಭರ್, ಯಾತ್ ಇವನ್ನು ಒಂದೊಂದು ಅಕ್ಷರಗಳಾಗಿಯೇ ಪರಿಗಣಿಸಲಾಗಿದೆ.

ಹಾಗೆಯೇ ಸಂಹಿತಾಪಾಠದಲ್ಲಿ ಸಂಯುಕ್ತವಾಗಿ ಉಚ್ಚರಿಸಲ್ಪಡುವ 'ಣ್ಯ'ವನ್ನು ಪದಪಾಠದಲ್ಲಿ 'ಕ್ಷೈಪ್ರಾನ್ ವ್ಯೂಹೇತ್' ಎಂಬ ಸೂತ್ರಪ್ರಕಾರ ಯಕಾರ ರೂಪವಾದ ಕ್ಷೈಪ್ರವನ್ನು ಬಿಡಿಸಿ 'ಣಿ' 'ಯ' ಎಂದು ಎರಡು ಅಕ್ಷರಗಳನ್ನಾಗಿ ಪರಿಗಣಿಸಬೇಕು. ಹೀಗೆ ಗಾಯತ್ರೀಮಂತ್ರದಲ್ಲಿ ಒಟ್ಟು ಇಪ್ಪತ್ತನಾಲ್ಕು ಅಕ್ಷರ ಗಳಾಗುವವು. ಆ ಅಕ್ಷರಗಳು ಕ್ರಮವಾಗಿ ಕೇಶವಾದಿ ಭಗವದ್ರೂಪಗಳನ್ನು ಪ್ರತಿಪಾದಿಸುತ್ತಿವೆ.

**ತತ್–ಕೇಶವ:**

ಕ ಎಂದರೆ ಸುಖ. ವ ಎಂದರೆ ಜ್ಞಾನ. ಮಧ್ಯದಲ್ಲಿರುವ ಈಶ ಶಬ್ದವು ಸುಖ ಹಾಗೂ ಜ್ಞಾನಗಳಿಗೆ ಒಡೆಯನಾದವನು ಭಗವಂತನೆಂದು ತಿಳಿಸುತ್ತ, ಕೇಶವಶಬ್ದವು ಗುಣ ಶ್ರೇಷ್ಠಗಳಾದ ಸುಖ–ಜ್ಞಾನಗಳಿಗೆ ಒಡೆಯನಾಗಿರುವ ಭಗವಂತನು ಸಕಲಗುಣಪರಿಪೂರ್ಣನೂ ಆಗಿರುವನೆಂದು ಸೂಚಿಸುವುದು. ಗಾಯತ್ರಿಯ ಮೊದಲ ಅಕ್ಷರವಾದ 'ತತ್' ಎಂಬುದೂ ಗುಣಪೂರ್ಣನಾದವನು 'ಗುಣೈಃ ತತತ್ವಾತ್ ತತ್' ಎಂದು ತಿಳಿಸುತ್ತದೆ.

**ಸ–ನಾರಾಯಣ:**

'ಸತ್' ಎನ್ನುವುದರ ಸಂಕ್ಷಿಪ್ತ ರೂಪವೇ 'ಸ' ವರ್ಣವಾಗಿದ್ದು ಇದು ಭಗವಂತನು 'ಸನ್' ನಿರ್ದುಷ್ಟನಾದವನು ಎಂಬುದನ್ನು ತಿಳಿಸುವುದು. ನಾರಾಯಣ ನಾಮದ ಅರ್ಥವೂ ಇದೇ. ಅರಾಯಣ ಎಂದರೆ ದೋಷಾಶ್ರಯ. ಭಗವಂತ ಅಂತಹವನಲ್ಲ ಎಂದು ನಾರಾಯಣ ಎನಿಸುವನು. ಆದುದರಿಂದ ಗಾಯತ್ರಿಯ ಎರಡನೇ ಅಕ್ಷರ 'ಸ' ನಾರಾಯಣ ನಾಮಕ ಭಗವದ್ರೂಪದ ಪ್ರತಿಪಾದಕ.

**ವಿ–ಮಾಧವ**

ವಿಶಿಷ್ಟನಾಗಿರುವುದರಿಂದ ಭಗವಂತನು 'ವಿ' ಎನಿಸುವನು. ಪ್ರಕೃತ್ಯಭಿಮಾನಿನಿ ಯಾದ ಲಕ್ಷ್ಮೀದೇವಿಗೂ ಒಡೆಯನಾಗಿರುವುದು ಹಾಗೂ ತನಗೆ ಮತ್ತೊಬ್ಬ ಒಡೆಯನನ್ನು ಒಳಗೊಳ್ಳದೆ ಇರುವುದು 'ಮಾಧವ' ನಾಮದಿಂದ ಸೂಚಿತಗಳಾದ ಭಗವಂತನ ವೈಶಿಷ್ಟ್ಯಗಳನ್ನು ಗಾಯತ್ರಿಯ ಮೂರನೆಯ ವರ್ಣವಾದ 'ವಿ' ತಿಳಿಸುವುದು.

**ತುಃ–ಗೋವಿಂದ:**

ಭಗವಂತನು ವೇದವಾಙ್ಮಯಕ್ಕೆ ಒಡೆಯನಾಗಿರುವುದರಿಂದ (ಗವಾಮಿಂದ್ರಃ, ನಿರುಕ್ತತ್ವಾದ್ರೇಫಲೋಪಃ) ಹಾಗೂ ವೇದದ ಮೂಲಕ ಯೋಗ್ಯಾಧಿಕಾರಿಗೆ ಜ್ಞಾನವನ್ನು ಹೊಂದಿಸುವ ಪ್ರಯುಕ್ತ (ಗಾಂ ದೃಶಂ ವಿಂದಯತೀತಿ) ಗೋವಿಂದ ಎನಿಸಿರುವನು. ಹಾಗೆ ಗೋವಿಂದ ಎನಿಸುವ ರೂಪದ ಮಹಿಮೆಯನ್ನು

ಗಾಯತ್ರಿಯ ನಾಲ್ಕನೆಯ ವರ್ಣವಾದ 'ತುಃ' ಎನ್ನುವುದೂ ಸೂಚಿಸಿಕೊಡುವುದು. ವೇದದ ಮೂಲಕ ಅಜ್ಞಾನವನ್ನು ನಾಶಪಡಿಸುವವನು (ತುದತೀತಿ ತುಃ) ಅರ್ಥಾತ್ ಜ್ಞಾನವನ್ನು ಅನುಗ್ರಹಿಸುವವನು.

**ವ–ವಿಷ್ಣು:**

ಪ್ರೇರಕನಾಗಿ ಎಲ್ಲರನ್ನೂ ಪ್ರವೇಶಿಸಿರುವುದರಿಂದಲೇ (ವಿಶತಿ ಸರ್ವಂ ಪ್ರೇರಕತಯೇತಿ) ವಿಷ್ಣು ಎನಿಸಿರುವವನು ಭಗವಂತನು. ಗಾಯತ್ರಿಯ ಐದನೆಯ ವರ್ಣ 'ವ'ಕಾರವು ಭಗವಂತನ ಸರ್ವಪ್ರವೇಶವನ್ನು ತಿಳಿಸುತ್ತ ವಿಷ್ಣುನಾಮಕ ಭಗವದ್ರೂಪವನ್ನೇ ಜ್ಞಾಪಿಸಿಕೊಡುವುದು. 'ವಾತಿ ಪ್ರೇರಕತಯಾ ಗಚ್ಛತಿ ಸರ್ವಂ ಪ್ರವಿಶತೀತಿ ವಃ.'

**ರೇ–ಮಧುಸೂದನ:**

ದುಃಖಾಮಿಶ್ರಿತವಾದ ಸುಖವನ್ನು ಮುಕ್ತಿಯಲ್ಲಿ ನೀಡುವವನೆಂದು ಭಗವಂತನು ಮಧುಸೂದನ ಎನಿಸುವನು. (ಮಧು ಸುಖಂ ಸೂದಯತಿ ಕ್ಷರತಿ ದದಾತೀತಿ ಮಧುಸೂದನಃ) ಗಾಯತ್ರಿಯ 'ರೇ' ಅಕ್ಷರವು ಭಗವಂತನ ಸುಖದಾತೃತ್ವವನ್ನೇ ತಿಳಿಸುವುದು. 'ರಮಯತೀತಿ, ಸುಖಂ ರಾತೀತಿ ವಾ ರೇ'.

**ಣಿಯಂ–ತ್ರಿವಿಕ್ರಮ, ವಾಮನ:**

ಗಾಯತ್ರಿಯ 'ಣ್ಯಂ' ಎನ್ನುವ ಅಕ್ಷರ ಪದಪಾಠದಲ್ಲಿ 'ಣಿಯಂ' ಎಂದು ವಿಭಾಗ ಹೊಂದಿ ಭಗವಂತನ ತ್ರಿವಿಕ್ರಮ ಹಾಗೂ ವಾಮನರೂಪಗಳನ್ನು ಸೂಚಿಸಿಕೊಡುವುದು. ತ್ರಿವಿಕ್ರಮ ಎನ್ನುವುದಕ್ಕೆ ದೌರ್ಬಲ್ಯ, ದುಃಖ ಹಾಗೂ ಅಜ್ಞಾನ ಎಂಬ ಮೂರನ್ನು ಅತಿಕ್ರಮಿಸಿ ಇರುವವನೆಂದರ್ಥ. (ತ್ರೀಣಿ ವಿಕ್ರಮತೇ ಇತಿ ತ್ರಿವಿಕ್ರಮಃ) 'ಣಿ' ಕಾರವು ಬಲ (ಣಕಾರೋ ಬಲಂ) ಹಾಗೂ ಸುಖ (ಣೋ ಹಿ ನಿರ್ವೃತಿವಾಚಕಃ)ಗಳ ವಾಚಕ. 'ಇ'ಕಾರವು ಜ್ಞಾನವಾಚಕ. ಆದುದ ರಿಂದ 'ಣಿ' ಎಂಬ ಅಕ್ಷರ ಭಗವಂತ ಬಲ, ಸುಖ ಹಾಗೂ ಜ್ಞಾನಸ್ವರೂಪಿ ಎಂದು ತಿಳಿಸುವುದರ ಮೂಲಕ ಅವನು ದೌರ್ಬಲ್ಯ, ದುಃಖ, ಅಜ್ಞಾನಗಳನ್ನು ಅತಿಕ್ರಮಿಸಿರುವನೆಂದು 'ತ್ರಿವಿಕ್ರಮ' ರೂಪವನ್ನು ಜ್ಞಾಪಿಸಿಕ್ಕೊಡುವುದು.

ದೇವತೆಗಳಿಗೆ ವಿರೋಧಿಯಾದ ಬಲಿಯನ್ನು ನಿಗ್ರಹಿಸಿರುವ ಪ್ರಯುಕ್ತ ವಾಮನ ಎನಿಸಿರುವ (ವಾಮಂ ದೇವಾನಾಂ ಪ್ರತೀಪಂ ಬಲಿಂ ನಯತಿ ಅಪನಯ ತೀತಿ ವಾಮನಃ) ಭಗವಂತನ ಆ ರೂಪವನ್ನು ಗಾಯತ್ರಿಯ 'ಯಂ' ವರ್ಣ 'ಯಾಪಯತಿ ಬಲಿಮಿತಿ' ದೇವತೆಗಳಿಗೆ ಹಾನಿಮಾಡುವವರನ್ನು ತೊಲಗಿಸುವವ ನೆಂಬ ಅರ್ಥವನ್ನು ಸೂಚಿಸಿಕೊಡುವುದರ ಮೂಲಕ ಜ್ಞಾಪಿಸಿಕೊಡುವುದು. ಅಥವಾ ಬಲಿಗೆ ಅತಿಸುಂದರವಾದ ಇಂದ್ರಪದವಿಯನ್ನು ಮುಂದಿನ ಮನ್ವಂತರ

ದಲ್ಲಿ ತಲುಪಿಸಿಕೊಡುವ ವಾಮನ ನಾಮದ ಅರ್ಥವನ್ನೇ (ವಾಮಂ ಯಾಪಯತೀತಿ) 'ಯ' ವರ್ಣ ಸೂಚಿಸುವುದು.

**ಭರ್–ಶ್ರೀಧರ:**

ಶ್ರೀದೇವಿಯನ್ನು ಎದೆಯಲ್ಲಿ ಧರಿಸಿಕೊಂಡು ಶ್ರೀಧರ ಎನಿಸಿರುವ ಭಗವಂತನ ರೂಪವನ್ನು ಗಾಯತ್ರಿಯ 'ಭರ್' ಅಕ್ಷರವು ಸೂಚಿಸಿಕೊಡುವುದು. 'ಭರತಿ ಶ್ರಿಯಂ ಸ್ವವಕ್ಷಸೀತಿ ಭರ್' ಶ್ರೀದೇವಿಯನ್ನು ಎದೆಯಲ್ಲಿ ಧರಿಸಿಕೊಂಡು ಪೋಷಿಸುತ್ತಿರುವನು.

**ಗೋ–ಹೃಷೀಕೇಶ:**

ಇಂದ್ರಿಯಗಳಿಗೆ ಒಡೆಯನಾಗಿದ್ದು ಹೃಷೀಕೇಶ (ಹೃಷೀಕಾಣಾಮಿಂದ್ರಿಯಾಣಾಮೀಶಃ) ಎನಿಸಿರುವ ಭಗವಂತನು ಅಂತಹ ಇಂದ್ರಿಯಗಳ ಮೂಲಕ ನಾವು ಜ್ಞಾನವನ್ನು ಪಡೆಯುವಂತೆ ಪ್ರೇರಿಸುವನು. (ಗಮಯತಿ ಇಂದ್ರಿಯದ್ವಾರಾ ಜ್ಞಾಪಯತೀತಿ) ಹಾಗೂ ಬೇರೆಬೇರೆ ಚಟುವಟಿಕೆಗಳನ್ನು ನಡೆಸುವಂತೆ ತೊಡಗಿಸುವನು (ಗಮಯತಿ ಚೇಷ್ಟಯತಿ ಇಂದ್ರಿಯದ್ವಾರೇತಿ) ಎಂಬ ದೃಷ್ಟಿಯಿಂದ 'ಗೋ' ಎನಿಸಿರುವನು. ಆದುದರಿಂದ ಗಾಯತ್ರಿಯ 'ಗೋ' ವರ್ಣವು ಹೃಷೀಕೇಶ ರೂಪಕ್ಕೆ ಜ್ಞಾಪಕ.

**ದೇ–ಪದ್ಮನಾಭ:**

ಲೋಕಗಳನ್ನೊಳಗೊಂಡ ಪದ್ಮವನ್ನು ತನ್ನ ನಾಭಿಯಲ್ಲಿ ಧರಿಸಿಕೊಂಡಿರುವುದರಿಂದ (ಪದ್ಮಂ ನಾಭೌ ಯಸ್ಯ) ಪದ್ಮನಾಭ ಎನಿಸಿರುವ ಭಗವಂತನು ತನ್ನ ನಾಭಿಯಲ್ಲೇ ಆ ಪದ್ಮವನ್ನು ಧರಿಸಿಕೊಳ್ಳುವುದರ ಮೂಲಕ ಅದರಲ್ಲಿಯ ಲೋಕಗಳನ್ನು ರಕ್ಷಿಸುವನೆಂಬುದನ್ನು ಗಾಯತ್ರಿಯ ೧೧ನೆಯದಾದ 'ದೇ' ವರ್ಣ ಸೂಚಿಸುವುದು. 'ದಯತೇ ಸ್ವನಾಭೌ ಪದ್ಮೇ ಸ್ಥಿತಾನ್ ಲೋಕಾನಿತಿ ದೇ'. (ದೇಙ್ ರಕ್ಷಣೇ) ಆದುದರಿಂದ 'ದೇ' ವರ್ಣ ಪದ್ಮನಾಭ ರೂಪದ ಜ್ಞಾಪಕ.

**ವ–ದಾಮೋದರ:**

ಸಕಲ ಲೋಕಗಳನ್ನು ತನ್ನ ಉದರದಲ್ಲಿ ಇರಿಸಿಕೊಂಡು (ದಾಮಾನಿ ಉದರೇ ಯಸ್ಯ) ದಾಮೋದರ ಎನಿಸಿರುವ ಭಗವದ್ರೂಪದ ಲೋಕಗಳನ್ನು ಧರಿಸಿಕೊಳ್ಳಲು ಬೇಕಾದ ಬಲವನ್ನು ಗಾಯತ್ರಿಯ ಹನ್ನೆರಡನೆಯದಾದ 'ವ' ವರ್ಣವು ಸೂಚಿಸಿ ಕೊಡುವುದರ ಮೂಲಕ ದಾಮೋದರರೂಪದ ಜ್ಞಾಪಕ.

**ಸ್ಯ–ವಾಸುದೇವ:**

ಮುಕ್ತಾತ್ಮನು ತನ್ನಲ್ಲಿ ವಾಸಿಸುವಂತೆ ಮಾಡಿ (ವಾಸಯತೀತಿ) ರಮಿಸುವಂತೆ (ದೇವಯತಿ ರಮಯತೀತಿ) ಮಾಡುವ ಪ್ರಯುಕ್ತ ಭಗವಂತನ ಮುಕ್ತಿಪ್ರದರೂಪವು

ವಾಸುದೇವ ಎನಿಸಿದೆ. ಗಾಯತ್ರಿಯ 'ಸ್ಯ' ವರ್ಣ ವಾಸುದೇವನು ಸಂಸಾರವನ್ನು ನಾಶಮಾಡುವನು, ದುಃಖವನ್ನು ಅಜ್ಞಾನವನ್ನು ಅಂತಗೊಳಿಸುವನು (ಸ್ಯತಿ ನಾಶಯತೀತಿ ಸ್ಯ, ಷೋ ಅಂತಕರ್ಮಣಿ) ಎಂದು ಆ ರೂಪವನ್ನು ಜ್ಞಾಪಿಸಿಕೊಡ ಬಲ್ಲದು. ಅಥವಾ ಸಾರವಾದ ಸುಖವನ್ನು ತಲುಪಿಸಿಕೊಡುವನೆಂಬುದಾಗಿ (ಸಾರಂ ಸುಖಂ ಯಾಪಯತೀತಿ ಸ್ಯ) 'ಸ್ಯ' ವರ್ಣವು ವಾಸುದೇವ ರೂಪವನ್ನು ಸೂಚಿಸಿ ಕೊಡಬಲ್ಲದು.

### ಧೀ–ಸಂಕರ್ಷಣ:

ಸಂಹಾರಕಾಲದಲ್ಲಿ ಎಲ್ಲವನ್ನೂ ತನ್ನೊಳಗೆ ಸೆಳೆದುಕೊಳ್ಳುವ ಪ್ರಯುಕ್ತ ಭಗವಂತನು ಸಂಕರ್ಷಣ ಎನಿಸುವನು. ಗಾಯತ್ರಿಯ 'ಧೀ' ವರ್ಣವು ಸಂಕರ್ಷಣ ರೂಪಿಯ ಸರ್ವಸಂಹಾರಕತ್ವವನ್ನೇ ಸೂಚಿಸುವುದು. ಧಯತಿ ಸರ್ವಂ ಪ್ರಲಯ ಕಾಲೇ ಪಿಬತಿ ಅತ್ತಿ ಅರ್ಥಾತ್ ಸಂಹರತೀತಿ ಧಃ ಅತಿಶಯವಾಗಿ ಸಂಹಾರವನ್ನು ನಡೆಸುವುದರಿಂದ 'ತೃತೀಯೋऽತಿಶಯೇ' ಎಂದು ಇಕಾರ ಹಾಗೂ ದೀರ್ಘ ಇವು ಬಂದು 'ಧೀ' ಎಂದಾಗುವುದು.

### ಮ–ಪ್ರದ್ಯುಮ್ನ:

ಪ್ರಕೃಷ್ಟವಾದ ಪ್ರಪಂಚರೂಪವಾದ ಸಂಪತ್ತನ್ನು ಒಳಗೊಂಡಿರುವುದರಿಂದ ಭಗವಂತನ ಜಗನ್ನಿರ್ಮಾಪಕ ರೂಪವು ಪ್ರದ್ಯುಮ್ನ (ಪ್ರಕೃಷ್ಟಂ ದ್ಯುಮ್ನಂ ಧನಂ ಜಗನ್ನಾಮಕಂ ಯಸ್ಯ ಸಃ) ಎನಿಸಿರುವುದು. ಗಾಯತ್ರಿಯ 'ಮ' ಅಕ್ಷರವು ಜಗತ್ತನ್ನು ನಿರ್ಮಿಸುವ (ಮಾತಿ ನಿರ್ಮಾತಿ ಜಗದಿತಿ ಮಃ) ಪ್ರದ್ಯುಮ್ನರೂಪವನ್ನೇ ಜ್ಞಾಪಿಸಿಕೊಡುವುದು.

### ಹಿ–ಅನಿರುದ್ಧ:

ಜಗತ್ತಿನ ಬೆಳವಣಿಗೆ ಯಾವುದೇ ಪ್ರತಿಬಂಧಕ ಶಕ್ತಿಯಿಂದ ತಡೆಯಲ್ಪಡ ದಂತೆ ನೋಡಿಕೊಂಡು ಅದನ್ನು ಪೋಷಿಸುತ್ತಿರುವ ಭಗವಂತನ ರೂಪವೇ ಅನಿರುದ್ಧ (ಜಗತಃ ವರ್ಧನಂ ನಿರುದ್ಧಂ ಕೇನಾಪಿ ನ ಭವತಿ ಯಸ್ಮಾತ್ ಸಃ ಅನಿರುದ್ಧಃ) ಗಾಯತ್ರಿಯ 'ಹಿ' ವರ್ಣವು ಜಗತ್ತನ್ನು ಬೆಳೆಸುವ ಆ ರೂಪವನ್ನೇ ಸೂಚಿಸುವುದು 'ಹಾಯಯತಿ ವರ್ಧಯತಿ ಜಗದಿತಿಹಿ'–'ಹಿ ವೃದ್ಧೌ'.

### ಧಿ–ಪುರುಷೋತ್ತಮ:

ಶರೀರದ ಹೃದಯಪುರದಲ್ಲಿ ಭಗವಂತನಂತೆ ನಾವು ಇರುವವರಾಗಿ 'ಪುರುಷ' ಎನಿಸಿರುವವರಾದರೂ, ಭಗವಂತನು ಶರೀರಧಾರಕನಾಗಿ, ಶರೀರದ ಮೂಲಕ ಮುಖ್ಯವಾಗಿ ಭೋಗಗಳನ್ನು ಅನುಭವಿಸುವವನಾಗಿ ಇದ್ದುಕೊಂಡು 'ಪುರುಷೋತ್ತಮ' (ಪುರುಷೇಭ್ಯಃ ಜೀವೇಭ್ಯಃ ಉತ್ತಮಃ) ಎನಿಸಿರುವನು. ಗಾಯತ್ರಿಯ 'ಧಿ' ವರ್ಣವು ಶರೀರವನ್ನು ಅತಿಶಯವಾಗಿ ಧರಿಸಿಕೊಂಡಿರುವವನು

(ಅತಿಶಯೇನ ಶರೀರಂ ಧತ್ತೇ ಇತಿ ಧಿ) ಹಾಗೂ ಶರೀರದ ಮೂಲಕ ಅತಿಶಯವಾಗಿ ಶುಭಭೋಗಗಳನ್ನು ಸವಿಯುವವನು. (ಅತಿಶಯೇನ ಧಯತಿ ಶರೀರಭೋಗಾನಿತಿ ಧಿ) ಎಂಬುದಾಗಿ ಪುರುಷೋತ್ತಮರೂಪವನ್ನೇ ಸೂಚಿಸುತ್ತದೆ.

**ಯಃ–ಅಧೋಕ್ಷಜ:**

ಇಂದ್ರಿಯಜನ್ಯ ಜ್ಞಾನಗಳಿಗೆ ಗೋಚರಿಸದ ಪ್ರಯುಕ್ತ ಅವುಗಳನ್ನು ತಿರಸ್ಕರಿಸುವನೆಂದು ಭಗವಂತನು (ಅಧಃ ಕೃತಾನಿ ಅಕ್ಷಜಾನಿ ಜ್ಞಾನಾನಿ ಯೇನ ಸಃ) 'ಅಧೋಕ್ಷಜ' ಎನಿಸಿರುವನು. ಗಾಯತ್ರಿಯ ಹದಿನೆಂಟನೆಯ 'ಯಃ' ವರ್ಣವು ಇಂದ್ರಿಯಜನ್ಯಗಳಾದ ಜ್ಞಾನಗಳಿಗೆ ಎಟಕದವನು (ಇಃ ಇಂದ್ರಿಯಜನ್ಯಂ ಜ್ಞಾನಂ ಅಸ್ಮಾತ್ ಅತೀತಃ ಅಗೋಚರ ಇತಿ ಯಃ) ಎಂಬುದಾಗಿ ಅಧೋಕ್ಷಜ ನಾಮದ ಅರ್ಥವನ್ನೇ ಸೂಚಿಸಿಕೊಡುವುದರ ಮೂಲಕ ಆ ರೂಪದ ಜ್ಞಾಪಕ ಎನಿಸಿದೆ.

**ಯಃ–ನಾರಸಿಂಹ:**

ನರರಿಗೆ ಸಂಬಂಧಿಸಿದ ಪಾಪವನ್ನು, ಅಜ್ಞಾನವನ್ನು, ಹೋಗಲಾಡಿಸುವ ಪ್ರಯುಕ್ತ (ನರಾಣಾಮಿದಂ ನಾರಂ ಪಾಪಂ ಅಜ್ಞಾನಂ ವಾ ಹಿನಸ್ತಿ ನಾಶಯತೀತಿ ನಾರಸಿಂಹಃ) ನಾರಸಿಂಹ ಎನಿಸಿರುವ ಭಗವಂತನ ಆ ರೂಪದ ಮಹಿಮೆಯನ್ನು ಗಾಯತ್ರಿಯ ಹತ್ತೊಂಭತ್ತನೆಯ 'ಯ' ವರ್ಣ ಸೂಚಿಸಿಕೊಡುವುದು. ನರರಿಗೆ ಸಂಬಂಧಿಸಿದ ಪಾಪವನ್ನು ಅಥವಾ ಅಜ್ಞಾನವನ್ನು ತೊಲಗಿಸುವವನು 'ನಾರಂ ಪಾಪಂ ಅಜ್ಞಾನಂ ವಾ ಯಾಪಯತೀತಿ ಯಃ' ಎಂದು ಅರ್ಥವನ್ನು ನೀಡುವ 'ಯಃ' ವರ್ಣದಿಂದ ನಾರಸಿಂಹನ ಪಾಪಜ್ಞಾನನಿವರ್ತಕತ್ವವು ತಿಳಿಯಲ್ಪಟ್ಟಂತಾಗುವುದು.

**ನಃ–ಅಚ್ಯುತ:**

ಯಾವುದೇ ರೀತಿಯ ಚ್ಯುತಿಗೆ, ಹಾನಿಗೆ ಒಳಗಾಗದ ಪ್ರಯುಕ್ತ 'ಅಚ್ಯುತ' ಎನಿಸಿರುವ ಭಗವಂತನ ಆ ರೂಪದ ಮಹಿಮೆಯನ್ನು ಗಾಯತ್ರಿಯ 'ನಃ' ವರ್ಣವು ಸೂಚಿಸುವುದು ಯಾವುದಾದರೊಂದು ಚ್ಯುತಿಗೊಳಗಾದ ಸಕಲ ಪ್ರಪಂಚಕ್ಕಿಂತಲೂ ವಿಲಕ್ಷಣವಾಗಿರುವುದರಿಂದಲೇ ಭಗವಂತನು 'ನಃ' ಎನಿಸಿರುವನು.

**ಪ್ರ–ಜನಾರ್ದನ:**

ಭಗವಂತನು ತಾನು ಜನ್ಮವನ್ನು ಹೊಂದಿಲ್ಲ (ನ ಜಾಯತೇ ಇತಿ ಜನಃ) ಹಾಗೆಯೇ ಅಧಿಕಾರಿಗಳಿಗೆ ಮುಕ್ತಿಯನ್ನು ಅನುಗ್ರಹಿಸಿ ಸಂಸಾರವನ್ನು ನಾಶ ಮಾಡುವ ಪ್ರಯುಕ್ತ (ಅರ್ದಯತಿ ಸಂಸಾರಮಿತಿ) ಜನಾರ್ದನ ಎನಿಸಿರುವನು. ಗಾಯತ್ರಿಯ 'ಪ್ರ' ವರ್ಣವು ಜನಾರ್ದನರೂಪಿ ಭಗವಂತನ ಜನನ ರಾಹಿತ್ಯ ಹಾಗೂ ಸಂಸಾರನಿವರ್ತಕತ್ವ ರೂಪವಾದ ಪ್ರಕರ್ಷವನ್ನೇ ತಿಳಿಸುತ್ತದೆ.

**ಚೋ–ಉಪೇಂದ್ರ:**

ಇಂದ್ರ ಎನಿಸುವ ಶಚೀಪತಿಗಿಂತ ಅಥವಾ ವಾಯುದೇವನಿಗಿಂತ ಅಧಿಕವಾಗಿರುವ ಪ್ರಯುಕ್ತ 'ಉಪೇಂದ್ರ' ಎನಿಸಿರುವ ಭಗವಂತನ ರೂಪವು ವಿಶೇಷವಾಗಿ ಇಂದ್ರ ಎನಿಸುವವರಿಗೆ ಪ್ರಚೋದಕ ಆಗಿರುವುದರಿಂದ ಗಾಯತ್ರಿಯ 'ಚೋ' ವರ್ಣ ಉಪೇಂದ್ರನನ್ನು ಸೂಚಿಸುವುದು.

**ದ–ಹರಿ:**

ಭಕ್ತರ ಪಾಪವನ್ನು, ಯೋಗ್ಯಾಧಿಕಾರಿಗಳ ಸಂಸಾರವನ್ನು ಹಾಗೂ ಸಂಹಾರ ಕಾಲದಲ್ಲಿ ಎಲ್ಲವನ್ನೂ ಸಂಹರಿಸುವ ಪ್ರಯುಕ್ತ ಭಗವಂತನು 'ಹರಿ' ಎನಿಸಿದ್ದು, ಅವನ ಆ ಮಹಿಮೆಗಳನ್ನು ಗಾಯತ್ರಿಯ 'ದ' ವರ್ಣ ಸೂಚಿಸಿಕೊಡುವುದು. 'ದ್ಯತಿ ಪಾಪಂ, ಸಂಸಾರಂ, ಸರ್ವಮಿತಿ ವಾ ದಃ– ದೋ ಅವ ಖಂಡನೇ'.

**ಯಾತ್–ಕೃಷ್ಣ:**

ಕೃಷಿ ಎನಿಸುವ ಭೂಮಿಗೆ ತನ್ನ ಅವತಾರಗಳಿಂದ ಆನಂದವನ್ನು ನೀಡುವ ಪ್ರಯುಕ್ತ ಕೃಷ್ಣ ಎನಿಸುವ ಭಗವಂತನ ಈ ಮಹಿಮೆಯನ್ನು ಗಾಯತ್ರಿಯ 'ಯಾತ್' ವರ್ಣವೂ ಸೂಚಿಸುವುದು. 'ಯಾಪಯತಿ ಸುಖಂ ಪ್ರಾಪಯತೀತಿ ಯಾತ್'.

ಹೀಗೆ ಗಾಯತ್ರಿಯ ಇಪ್ಪತ್ತನಾಲ್ಕು ವರ್ಣಗಳಿಂದ ಪ್ರತಿಪಾದ್ಯಗಳಾದ ಚತುರ್ವಿಂಶತಿ ರೂಪಗಳನ್ನೊಳಗೊಂಡ ಸೂರ್ಯನಾರಾಯಣನನ್ನು ಧ್ಯಾನಿಸುತ್ತಾ ನಡೆಸಿದ ಗಾಯತ್ರೀಮಂತ್ರದ ಜಪವು ವಿಶಿಷ್ಟಫಲದಾಯಕವಾಗದಿರದು.

*

**'ಧಿಯಃ' ಬಳಕೆಯ ಔಚಿತ್ಯ**

ಉಪನಿಷತ್ತುಗಳಲ್ಲಿ 'ತನ್ನೋ ವಿಷ್ಣುಃ ಪ್ರಚೋದಯಾತ್', 'ತನ್ನೋ ರುದ್ರಃ ಪ್ರಚೋದಯಾತ್' ಎಂಬ ವಚನಗಳಿಂದ ಭಗವಂತನಿಗೆ ಜೀವನಿಯಾಮಕತ್ವವು ಉಕ್ತವಾಗಿದೆ. ಆದರೆ ಗಾಯತ್ರಿಯಲ್ಲಿ ಮಾತ್ರ ಅಧಿಕವಾದ 'ಧೀ' ಪದವನ್ನು ಬಳಸಿ ಜೀವನಿಯಾಮಕತ್ವವು ಹೇಳಲ್ಪಟ್ಟಿದೆ. ಔಚಿತ್ಯವೇನು? ಮೋಕ್ಷದಲ್ಲಿ ಶ್ರೀಹರಿಗೆ ಜೀವನಿಯಾಮಕತ್ವವಿಲ್ಲವೆಂದು ಸಾರುವ ಅದ್ವೈತಮತವು ಸಮರ್ಪಕವಲ್ಲವೆಂದು ಸೂಚಿಸುವುದೇ 'ಧೀ' ಶಬ್ದದ ಬಳಕೆಯ ಉದ್ದೇಶ.

ಇಲ್ಲಿ 'ನಃ' ಶಬ್ದದಿಂದ ಉಕ್ತರಾದ ಆತ್ಮರಿಗೆ 'ಧಿಯಃ' ಎಂಬ ವಿಶೇಷಣವನ್ನು ನೀಡಲಾಗಿದೆ ಎಂದಿಟ್ಟುಕೊಂಡು 'ಧಿಯಃ ನಃ ಪ್ರಚೋದಯಾತ್' ಜ್ಞಾನಸ್ವರೂಪರಾದ ನಮ್ಮನ್ನು ಪ್ರೇರಿಸುತ್ತಾನೆ ಎಂಬ ಭಾವವು ಲಭ್ಯವಾಗುವುದು. ಜೀವರು ಮೋಕ್ಷದಲ್ಲಿಯೇ ಜ್ಞಾನಸ್ವರೂಪರಾಗಿರುವುದರಿಂದ, ಆ ಸ್ಥಿತಿಗೆ ತಲುಪಿದ ಜೀವರ ಪ್ರೇರಣೆಯನ್ನು ಸೂಚಿಸಿದಂತಾಗುವುದು.

— ಶ್ರೀ ವಿದ್ಯೇಶತೀರ್ಥರು

# ಗಾಯತ್ರಿಯ ಗಾಂಭೀರ್ಯ

—ಶ್ರೀ ವಿದ್ಯಾಮಾನ್ಯತೀರ್ಥರು.

**ಯಃ** –ಯಾವ ಪರಮಾತ್ಮನು, **ನಃ** –ನಮ್ಮ, **ಧಿಯಃ** –ಬುದ್ಧಿಗಳನ್ನು, **ಪ್ರಚೋದಯಾತ್** –ಪ್ರೇರಿಸುತ್ತಾನೋ, (ತಸ್ಯ) ಅಂತಹ, **ಸವಿತುಃ** –ಪ್ರಾಣಿಗಳನ್ನು ಸೃಜಿಸುವ, **ದೇವಸ್ಯ** –ಕ್ರೀಡಾದಿಗುಣವಿಶಿಷ್ಟನಾದ, ನಾರಾಯಣನ, **ತತ್** –ಸರ್ವತ್ರ ವ್ಯಾಪಕವಾದ, **ಭರ್ಗಃ** –ಭರಣಗಮನಕರ್ತೃವಾದ, ಅಂದರೆ ಜಗತ್ತಿನ ರಕ್ಷಣೆಯನ್ನೂ ಸಮಸ್ತ ವ್ಯಾಪಾರವನ್ನೂ ಮಾಡುವ, **ವರೇಣ್ಯಂ** –ಸ್ತೋತ್ರಾರ್ಹ ಗುಣಗಳಿಂದ ಪೂರ್ಣವಾದ, **ರೂಪಂ** –ಸ್ವರೂಪವನ್ನು, **ಧೀಮಹಿ** –ಧ್ಯಾನಿಸುವೆವು.

ಈ ರೀತಿ ಅರ್ಥವನ್ನು ತಿಳಿದು ಗಾಯತ್ರಿಯನ್ನು ಅಧಿಕಾರಿಯು ಜಪಿಸಿದರೆ ಸಕಲವೇದಪಾರಾಯಣವನ್ನು ಮತ್ತು ಸಕಲ ಸತ್ಕರ್ಮಗಳನ್ನು ಮಾಡಿದ ಮಹಾ ಫಲವನ್ನು ಹೊಂದುತ್ತಾನೆ. "ಯಜ್ಞಾನಾಂ ಜಪಯಜ್ಞೋಽಸ್ಮಿ" ಎಂದು ಗೀತೆಯಲ್ಲಿ ಹೇಳಿದಂತೆ ಗಾಯತ್ರೀ ಜಪರೂಪವಾದ ಯಜ್ಞವು ಸಕಲಯಜ್ಞಕ್ಕಿಂತಲೂ ಶ್ರೇಷ್ಠವಾದದ್ದು. ಗಾಯತ್ರೀಮಂತ್ರಕ್ಕೆ ಸಮಾನವಾದ ಇನ್ನೊಂದು ಮಂತ್ರವು ಇಲ್ಲ. ಬ್ರಾಹ್ಮಣ ಜಾತಿಯು ಪರಮಾತ್ಮನ ಮುಖದಿಂದ ಹುಟ್ಟಿತು. ಆದ್ದರಿಂದ ಪರಮಾತ್ಮನು ಮುಖದ ಕಾರ್ಯವಾದ ಗಾಯತ್ರೀಜಪವನ್ನೇ ಪ್ರಧಾನ ಕರ್ತವ್ಯವನ್ನಾಗಿ ಬ್ರಾಹ್ಮಣನಿಗೆ ವಿಧಿಸಿದ್ದಾನೆ. ಆದ್ದರಿಂದ ಗಾಯತ್ರೀಮಂತ್ರದ ಜಪವನ್ನು ಮಾಡದ ಬ್ರಾಹ್ಮಣನು ಪತಿತನಾಗುತ್ತಾನೆ ಮತ್ತು ಸರ್ವಥಾ ನರಕದುಃಖವನ್ನು ಅನುಭವಿಸುತ್ತಾನೆ.

ಈ ಮಂತ್ರದ ಎಲ್ಲ ಅರ್ಥವನ್ನು ಬ್ರಹ್ಮದೇವರು ಒಬ್ಬರೇ ತಿಳಿಯಲು ಸಮರ್ಥರು ಆಗಿದ್ದಾರೆ. ಅಷ್ಟು ಗಂಭೀರವಾದದ್ದು ಈ ಮಂತ್ರವು. ಜಿಜ್ಞಾಸುಗಳ ಅನೇಕ ಶಂಕೆಗಳನ್ನು ಕೂಡಾ ಈ ಮಂತ್ರವು ಪರಿಹರಿಸುತ್ತದೆ. ಹೇಗೆಂದರೆ–

ಪರಮೇಶ್ವರನು ಕಾಣುವುದಿಲ್ಲವಾದ್ದರಿಂದ ಅವನನ್ನು ಒಪ್ಪುವುದಿಲ್ಲ ಎಂಬ ಆಕ್ಷೇಪಕ್ಕೆ ಸವಿತುಃ ಎಂಬ ಪದವು ಉತ್ತರವನ್ನು ಕೊಡುತ್ತದೆ. ಸವಿತುಃ ಶಬ್ದವು ಸೂರ್ಯನನ್ನೂ ಹೇಳುತ್ತದೆ. ಅಂತಹ ಶಬ್ದದಿಂದ ಪರಮೇಶ್ವರನನ್ನು ಇಲ್ಲಿ ವರ್ಣಿಸಿರುತ್ತದೆ. ಇದರಿಂದ ಇಷ್ಟು ಸೂಚಿತವಾಗುತ್ತದೆ. ರಾತ್ರಿಯಲ್ಲಿ ಸೂರ್ಯನು ಕಾಣದೇ ಇದ್ದರೂ ಇದ್ದಾನೆ. ಅವನಿಗೆ ಭೂಮಿಯು ಅಡ್ಡವಾಗಿ ಇದೆ. ಅದರಂತೆ ಪರಮೇಶ್ವರನ ಮತ್ತು ಜೀವನ ಮಧ್ಯದಲ್ಲಿ ಅಜ್ಞಾನವೆಂಬ ಆವರಣ ಇದೆ ಆದ್ದರಿಂದ ಪರಮೇಶ್ವರನು ಇದ್ದರೂ ಕಾಣುವುದಿಲ್ಲ.

ಸೂರ್ಯನು ರಾತ್ರಿಯಲ್ಲಿ ಕಾಣದೇ ಇದ್ದರೂ ಹಗಲಿಗೆ ಕಾಣುತ್ತಾನೆ ಆದ್ದರಿಂದ ಸೂರ್ಯನು ರಾತ್ರಿಯಲ್ಲಿಯೂ ಇದ್ದಾನೆಂದು ಒಪ್ಪಬಹುದು

ಪರಮೇಶ್ವರನು ಕಾಣುವುದೇ ಇಲ್ಲ ಎಂದು ಆಕ್ಷೇಪಿಸಿದರೆ **ದೇವಸ್ಯ** ಎಂಬ ಪದವನ್ನು ಪ್ರಯೋಗಿಸಲಾಗಿದೆ. **"ದೇವಾದಿವದಪಿ ಲೋಕೇ"** ಎಂಬ ಬ್ರಹ್ಮಸೂತ್ರದಲ್ಲಿ ದೇವತೆಗಳಿಗೆ ಮತ್ತು ಪಿಶಾಚಾದಿಗಳಿಗೆ ಅಂತರ್ಧಾನಶಕ್ತಿ ಅಂದರೆ ಕಾಣಿಸಿಕೊಳ್ಳದೇ ಇರುವ ಶಕ್ತಿ ಇದ್ದ ಕಾರಣ ಅವರು ಹೇಗೆ ಕಾಣಿಸಿಕೊಳ್ಳುವುದಿಲ್ಲವೊ ಹಾಗೆ ದೇವಾಧಿದೇವನಾದ ಪರಮೇಶ್ವರನಿಗೆ ಅಂತಹ ಶಕ್ತಿಯು ಇದ್ದೇ ಇದೆ. ಆದಕಾರಣ ಅವನು ಇದ್ದರೂ ಕಾಣಿಸಿಕೊಳ್ಳುವುದಿಲ್ಲ ಎಂದು ನಿರ್ಣಯಿಸಿರುತ್ತದೆ. ಆ ನಿರ್ಣಯವನ್ನು **ದೇವಸ್ಯ** ಎಂಬ ಪದವು ಸೂಚಿಸುತ್ತದೆ. ದೇವತೆಗಳು ಮಹಾ ಯೋಗಿಗಳಿಗೆ ಪ್ರತ್ಯಕ್ಷರಾಗುತ್ತಾರೆ. ಈ ವಿಷಯವನ್ನು **'ದೃಶ್ಯತೇ ತು'** ಎಂಬ ಸೂತ್ರದಲ್ಲಿ ಹೇಳಿರುತ್ತದೆ. ಅದರಂತೆ ಪರಮೇಶ್ವರನು ನೃಸಿಂಹರೂಪದಿಂದ ಕಂಭದಿಂದ ಹೊರಗೆ ಬಂದು ಹಿರಣ್ಯಕಶಿಪುವನ್ನು ಸಂಹರಿಸಿ ಭಕ್ತನಾದ ಪ್ರಹ್ಲಾದನನ್ನು ರಕ್ಷಿಸಿದನು. ಇದನ್ನು ಆಗಿನ ಅಲ್ಲಿರುವ ಜನರು ನೋಡಿದ್ದಾರೆ. ಮತ್ತು ಅರ್ಜುನನಿಗೆ ಶ್ರೀಕೃಷ್ಣನು ವಿಶ್ವರೂಪದರ್ಶನವನ್ನು ಅನುಗ್ರಹಿಸಿದ್ದಾನೆ. ಯಶೋದೆಯು ಶ್ರೀಕೃಷ್ಣನ ಬಾಯಿಯ ಒಳಗೆ ಇಡೀ ಜಗತ್ತನ್ನೆ ನೋಡಿದ್ದಾಳೆ. ಎಲ್ಲ ಗೋಪಾಲಕರು ಏಳು ವರ್ಷ ವಯಸ್ಸಿನ ಬಾಲಕ ಕೃಷ್ಣನು ಒಂದು ಬೆರಳಿನಿಂದ ಏಳು ದಿನದವರೆಗೆ ಗೋವರ್ಧನ ಪರ್ವತವನ್ನು ಎತ್ತಿ ಮಳೆಯಿಂದ ಎಲ್ಲ ಗೋಪಾಲರನ್ನು ರಕ್ಷಿಸಿದ್ದನ್ನು ನೋಡುತ್ತಾರೆ. ಬಲಿಚಕ್ರವರ್ತಿಯು ವಾಮನ ರೂಪಿಯಾದ ವಟು ತ್ರೈಲೋಕ್ಯವನ್ನು ವ್ಯಾಪಿಸಿದ್ದನ್ನು ನೋಡಿದ್ದಾನೆ. ಮತ್ತು ಮಹಾಜ್ಞಾನಿಗಳು ಈಗಲೂ ಪರಮೇಶ್ವರನನ್ನು ನೋಡುತ್ತಾರೆ, ಆದ್ದರಿಂದ ದೇವತೆಗಳನ್ನು ಒಪ್ಪುವವರು ಪರಮೇಶ್ವರನನ್ನು ಒಪ್ಪಬೇಕು.

ಮಹಾಜ್ಞಾನಿಗಳು ಪರಮೇಶ್ವರನನ್ನು ನೋಡಿದರೂ ನಮಗೆ ಅದರಿಂದ ಏನೂ ಪ್ರಯೋಜನವಿಲ್ಲ. ನಾವು ಪರಮೇಶ್ವರನು ಇದ್ದಾನೆಂದು ಯಾವ ಆಧಾರದಿಂದ ತಿಳಿಯಬೇಕು ಎಂಬ ಪ್ರಶ್ನೆಗೆ **ಸವಿತುಃ ಭರ್ಗಃ** ಈ ಎರಡು ಪದಗಳಿಂದ ಉತ್ತರವನ್ನು ಕೊಡಲಾಗಿದೆ. ಸವಿತೃಶಬ್ದಕ್ಕೆ ಪ್ರಾಣಿಗಳನ್ನು ಸೃಜಿಸುವವನು ಎಂದು ಅರ್ಥ. ಭರ್ಗಶಬ್ದಕ್ಕೆ ಜಗತ್ತಿನ ರಕ್ಷಣವನ್ನು ಸಮಸ್ತ ವ್ಯಾಪಾರವನ್ನು ಮಾಡುವವನು ಎಂದು ಅರ್ಥವಾದ್ದರಿಂದ ಆ ಪ್ರಶ್ನೆಗೆ ಸಮಾಧಾನ ಸಿಗುವುದು. ಒಬ್ಬ ಬಾಲಕನನ್ನು ನೋಡಿ ಇದಕ್ಕೆ ತಂದೆ ಒಬ್ಬ ಇರಬೇಕು ಎಂದು ತಿಳಿಯುವಂತೆ ಎಲ್ಲ ಪ್ರಾಣಿಗಳ ಸೃಷ್ಟಿಯಾಗುವುದನ್ನು ನೋಡಿ ಸೃಷ್ಟಿಕರ್ತನಾದ ಪರಮೇಶ್ವರನು ಇದ್ದಾನೆಂದು ತಿಳಿಯುತ್ತೇವೆ. ಮತ್ತು ತಾಯಿಯ ಗರ್ಭದಲ್ಲಿ ಮಗುವು ಬೆಳೆಯುತ್ತದೆ. ಅದಕ್ಕೆ ಆಹಾರವನ್ನು ಕೊಟ್ಟು ರಕ್ಷಿಸುವವರು ಯಾರು? ಆ ಮಗುವು ಹತ್ತು ತಿಂಗಳು ಆದಮೇಲೆ ತಾಯಿಯ ಉದರದಿಂದ ಹೊರಗೆ ಬರುತ್ತದೆ. ಅದು ಯಾರ ವ್ಯಾಪಾರ? ಪರಮೇಶ್ವರನು ಅಲ್ಲದೆ ಇನ್ನು ಯಾರಿಂದಲೂ ಆ ವ್ಯಾಪಾರವನ್ನು ಮಾಡಲು ಸಾಧ್ಯವಿಲ್ಲವಾದ್ದರಿಂದ ಪರಮೇಶ್ವರನು ಇದ್ದಾನೆಂದು ತಿಳಿಯುತ್ತೇವೆ.

ಒಬ್ಬನೇ ಪರಮೇಶ್ವರನು ಅನಂತಪದಾರ್ಥಗಳ ಸೃಷ್ಟಿ ರಕ್ಷಣ ಇತ್ಯಾದಿಗಳನ್ನು ಮಾಡುವುದು ಅಶಕ್ಯವಾದ್ದರಿಂದ ಅದು ಅಸಂಭಾವಿತವೆಂಬ ಆಕ್ಷೇಪ

ಬಂದರೆ **ತತ್ ಸವಿತುಃ** ಈ ಎರಡು ಪದಗಳನ್ನು ಪ್ರಯೋಗಿಸಲಾಗಿದೆ. ತತ್ ಎಂಬ ಪದಕ್ಕೆ ಪರಮೇಶ್ವರನು ಸರ್ವತ್ರ ವ್ಯಾಪಕನು ಎಂದು ಅರ್ಥವಾದ್ದರಿಂದ ಅಂತಹ ಸರ್ವ ವ್ಯಾಪಕನಾದ ಪರಮೇಶ್ವರನಿಗೆ ಎಲ್ಲ ದೇಶದಲ್ಲಿರುವ ಸಕಲ ಕಾರ್ಯಗಳ ವ್ಯಾಪಾರವನ್ನು ಮಾಡುವುದು ಶಕ್ಯವೆಂದು ಸೂಚಿತವಾಯಿತು ಮತ್ತು ಒಬ್ಬನೇ ಸೂರ್ಯನು ಸರ್ವ ಜಗತ್ತನ್ನು ಪ್ರಕಾಶಿಸುವಂತೆ ಒಬ್ಬನೇ ಪರಮೇಶ್ವರನು ಸರ್ವ ವಸ್ತುಗಳ ವ್ಯಾಪಾರವನ್ನು ಮಾಡುವುದು ಅಸಂಭಾವಿತವಲ್ಲ ಎಂದು ಸೂಚಿತವಾಯಿತು.

ಪರಮೇಶ್ವರನು ಒಬ್ಬನನ್ನು ಸುಖಿಯನ್ನಾಗಿ ಇನ್ನೊಬ್ಬನನ್ನು ದುಃಖಿಯನ್ನಾಗಿ ಮಾಡಿದ್ದಾನೆ. ಈ ರೀತಿ ಪಕ್ಷಪಾತ ಮತ್ತು ದ್ವೇಷಗಳು ಪರಮೇಶ್ವರನಿಗೆ ಇರ ಬಹುದೆ? ಈ ಆಕ್ಷೇಪಕ್ಕೆ ಅವರವರ ಕರ್ಮವೇ ಕಾರಣವೆಂದು ಸಮಾಧಾನವನ್ನು ಹೇಳಿದರೂ ಸರಿಯಾಗುವುದಿಲ್ಲ, ಏಕೆಂದರೆ ಒಬ್ಬರಿಂದ ಸತ್ಕರ್ಮವನ್ನು ಮತ್ತೊಬ್ಬರಿಂದ ದುಷ್ಕರ್ಮವನ್ನು ಪರಮೇಶ್ವರನು ಏಕೆ ಮಾಡಿಸುತ್ತಾನೆ? ಎಂದು ಪುನಃ ಆಕ್ಷೇಪವಿದೆ. ಅದಕ್ಕೂ ಉತ್ತರರೂಪವಾಗಿ **ಸವಿತುಃ** ಎಂಬ ಪದವು ಇರುತ್ತದೆ. ಸೂರ್ಯಪ್ರಕಾಶವು ಎಲ್ಲ ಪದಾರ್ಥಗಳ ಮೇಲೆ ಒಂದೇ ರೀತಿಯಾಗಿ ಇದ್ದರೂ ಸೂರ್ಯಕಾಂತಶಿಲೆಗೆ ಸೂರ್ಯಪ್ರಕಾಶ ಬಿದ್ದರೆ ಅದು ಹುಲ್ಲನ್ನು ಸುಡುತ್ತದೆ. ಅಂದರೆ ಸೂರ್ಯಕಾಂತಶಿಲೆಯಲ್ಲಿ ಬೆಂಕಿ ಉತ್ಪನ್ನವಾಗುತ್ತದೆ. ಬೇರೆ ಕಡೆಯಲ್ಲಿ ಹಾಗೆ ಬೆಂಕಿ ಹುಟ್ಟುವುದಿಲ್ಲ. ಈ ವ್ಯತ್ಯಾಸಕ್ಕೆ ಸೂರ್ಯನ ಪಕ್ಷಪಾತವು ಕಾರಣವಲ್ಲ, ಮತ್ತೇನೆಂದರೆ ಸೂರ್ಯಕಾಂತಶಿಲೆ ಮುಂತಾದ ವಸ್ತುಗಳ ಸ್ವಭಾವವೇ ಕಾರಣ. ಅದರಂತೆ ಆ ಆ ಜೀವರ ನಾನಾ ಸ್ವಭಾವ ಅಥವಾ ಯೋಗ್ಯತೆಯೇ ಲೋಕದ ಕಾಣುವ ವೈಚಿತ್ರ್ಯಕ್ಕೆ ಕಾರಣ. ಪರಮೇಶ್ವರನು ಆ ಆ ಜೀವರ ಯೋಗ್ಯತೆಯನ್ನು ಅನುಸರಿಸಿ ಅವರಿಂದ ನಾನಾ ವಿಧ ಕರ್ಮಗಳನ್ನು ಮಾಡಿಸಿ ಅದರ ಫಲರೂಪವಾಗಿ ಸುಖದುಃಖಾದಿಗಳನ್ನು ಕೊಡುತ್ತಾನೆ. ಲೋಕದಲ್ಲಿ ಪ್ರಭುಗಳಾದವರು ತಮ್ಮ ಭೃತ್ಯರ ಯೋಗ್ಯತೆಯನ್ನು ನೋಡಿ ಯಾರಿಗೆ ಯಾವುದು ಮಾಡಲು ಶಕ್ಯವಿದೆಯೋ ಅಂತಹ ಕೆಲಸವನ್ನು ಅವರಿಂದ ಮಾಡಿಸಿ ಅವರ ಕೆಲಸಕ್ಕೆ ಯೋಗ್ಯವಾದ ವೇತನವನ್ನು ಕೊಡುತ್ತಾರೆ. ಅಂತಹ ಪ್ರಭುಗಳನ್ನು ಎಲ್ಲರೂ ಕೊಂಡಾಡುತ್ತಾರೆ. ಅದರಂತೆ ಮಹಾಪ್ರಭುವಾದ ಪರಮೇಶ್ವರನೂ ಕೂಡಾ ಮಾಡುವುದರಿಂದ ಪರಮೇಶ್ವರನ ಮೇಲೆ ಯಾವ ದೋಷಾರೋಪಕ್ಕೂ ಅವಕಾಶ ಇಲ್ಲ. ಈ ವಿಷಯವು '**ಸ್ಥಾನವಿಶೇಷಾತ್ ಪ್ರಕಾಶಾದಿವತ್**' ಎಂಬ ಬ್ರಹ್ಮಸೂತ್ರದಲ್ಲಿ ನಿರೂಪಿತವಾಗಿರುತ್ತದೆ. ಒಂದೊಂದು ಜೀವರಿಗೆ ಒಂದೊಂದು ಯೋಗ್ಯತೆಯನ್ನು ಪರಮೇಶ್ವರನು ಏಕೆ ಸೃಷ್ಟಿಮಾಡಿದನು. ಎಲ್ಲ ಜೀವರನ್ನು ಒಂದೇರೀತಿಯಾದ ಉತ್ತಮೋತ್ತಮ ಯೋಗ್ಯತೆ ಉಳ್ಳವ ರನ್ನಾಗಿಯೇ ಸೃಷ್ಟಿಮಾಡಬೇಕಾಗಿತ್ತು ಎಂಬ ಆಕ್ಷೇಪವು, ಎಲ್ಲ ಜೀವರು ಅನಾದಿ ನಿತ್ಯರು ಅವರ ನಾನಾ ವಿಧ ಯೋಗ್ಯತೆಗಳು ಅನಾದಿ ನಿತ್ಯಗಳು ಎಂದು **ಶಾಸ್ತ್ರದಲ್ಲಿ ಹೇಳಿದ್ದರಿಂದ ಬರುವುದೇ ಇಲ್ಲ. ಈ ಸಮಾಧಾನವೂ ಕೂಡಾ ಸವಿತುಃ**

ಎಂಬ ಪದದಿಂದ ಸೂಚಿತವಾಗುತ್ತದೆ. ಹೇಗೆಂದರೆ ಸೂರ್ಯನು ಇರತಕ್ಕ ವಸ್ತುಗಳನ್ನೆಲ್ಲಾ ಪ್ರಕಾಶಿಸುತ್ತಾನೆ. ಇಲ್ಲದೇ ಇದ್ದದ್ದನ್ನು ಉಂಟುಮಾಡಿ ಪ್ರಕಾಶಿಸು ವುದಿಲ್ಲ. ಅದರಂತೆ ಪರಮೇಶ್ವರನು ಕೂಡಾ ಅನಾದಿನಿತ್ಯವಾಗಿ ಇರತಕ್ಕ ಅನಂತ ಜೀವರುಗಳ ಅನಾದಿನಿತ್ಯಗಳಾದ ನಾನಾವಿಧ ಯೋಗ್ಯತೆಗಳ ವಿಕಾಸವನ್ನು ಮಾತ್ರ ಮಾಡತಕ್ಕವನು ಹೊರತು ಇಲ್ಲದೆ ಇದ್ದ ಯೋಗ್ಯತೆಯನ್ನುಂಟುಮಾಡಿ ಆ ಯೋಗ್ಯತೆಗಳನ್ನು ವಿಕಾಸಗೊಳಿಸತಕ್ಕವನಲ್ಲ. ಹಾಗಾದರೆ ಉತ್ತಮ ಯೋಗ್ಯತೆವುಳ್ಳ ದೇವತೆಗಳೇ ಮೊದಲಾದ ಜೀವರುಗಳಿಗೆ ಒಮ್ಮೊಮ್ಮೆ ಪರಮೇಶ್ವರನು ದುಃಖವನ್ನು ಏಕೆ ಕೊಡುತ್ತಾನೆ? ಎಂದು ಆಕ್ಷೇಪಿಸಿದರೆ ಅದಕ್ಕೂ ಸವಿತುಃ ಎಂಬ ಪದದಿಂದ ಉತ್ತರವು ಸೂಚಿಸಲ್ಪಟ್ಟಿದೆ. ಸೂರ್ಯನು ಗ್ರೀಷ್ಮಕಾಲದಲ್ಲಿ ಬಹಳ ಸಂತಾಪವನ್ನು ಕೊಡುತ್ತಾನೆ. ಆದರೂ ಸೂರ್ಯನನ್ನು ವಿವೇಕಿಗಳು ನಿಂದಿಸು ವುದಿಲ್ಲ, ಏಕೆಂದರೆ ಭೂಮಿಗೆ ಸೂರ್ಯತಾಪವು ಉಂಟಾದ್ದರಿಂದ ಮಣ್ಣಿನಲ್ಲಿ ಸಾರವು ಉಂಟಾಗುತ್ತದೆ. ಅದರಿಂದ ಬೆಳೆಯು ಚೆನ್ನಾಗಿ ಬರುತ್ತದೆ. ಮತ್ತು ಸಮುದ್ರ-ನದಿಗಳ ನೀರನ್ನು ಸೂರ್ಯನು ತನ್ನ ಕಿರಣಗಳಿಂದ ಸೆಳೆದು ಮೇಘವ ನ್ನುಂಟುಮಾಡುತ್ತಾನೆ. ಇದರಿಂದ ಎಲ್ಲ ಕಡೆ ಮಳೆಬಂದು ಸುಭಿಕ್ಷೆಯಾಗುತ್ತದೆ. ಅದರಂತೆ ಉತ್ತಮ ಯೋಗ್ಯತೆಯುಳ್ಳ ಜೀವರುಗಳಿಗೆ ದುಃಖವನ್ನು ಕೊಟ್ಟದ್ದರಿಂದ ಅವರು ಸಂಸಾರದ ಅಲ್ಪ ಸುಖದಲ್ಲಿ ವಿರಕ್ತರಾಗಿ ಶ್ರೇಯಸ್ಸಾಧನವನ್ನು ಮಾಡು ತ್ತಾರೆ. ಅದರಿಂದ ಅವರಿಗೆ ಶಾಶ್ವತವಾದ ಮೋಕ್ಷಸುಖವು ಸಿಗುತ್ತದೆ. ಆದ್ದರಿಂದ ಅವರು ಸಂಸಾರದಲ್ಲಿ ಆಗಾಗ ಆಪತ್ತುಗಳು ಬರಬೇಕೆಂದೇ ಅಪೇಕ್ಷಿಸುತ್ತಾರೆ. ಇದಕ್ಕೆ ಕುಂತಿದೇವಿಯೇ ಸಾಕ್ಷಿಯಾಗಿದ್ದಾಳೆ. ಅವಳು ಶ್ರೀಕೃಷ್ಣನನ್ನು ಕುರಿತು **"ವಿಪದಃ ಸಂತು ನಃ ಶಶ್ವತ್"** ಎಂದು ಬೇಡಿದ್ದಾಳೆಂದು ಭಾಗವತದಲ್ಲಿ ಬಂದಿದೆ. ಆದ್ದರಿಂದ ಪರಮೇಶ್ವರನು ಸಜ್ಜೀವರುಗಳಿಗೂ ದುಃಖವನ್ನುಂಟುಮಾಡುವುದು ಯುಕ್ತ.

ಜಗತ್ತಿನ ಎಲ್ಲ ಕಾರ್ಯಗಳು ಕರ್ಮದಿಂದ ಆಗುತ್ತದೆಂದು ಮೀಮಾಂಸಕರು ಹೇಳುತ್ತಾರೆ. ಸಾಂಖ್ಯರು ಪ್ರಕೃತಿಯಿಂದ ಆಗುತ್ತದೆಂದು, ಕಾಲಜ್ಞರು ಕಾಲದಿಂದ ಆಗುತ್ತದೆಂದು, ಆಧುನಿಕ ವಿಜ್ಞಾನಿಗಳು ಅವ್ಯಕ್ತ ಶಕ್ತಿಯಿಂದ ಆಗುತ್ತದೆಂದು ಹೇಳುತ್ತಾರೆ. ಹೀಗಿರುವಾಗ ಪರಮೇಶ್ವರನು ಅಗತ್ಯವಿಲ್ಲ ಎಂದು ಆಕ್ಷೇಪಿಸಿದರೆ **'ಧಿಯೋ ಯೋ ನಃ ಪ್ರಚೋದಯಾತ್"** ಎಂದು ಉತ್ತರವು ಕೊಡಲ್ಪಡುತ್ತದೆ. ಜಗತ್ತಿನಲ್ಲಿ ಯೋಜನಾಬದ್ಧ ವ್ಯವಸ್ಥಿತ ಕಾರ್ಯಗಳು ಆಗುತ್ತವೆ. ಅಂತಹ ಕಾರ್ಯಗಳು ಒಳ್ಳೆ ಬುದ್ಧಿವಂತರಿಂದಲೇ ಆಗಲು ಶಕ್ಯ. ಬುದ್ಧಿ ಇಲ್ಲದವರು ಮಾಡಿದ ಕಾರ್ಯ ಅವ್ಯವಸ್ಥಿತವಾಗುತ್ತದೆ. ಒಳ್ಳೆ ಬುದ್ಧಿಯುಳ್ಳವರು ಮಾಡಿದ ಕಾರ್ಯ ಸುವ್ಯವಸ್ಥಿತವಾಗುತ್ತದೆ ಎಂದು ಕಂಡಿದೆ. ಬುದ್ಧಿವಂತರಾದ ಜೀವರಿಂದ ಮಾಡಲು ಅಶಕ್ಯಗಳಾದ ಅನಂತಾನಂತ ಯೋಜನಾಬದ್ಧ ಕಾರ್ಯಗಳು ಏನು ಇವೆ, ಇವುಗಳನ್ನು ಒಬ್ಬ ಮಹಾಬುದ್ಧಿಮಾನ್ ಚೇತನನೇ ಮಾಡಬೇಕೇ ಹೊರತು ಅಚೇತನಗಳಾದ ಕರ್ಮ ಪ್ರಕೃತಿ ಕಾಲ ಶಕ್ತಿಗಳು ಮಾಡಲಾರವು. ಆದ್ದರಿಂದ

ಸರ್ವಬುದ್ಧಿಗಳಿಗೆ ಯಾರು ಪ್ರೇರಕನೋ ಅವನೇ ಅಪಾರಬುದ್ಧಿಯುಳ್ಳವನು, ಅವನೇ ಈ ಕಾರ್ಯಗಳನ್ನು ಮಾಡುತ್ತಾನೆಂದು ಸಿದ್ಧಿವಾಗುತ್ತದೆ. ಆದ್ದರಿಂದ ಸರ್ವಜ್ಞನಾದ ಪರಮೇಶ್ವರನು ಅಗತ್ಯ. ಮತ್ತು ಲೋಕದಲ್ಲಿ ಐಶ್ವರ್ಯವಂತನೇ ಇನ್ನೊಬ್ಬನಿಗೆ ಧನವನ್ನು ಕೊಡುತ್ತಾನೆ. ದರಿದ್ರನು ಕೊಡಲಾರ. ವಿದ್ಯೆಯುಳ್ಳವನೇ ಇನ್ನೊಬ್ಬರಿಗೆ ವಿದ್ಯೆಯನ್ನು ಕೊಡುತ್ತಾನೆ, ದಡ್ಡನು ಕೊಡಲಾರ. ಆದ್ದರಿಂದ ಎಲ್ಲ ಜೀವರುಗಳಿಗೆ ಬುದ್ಧಿಯನ್ನು ಕೊಡತಕ್ಕವನು ತಾನು ಮಹಾಬುದ್ಧಿಯುಳ್ಳವ ನಾಗಬೇಕು. ಕರ್ಮ ಮುಂತಾದ ಅಚೇತನಗಳು ತಾವು ಬುದ್ಧಿ ಇಲ್ಲದವುಗಳಾ ದ್ದರಿಂದ ಇನ್ನೊಬ್ಬರಿಗೆ ಬುದ್ಧಿಯನ್ನು ಕೊಡಲಾರವು. ಆದ್ದರಿಂದ ಸರ್ವಜ್ಞನಾದ ಪರಮೇಶ್ವರನು ಅಗತ್ಯ.

ಪರಮೇಶ್ವರನು ಸರ್ವರಕ್ಷಕನೆಂದು ಹೇಳಬಾರದು. ನಾವು ದ್ರವ್ಯವನ್ನು ಸಂಪಾದಿಸಿ ಆಹಾರಸಾಮಗ್ರಿಗಳನ್ನು ತಂದು ನಮ್ಮನ್ನು ನಮ್ಮ ಪರಿವಾರವನ್ನು ರಕ್ಷಿಸುವುದು ಕಾಣುತ್ತದೆ. ನಾವು ಮನೆಗೆ ಆಹಾರವಸ್ತುಗಳನ್ನು ತಂದುಹಾಕದೇ ಇದ್ದರೆ ಹೆಂಡತಿಮಕ್ಕಳು ಉಪವಾಸಬಿದ್ದು ಸಾಯುತ್ತಾರೆ. ಪರಮೇಶ್ವರನು ರಕ್ಷಕನಾಗಿರುತ್ತಿದ್ದರೆ ಹೀಗೆ ಅವರು ಸಾಯುತ್ತಿರಲಿಲ್ಲ ಎಂದು ಆಕ್ಷೇಪಿಸಿದರೆ ಅದಕ್ಕೂ **'ಧಿಯೋ ಯೋ ನಃ ಪ್ರಚೋದಯಾತ್'** ಎಂದು ಉತ್ತರ ಕೊಡಲಾಗಿದೆ. ಅಭಿಪ್ರಾಯವೇನೆಂದರೆ–

**ನ ದೇವಾ ದಂಡಮಾದಾಯ ರಕ್ಷಂತಿ ಪಶುಪಾಲವತ್ ।**

**ಯಂ ತು ರಕ್ಷಿತುಮಿಚ್ಛಂತಿ ಬುದ್ಧ್ಯಾ ಸಂಯೋಜಯಂತಿ ತಮ್ ॥**

ಇದು ಶಾಸ್ತ್ರವಚನ. ಪಶುಪಾಲಕನು ಕೋಲನ್ನು ಹಿಡಿದುಕೊಂಡು ಪಶುಗಳ ಹಿಂಬದಿಯಿಂದ ಹೋಗುತ್ತಾ ಅವುಗಳನ್ನು ರಕ್ಷಿಸುವಂತೆ ದೇವರು ಪ್ರತ್ಯಕ್ಷವಾಗಿ ನಮ್ಮ ಹಿಂಬದಿ ನಿಂತು ನಮ್ಮನ್ನು ರಕ್ಷಿಸುವುದಿಲ್ಲ. ಯಾವಾತನನ್ನು ರಕ್ಷಿಸ ಬೇಕೆಂದು ದೇವರಿಗೆ ಇಚ್ಛೆ ಬರುತ್ತದೋ ಅವನಿಗೆ ಬುದ್ಧಿಯನ್ನು ಪ್ರೇರೇಪಿಸುತ್ತಾರೆ ಎಂದು ಇದರ ಅಭಿಪ್ರಾಯ. ನಾವು ದ್ರವ್ಯ ಸಂಪಾದಿಸಬೇಕಾದರೆ ನಮಗೆ ಅದಕ್ಕೆ ಬೇಕಾದ ಬುದ್ಧಿಯನ್ನು ಕೊಡತಕ್ಕವನು ಪರಮೇಶ್ವರನು. ಅವನು ಬುದ್ಧಿಯನ್ನು ಕೊಡದೇ ಇದ್ದಾಗ ನಾವು ಬುದ್ಧಿಯನ್ನು ಸಂಪಾದಿಸಲಾರೆವು. ನಾವೇ ನಮ್ಮ ಬುದ್ಧಿಯನ್ನೂ ಸಂಪಾದಿಸುವುದಾದರೆ ಲೋಕದಲ್ಲಿ ಎಲ್ಲರೂ ಒಳ್ಳೆ ಬುದ್ಧಿಮಂತ ರಾಗಿಯೇ ಇರಬೇಕಾಗಿತ್ತು, ದಡ್ಡರು ಯಾರೂ ಇರಬಾರದಾಗಿತ್ತು. ಆದ್ದರಿಂದ ಸರ್ವಬುದ್ಧಿಪ್ರೇರಕನಾದ ಪರಮೇಶ್ವರನೇ ಸರ್ವರಕ್ಷಕನು ಎಂದು ಸಿದ್ಧವಾಗುತ್ತದೆ.

ಸರ್ವಕರ್ಮಗಳನ್ನು ಜೀವರಿಂದ ಪರಮೇಶ್ವರನೇ ಮಾಡಿಸುವುದರಿಂದ ಜೀವರಿಗೆ ಕರ್ಮಫಲವಾದ ದುಃಖವೇಕೆ ಬರಬೇಕು ಎಂಬ ಆಕ್ಷೇಪಕ್ಕೂ **'ಧಿಯೋ ಯೋ ನಃ ಪ್ರಚೋದಯಾತ್'** ಎಂದೇ ಉತ್ತರ. ಹೇಗೆಂದರೆ ಪರಮೇಶ್ವರನು ಬಲಾತ್ಕಾರದಿಂದ ಜೀವರಿಂದ ಕರ್ಮವನ್ನು ಮಾಡಿಸುವುದಿಲ್ಲ. ಇಂತಹ ಕರ್ಮವನ್ನು ನಾನು ಮಾಡುತ್ತೇನೆಂದು ತಿಳಕೊಂಡು ಸಂಕಲ್ಪಮಾಡಿ ಜೀವನು

ಬುದ್ಧಿಪೂರ್ವಕ ಕರ್ಮವನ್ನು ಮಾಡುವುದರಿಂದ ಅಂತಹ ಬುದ್ಧಿಯನ್ನು ಜೀವನಿಗೆ ಉಂಟುಮಾಡಿ ಪರಮೇಶ್ವರನು ಕರ್ಮವನ್ನು ಮಾಡಿಸುತ್ತಾನೆಂದು ಹೇಳಬೇಕು. ಲೋಕದಲ್ಲಿ ಪರಪ್ರೇರಿತನಾಗಿ ಕರ್ಮವನ್ನು ಮಾಡುವವನು ತನಗೆ ಅದು ಮನಸ್ಸಿಗೆ ಬಂದು ಅದನ್ನು ಸಂಕಲ್ಪಪೂರ್ವಕ ಮಾಡಿದರೆ ಅದರ ಫಲವನ್ನು ಅನುಭವಿಸುತ್ತಾನೆ. ಇದಕ್ಕೆ ಉದಾಹರಣೆ: ಒಬ್ಬನು ಇಂಥವನನ್ನು ನೀನು ಕೊಲ್ಲಬೇಕೆಂದು ಪ್ರೇರೇಪಿಸಿದಾಗ ಆ ಪ್ರೇರಿತನಾದ ಮನುಷ್ಯನು ಅವನನ್ನು ಕೊಲ್ಲುತ್ತೇನೆಂದು ಒಪ್ಪಿಕೊಂಡು ಖೂನಿಮಾಡಿದರೆ ಖೂನಿ ಮಾಡಿದವನು ಶಿಕ್ಷೆಗೆ ಗುರಿಯಾಗುತ್ತಾನೆ. ಅದರಂತೆ ಪರಮೇಶ್ವರನು ಆ ಆ ಜೀವರಿಗೆ ಆ ಆ ಕರ್ಮವನ್ನು ಮಾಡುವ ಬುದ್ಧಿಯನ್ನುಂಟುಮಾಡಿಯೇ ಮಾಡಿಸುತ್ತಾನೆ. ಆದ್ದರಿಂದ ಜೀವರು ಕರ್ಮದ ಫಲಾನುಭವಕ್ಕೆ ಅರ್ಹರಾಗುತ್ತಾರೆ. ಪರಮೇಶ್ವರನು ರಾಗ ದ್ವೇಷರಹಿತನಾಗಿ ಆ ಆ ಜೀವರ ಯೋಗ್ಯತಾಪ್ರಕಾರ ಕರ್ಮಮಾಡುವುದಕ್ಕೆ ಬುದ್ಧಿಯನ್ನು ಕೊಡುವುದರಿಂದ ಪರಮೇಶ್ವರನು ಅಪರಾಧಿಯಾಗುವುದಿಲ್ಲ.

ಪರಮೇಶ್ವರನನ್ನು ಏಕೆ ಧ್ಯಾನಿಸಬೇಕು? ನಮ್ಮ ಯೋಗ್ಯತೆಯು ಚೆನ್ನಾಗಿ ಇದ್ದರೆ ನಮಗೆ ಮುಕ್ತಿಯು ಖಂಡಿತವಾಗಿಯೂ ಸಿಗುತ್ತದೆ. ಮುಕ್ತಿಯೋಗ್ಯರು ಮುಕ್ತಿಯನ್ನು ಹೊಂದದೆ ಇರುವುದಿಲ್ಲ. ನಾವು ಮುಕ್ತಿಗೆ ಅಯೋಗ್ಯರಾದರೆ ಏನು ಪ್ರಯತ್ನಮಾಡಿದರೂ ಮುಕ್ತಿಯು ಸಿಗುವುದಿಲ್ಲ. ಏಕೆಂದರೆ ಪರಮೇಶ್ವರನು ಆ ಆ ಜೀವರ ಯೋಗ್ಯತೆಯನ್ನು ಅನುಸರಿಸಿ ಸುಖವನ್ನೂ ದುಃಖವನ್ನೂ ಕೊಡುತ್ತಾನೆ ಎಂದು ಆಕ್ಷೇಪಿಸಿದರೆ ಅದಕ್ಕೆ ಉತ್ತರವಾಗಿ **ಧೀಮಹಿ** ಎಂದು ಪದವಿದೆ. ಯಾವ ಜೀವರು ಉತ್ತಮ ಯೋಗ್ಯತೆಯುಳ್ಳವರೋ ಅವರು ಈ ರೀತಿ ಆಕ್ಷೇಪವನ್ನು ಮಾಡುವುದಿಲ್ಲ. ಅವರು ನಾವು ಪರಮೇಶ್ವರನನ್ನು ಧೀಮಹಿ ಧ್ಯಾನಮಾಡುವೆವು ಎಂದೇ ಹೇಳುತ್ತಾರೆ. ಪರಮೇಶ್ವರನು ಜೀವರಾಶಿಗಳಿಗೆ ದೇಹ, ಇಂದ್ರಿಯ, ಬುದ್ಧಿಯನ್ನು ಕೊಟ್ಟು ಅವರ ರಕ್ಷಣ ಮಾಡತಕ್ಕವನು. ಅವನ ಉಪಕಾರವು ಇಷ್ಟೇ ಎಂದು ಯಾರೂ ಹೇಳಲು ಸಾಧ್ಯವಿಲ್ಲ. ಅಂತಹ ಮಹೋಪಕಾರವನ್ನು ಮಾಡಿದ ಪರಮೇಶ್ವರನನ್ನು ಮರೆಯುವುದು ಕೃತಘ್ನತೆ ಎಂಬ ಮಹಾದೋಷ. ಅವನ ಮಹೋಪಕಾರವನ್ನು ಸ್ಮರಿಸುವುದು ಕೃತಜ್ಞತೆ ಎಂಬ ಮಹಾಗುಣ. ದುಷ್ಟ ಜೀವರಾಶಿಗಳಲ್ಲಿ ಕೃತಘ್ನತೆ ಎಂಬ ಮಹಾದೋಷವು ಸ್ವಭಾವಭೂತವಾದದ್ದು. ಕೃತಜ್ಞತೆ ಎಂಬ ಮಹಾಗುಣವು ಸಜ್ಜೀವರಾಶಿಗಳ ಸ್ವಭಾವವಾಗಿರುತ್ತದೆ. ಆದ್ದರಿಂದ ಮಹೋಪಕಾರಿಯಾದ ಪರಮೇಶ್ವರನನ್ನು ಏಕೆ ಧ್ಯಾನಿಸಬೇಕು ಎಂದು ಅವರು ಕೇಳುವುದೇ ಇಲ್ಲ. ಹಾಗೆ ಕೇಳುವವರು ದುಷ್ಟಜೀವರು ಎಂದು ಅಭಿಪ್ರಾಯ.

ಪರಮೇಶ್ವರನು ನಿರ್ಗುಣನು ಎಂದು "ಕೇವಲೋ ನಿರ್ಗುಣಶ್ಚ" ಎಂಬ ಶ್ರುತಿ ಹೇಳುತ್ತದೆ. ಆದ್ದರಿಂದ ನಿರ್ಗುಣನಾದವನನ್ನು ಧ್ಯಾನಿಸುವದು ಹೇಗೆ? ಎಂಬ ಪ್ರಶ್ನೆಗೆ **ವರೇಣ್ಯಂ** ಎಂದು ಉತ್ತರ. "ಕೇವಲೋ ನಿರ್ಗುಣಶ್ಚ" ಎಂಬ ಶ್ರುತಿಗೆ ಸ್ತೋತ್ರಾನರ್ಹಗಳಾದ ಸತ್ವರಜಸ್ತಮೋರೂಪ ಪ್ರಾಕೃತ ಗುಣರಹಿತನೆಂದು

ಅರ್ಥ. ಸ್ತೋತ್ರಾರ್ಹಗಳಾದ ಆನಂದಾದಿ ಮಹಾಗುಣಗಳಿಂದ ರಹಿತನು ಎಂದು ಅರ್ಥವಲ್ಲ. ಆದ್ದರಿಂದ ಸ್ತೋತ್ರಾರ್ಹ ಆನಂದ, ಜ್ಞಾನ, ಸ್ವಾಮಿತ್ವ ಮೊದಲಾದ ಅನಂತ ಪರಿಪೂರ್ಣಗುಣವುಳ್ಳವನು ಪರಮೇಶ್ವರನಾದ್ದರಿಂದ ಅವರವರ ಯೋಗ್ಯತಾಪ್ರಕಾರ ಪರಮೇಶ್ವರನು ಗುಣಪೂರ್ಣನೆಂದೇ ಧ್ಯಾನಿಸಬೇಕು.

ಇದೇ ರೀತಿಯಿಂದ ಇನ್ನೂ ಬಹ್ವರ್ಥಗರ್ಭಿತವಾದದ್ದು ಗಾಯತ್ರೀಮಂತ್ರ. ಆದ್ದರಿಂದ ಗಾಯತ್ರಿಯ ಗಾಂಭೀರ್ಯವು ಇಷ್ಟೇ ಎಂದು ಸಾಮಾನ್ಯರಿಗೆ ತಿಳಿಯಲು ಶಕ್ಯವಿಲ್ಲ.

*

## ಸಾಯಣರ ಅರ್ಥ

ವೇದಕ್ಕೆ ಭಾಷ್ಯ ಬರೆದ ಸಾಯಣಾಚಾರ್ಯರು ಗಾಯತ್ರೀಮಂತ್ರವನ್ನು ಮುಖ್ಯವಾಗಿ ಭಗವತ್ಪರವಾಗಿ ಹಾಗೂ ಸೂರ್ಯಪರವಾಗಿ ವ್ಯಾಖ್ಯಾನಿಸಿರುವರು.

ಇವುಗಳಲ್ಲೂ ಭಗವತ್ಪರವಾದ ಅರ್ಥವನ್ನು ಮೊದಲು ತೋರಿಸುವ ಮೂಲಕ ಅದಕ್ಕೆ ಪ್ರಾಶಸ್ತ್ಯವನ್ನು ನೀಡಿರುವರು.

ಅವರ ಪ್ರಕಾರ ಅರ್ಥ ಹೀಗಿದೆ-

ಯಃ -ಯಾವ, ಸವಿತಾ ದೇವಃ -ಸವಿತೃದೇವತೆ, ನಃ -ನಮ್ಮ, ಧಿಯಃ -ಕರ್ಮಗಳನ್ನು ಅಥವಾ ಧರ್ಮಾದಿವಿಷಯಕಬುದ್ಧಿಗಳನ್ನು, ಪ್ರಚೋದಯಾತ್ -ಪ್ರೇರಿಸುವವನೋ, ತತ್ -ಅಂತಹ (ತಸ್ಯ), ದೇವಸ್ಯ ಸವಿತುಃ -ಸರ್ವಾಂತರ್ಯಾಮಿಯಾಗಿ ಪ್ರೇರಕನಾದ ಜಗನ್ನಿರ್ಮಾಪಕನಾದ ಪರಮೇಶ್ವರನ, ವರೇಣ್ಯಂ -ಎಲ್ಲರಿಂದಲೂ ಉಪಾಸ್ಯವಾಗಿ ಜ್ಞೇಯವಾಗಿ ಸೇವ್ಯವಾದ, ಭರ್ಗಃ -ಅವಿದ್ಯೆ ಹಾಗೂ ಅದರ ಕಾರ್ಯಗಳನ್ನು ನಾಶಮಾಡುವ ಸ್ವಯಂಜ್ಯೋತಿಸ್ವರೂಪಿಯಾದ ಪರಬ್ರಹ್ಮಾತ್ಮಕವಾದ ತೇಜಸ್ಸನ್ನು ನಾವು ಧೀಮಹಿ- ಧ್ಯಾನಿಸುವೆವು.

ಇಲ್ಲಿ 'ಧಿಯಃ' ಶಬ್ದಕ್ಕೆ ಕರ್ಮಾರ್ಥಕತ್ವವನ್ನು ನಿರೂಪಿಸಿದುದೂ, ಪರಬ್ರಹ್ಮನಲ್ಲಿ ಅಂತರ್ಯಾಮಿಯಾಗಿ ಸವಿತೃ ಶಬ್ದವಾಚ್ಯತ್ವವನ್ನು ಸಮರ್ಥಿಸಿದುದೂ ವಿಶೇಷವೆನಿಸಿದೆ.

— *ಸಗ್ರಿ*

* * *

## ಧರ್ಮಸಿಂಧುವಿನಲ್ಲಿ ಗಾಯತ್ರಿ

**ಯೋ ದೇವಃ ಸವಿತಾಸ್ಮಾಕಂ ಧಿಯೋ ಧರ್ಮಾದಿಗೋಚರೇ ।**
**ಪ್ರೇರಯೇತ್ತಸ್ಯ ತದ್ಭರ್ಗಸ್ತದ್ವರೇಣ್ಯಮುಪಾಸ್ಮಹೇ ॥**

ಯಾವ ಸವಿತೃದೇವನು ಧರ್ಮಾದಿ ವಿಷಯದಲ್ಲಿ ನಮ್ಮ ಬುದ್ಧಿಯನ್ನು ಪ್ರೇರಿಸುವನೋ ಅವನ 'ಭರ್ಗಃ' 'ವರೇಣ್ಯ' 'ತತ್' -ಆದ ರೂಪವನ್ನು ಉಪಾಸಿಸುವೆವು.

# ಗಾಯತ್ರಿಯ ಧ್ಯಾನ

ಸಗ್ರಿ ರಾಘವೇಂದ್ರ ಉಪಾಧ್ಯಾಯ

ಶ್ರೀಮದಾಚಾರ್ಯರು ತಮ್ಮ ಸದಾಚಾರಸ್ಮೃತಿಯಲ್ಲಿ ಉತ್ಥಾನ, ಸ್ನಾನ ಮುಂತಾದ ಚಟುವಟಿಕೆಗಳನ್ನು ನಡೆಸುವಾಗ ಶ್ರೀಹರಿಯನ್ನು ಸ್ಮರಿಸುತ್ತ ಇರಬೇಕು ಎಂಬುದಾಗಿ 'ಸ್ಮೃತ್ವಾ ಹರಿಂ', 'ಸ್ಮೃತ್ವಾ ನಾರಾಯಣಂ', 'ಹರಿಂ ಸ್ಮರನ್' ಎಂದೆಲ್ಲ ತಿಳಿಸಿರುವರು. ಆದರೆ ಗಾಯತ್ರಿಯಿಂದ ಸೂರ್ಯಾರ್ಘ್ಯವನ್ನು ನೀಡುವಾಗ 'ಧ್ಯಾತ್ವಾ ಸೂರ್ಯಗತಂ ಹರಿಮ್' ಎಂಬುದಾಗಿ, ಹಾಗೆಯೇ ಗಾಯತ್ರಿಯನ್ನು ಜಪಿಸುವಾಗ 'ಅರ್ಕಮಂಡಲಗಂ ವಿಷ್ಣುಂ ಧ್ಯಾತ್ವೈವ ತ್ರಿಪದೀಂ ಜಪೇತ್' ಎಂಬುದಾಗಿ ಸೂರ್ಯಮಂಡಲಗತನಾದ ಸೂರ್ಯನಾರಾಯಣನನ್ನು ಧ್ಯಾನ ಮಾಡಬೇಕು ಎಂದು ತಿಳಿಸಿರುವರು.

'.....ಅಖಂಡಾ ಧ್ಯಾನಮುಚ್ಯತೇ' ಎಂದಿರುವಂತೆ ನಿರಂತರವಾದ ಸ್ಮರಣೆ ಧ್ಯಾನ ಎನಿಸುವುದು. ಆದುದರಿಂದ ಸೂರ್ಯಾರ್ಘ್ಯ ನೀಡುವಾಗ, ಗಾಯತ್ರೀಜಪ ಮಾಡುವಾಗ ಸೂರ್ಯಮಂಡಲದಲ್ಲಿರುವ ಸೂರ್ಯನಾರಾಯಣನನ್ನು ನಿರಂತರ ಧ್ಯಾನ ಮಾಡಬೇಕೆಂದು ಸ್ಪಷ್ಟವಾಗುವುದು.

ಸೂರ್ಯಮಂಡಲದಲ್ಲಿ ಸೂರ್ಯನಾರಾಯಣನನ್ನು ಹೇಗೆ ಚಿಂತಿಸಬೇಕು? ಎಂಬುದರ ಬಗ್ಗೆ ಶ್ರೀಮದಾಚಾರ್ಯರು ಎರಡು ಶ್ಲೋಕಗಳನ್ನು ಪ್ರಸ್ತುತಪಡಿಸಿರುವರು. ಅವುಗಳಲ್ಲಿ ತಂತ್ರಸಾರಸಂಗ್ರಹದಲ್ಲಿ (೧–೪೦) ಉಲ್ಲೇಖಗೊಂಡ ಶ್ಲೋಕ ಹೀಗಿದೆ:

**ಪ್ರೋದ್ಯದಾದಿತ್ಯವರ್ಣಶ್ಚ ಸೂರ್ಯಮಂಡಲಮಧ್ಯಗಃ ।**
**ಚಕ್ರಶಂಖಧರೋಽಂಕಸ್ಥದೋರ್ದ್ವಯೋ ಧ್ಯೇಯ ಏವ ಚ ॥**

ಉದಯಿಸುವ ಸೂರ್ಯನಂತೆ ಬೆಳಗುವ, ಸೂರ್ಯಮಂಡಲದ ಮಧ್ಯದಲ್ಲಿ ಕುಳಿತಿರುವ, ಎರಡು ಕೈಗಳಿಂದ ಚಕ್ರಶಂಖಗಳನ್ನು ಧರಿಸಿ, ಉಳಿದೆರಡು ಕೈಗಳನ್ನು ತೊಡೆಯ ಮೇಲಿರಿಸಿಕೊಂಡಿರುವ ಭಗವದ್ರೂಪವನ್ನು ಧ್ಯಾನಿಸಬೇಕು.

ಶ್ರೀಮದಾಚಾರ್ಯರು ತಮ್ಮ ಸದಾಚಾರಸ್ಮೃತಿಯಲ್ಲಿ (೯) ಉಲ್ಲೇಖಿಸಿರುವ ಶ್ಲೋಕ–

**ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ**
**ನಾರಾಯಣಃ ಸರಸಿಜಾಸನಸನ್ನಿವಿಷ್ಟಃ ।**
**ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ**
**ಹಾರೀ ಹಿರಣ್ಮಯವಪುರ್ಧೃತಶಂಖಚಕ್ರಃ ॥**

ಶ್ರೀಮನ್ನಾರಾಯಣನು ಸೂರ್ಯಮಂಡಲದ ಮಧ್ಯದಲ್ಲಿ ಕಮಲದ ಮೇಲೆ 'ಪದ್ಮಾಸನ' ಅಳವಡಿಸಿಕೊಂಡು ಕುಳಿತುಕೊಂಡಿರುವನು. ತೋಳುಗಳಲ್ಲಿ ತೋಳ್ಬಳೆ, ಕಿವಿಗಳಲ್ಲಿ ಮೊಸಳೆಯಾಕಾರದ ಕುಂಡಲಗಳು, ತಲೆಯ ಮೇಲೆ ಕಿರೀಟ, ಕೊರಳಿನಲ್ಲಿ ಹಾರಗಳು ವಿರಾಜಿಸುತ್ತಿವೆ. ಕೈಗಳಿಂದ ಶಂಖವನ್ನೂ, ಚಕ್ರವನ್ನೂ ಧರಿಸಿರುವನು. ಚಿನ್ನದ ಮೈಬಣ್ಣ. ಇಂತಹ ನಾರಾಯಣನನ್ನು ಯಾವಾಗಲೂ ಧ್ಯಾನಿಸುತ್ತಿರಬೇಕು.

ಶ್ರೀಮದಾಚಾರ್ಯರು ತಮ್ಮ ಐತರೇಯೋಪನಿಷದ್ಭಾಷ್ಯದಲ್ಲಿ (೨-೧-೧-೧)) ನಾರಸಿಂಹಪುರಾಣದ ಶ್ಲೋಕವಾಗಿ ಉಲ್ಲೇಖಿಸಿದ ಈ ಶ್ಲೋಕ ಶೌನಕರ ಋಗ್ವಿಧಾನದ ತೃತೀಯಾಧ್ಯಾಯದಲ್ಲಿ (೨೨೯) ಉಲ್ಲೇಖಗೊಂಡಿದೆ.

ತಂತ್ರಸಾರಸಂಗ್ರಹದಲ್ಲಿ ಉಲ್ಲೇಖಿಸಿದ 'ಪ್ರೋದ್ಯತಾದಿತ್ಯವರ್ಣಶ್ಚ.....' ಎಂಬ ಶ್ಲೋಕವನ್ನೂ, ಸದಾಚಾರಸ್ಮೃತ್ಯಾದಿಗಳಲ್ಲಿ ಉಲ್ಲೇಖಿಸಿದ 'ಧ್ಯೇಯಃ ಸದಾ.....' ಎಂಬ ಶ್ಲೋಕವನ್ನೂ ಸಂಧ್ಯಾವಂದನೆಯ ಅಂಗವಾಗಿ ಗಾಯತ್ರೀಮಂತ್ರ ಜಪದ ಮುಂಚೆ ಪಠಿಸುವ ಪದ್ಧತಿ ಇದೆ.

ತಂತ್ರಸಾರ ಸಂಗ್ರಹದಲ್ಲಿ ಉಲ್ಲೇಖಿಸಲಾದ ಶ್ಲೋಕ ಬ್ರಹ್ಮಗಾಯತ್ರೀ ಜಪದ ಧ್ಯಾನಶ್ಲೋಕವಾಗಿಯೂ, ಸದಾಚಾರಸ್ಮೃತಿಯಲ್ಲಿ ಉಲ್ಲೇಖಿಸಿದ ಶ್ಲೋಕ ವಿಶ್ವಾಮಿತ್ರಗಾಯತ್ರಿಯ . ಧ್ಯಾನಶ್ಲೋಕವಾಗಿಯೂ ಪರಿಗಣಿಸುವುದುಂಟು.

ಎರಡು ಬಗೆಯ ಗಾಯತ್ರಿಗಳಲ್ಲಿ ಋಷಿಗಳಷ್ಟೇ ಭಿನ್ನಭಿನ್ನರಾಗಿ ಉಲ್ಲೇಖಿಸಲ್ಪಡುವರು; ಹೊರತು ಗಾಯತ್ರೀ ಪ್ರತಿಪಾದ್ಯ ಭಗವದ್ರೂಪ ಒಂದೇ ಆಗಿರುವುದರಿಂದ ಬ್ರಹ್ಮಗಾಯತ್ರಿಯಿಂದ ಧ್ಯೇಯರೂಪವೇ ಬೇರೆ, ವಿಶ್ವಾಮಿತ್ರ ಗಾಯತ್ರಿಯಿಂದ ಧ್ಯೇಯರೂಪವೇ ಬೇರೆ ಎಂದು ಕಲ್ಪಿಸುವುದು ಸಮರ್ಥನೀಯವೆನಿಸದು.

ತಂತ್ರಸಾರಸಂಗ್ರಹದಲ್ಲಿ ಉಲ್ಲೇಖಿಸಿದ ಧ್ಯಾನಶ್ಲೋಕದಲ್ಲೂ, ಸದಾಚಾರ ಸ್ಮೃತಿಯಲ್ಲಿ ಉಲ್ಲೇಖಿಸಿದ ಧ್ಯಾನಶ್ಲೋಕದಲ್ಲೂ ಧ್ಯೇಯರೂಪದ ಬಣ್ಣ ಹಾಗೂ ಕೈಗಳ ಸಂಖ್ಯೆಗಳ ವಿಷಯದಲ್ಲಿ ಆಪಾತತಃ ವ್ಯತ್ಯಾಸ ಇರುವಂತೆ ಕಾಣಿಸುವುದು. ಒಂದೆಡೆ 'ಪ್ರೋದ್ಯದಾದಿತ್ಯವರ್ಣ' ಉದಯಿಸುವ ಸೂರ್ಯನಂತೆ ಬಣ್ಣವುಳ್ಳವನೆಂದಿದ್ದರೆ, ಮತ್ತೊಂದೆಡೆ 'ಹಿರಣ್ಮಯವಪುಃ' ಚಿನ್ನದ ಬಣ್ಣದವನೆಂದು ತಿಳಿಸಲಾಗಿದೆ. ಇದು ಪರಸ್ಪರ ವಿರುದ್ಧವಾದ ವರ್ಣನೆಯಂತೆ ಕಾಣಿಸಬಲ್ಲದು.

ಸೂರ್ಯನಲ್ಲಿರುವ ಭಗವಂತನು ಚಿನ್ನದ ಬಣ್ಣದವನೆಂಬುದನ್ನು ಛಾಂದೋಗ್ಯೋಪನಿಷತ್ತು (೧-೩-೬) ತಿಳಿಸಿದೆ:

**"........... ಅಥ ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುರ್ಹಿರಣ್ಯಕೇಶ ಆ ಪ್ರಣಖಾತ್ ಸರ್ವ ಏವ ಸುವರ್ಣಃ......"**

ಹೀಗೆ ಕಾಲುಗುರಿನಿಂದ ಪ್ರಾರಂಭಿಸಿ ದೇಹದ ಪ್ರತಿಯೊಂದು ಅಂಗವೂ ಚಿನ್ನ; ಚಿನ್ನದ ಬಣ್ಣದ್ದು.

ಆದರೆ ಉದಯಿಸುವ ಸೂರ್ಯನಂತೆ ವರ್ಣ ಎಂದು ಸೂರ್ಯನ ವರ್ಣದ ಸಾದೃಶ್ಯ ಶುಭ್ರವಾಗಿ ಬೆಳಗುವಂತಹದ್ದು ಎಂಬ ವಿಷಯದಲ್ಲೇ ಹೊರತು ನಿರ್ದಿಷ್ಟವಾದ ಬಣ್ಣದ ವಿಷಯದಲ್ಲಿ ಅಲ್ಲ. ಆದುದರಿಂದ ಚಿನ್ನದ ಬಣ್ಣದವನೂ ಉದಯಿಸುವ ಸೂರ್ಯನಂತೆ ಬೆಳಗಬಹುದಾದ ಪ್ರಯುಕ್ತ ಬಣ್ಣದ ವಿಷಯದಲ್ಲಿ ಬಂದಿರುವ ಆ ಎರಡು ಹೇಳಿಕೆಗಳಿಗೆ ಪರಸ್ಪರ ವಿರೋಧ ಇಲ್ಲ.

ಒಂದೆಡೆ ನಾಲ್ಕು ಕೈಗಳನ್ನು ಉಲ್ಲೇಖಿಸಿದ್ದರೆ, ಮತ್ತೊಂದೆಡೆ ಎರಡೇ ಕೈಗಳನ್ನು ಉಲ್ಲೇಖಿಸಿರುವುದರಿಂದ ಮೇಲ್ನೋಟಕ್ಕೆ ಅನ್ಯೋನ್ಯವಾಗಿ ವಿರೋಧ ಕಾಣಿಸಬಹುದು. ಆದರೆ ಎರಡು ಕೈಗಳನ್ನು ಉಲ್ಲೇಖಿಸಿದಲ್ಲಿ ಎರಡೇ ಕೈಗಳೆಂದು ಉಲ್ಲೇಖಿಸಿರದ ಪ್ರಯುಕ್ತ ನಾಲ್ಕು ಕೈಗಳಲ್ಲಿ ಎರಡನ್ನಷ್ಟೇ ಉಲ್ಲೇಖಿಸಲಾಗಿದೆ ಹೊರತು ಇನ್ನೆರಡು ಕೈಗಳು ಇಲ್ಲ ಎಂಬ ಅಭಿಪ್ರಾಯವಲ್ಲ. ಹಾಗೆಯೇ ಒಂದೆಡೆ ಕೇಯೂರ, ಕುಂಡಲ ಮುಂತಾದ ಆಭರಣಗಳನ್ನು ಉಲ್ಲೇಖಿಸಲಾಗಿದೆ, ಮತ್ತೊಂದೆಡೆ ಅವುಗಳನ್ನು ಉಲ್ಲೇಖಿಸಿಲ್ಲ ಹೊರತು ಅವು ಅಲ್ಲಿ ಇಲ್ಲ ಎಂದು ಹೇಳಲಾಗದ ಪ್ರಯುಕ್ತ ಆ ಶ್ಲೋಕದ ಪ್ರಕಾರವೂ ಆ ಆಭರಣಗಳು ಇದ್ದೇ ಇವೆ ಎಂದು ಇಟ್ಟುಕೊಳ್ಳಬೇಕು.

ಹೀಗೆ ಎರಡೂ ಧ್ಯಾನಶ್ಲೋಕಗಳ ಅಭಿಪ್ರಾಯವೂ ಒಂದೇ. ಒಂದೊಂದು ಶ್ಲೋಕದಲ್ಲಿ ಒಂದೊಂದು ಅಂಶದ ಉಲ್ಲೇಖ ನಡೆದಿಲ್ಲ ಎಂಬುದಷ್ಟೇ.

**ಬಣ್ಣದ ಸಂಕೇತ:** ಭಗವಂತನ ನಾಲ್ಕು ಬಣ್ಣಗಳಲ್ಲಿ ಚಿನ್ನದ ಬಣ್ಣವೂ ಒಂದು. ಅವನ ಎಲ್ಲ ಬಣ್ಣಗಳೂ ಅಪ್ರಾಕೃತಗಳೆನಿಸಿದ್ದು ಸುಂದರವಾದವು. ಅವನು ತನ್ನ ಅವತಾರದ, ರೂಪದ ಉದ್ದೇಶವನ್ನು ಸಾತ್ವಿಕರಿಗೆ ಸೂಚಿಸಿಕೊಡುವುದಕ್ಕಾಗಿ ಆಯಾ ಉದ್ದೇಶಕ್ಕನುಗುಣವಾದ ಬಣ್ಣವನ್ನು ಧರಿಸಿಕೊಳ್ಳುವನು. ಚಿನ್ನದ ಬಣ್ಣ ಹಳದಿ. ಹಳದಿ ರಜೋಗುಣಕ್ಕೆ ಸಂಕೇತ. ರಜೋಗುಣ ಸೃಷ್ಟಿಕಾರ್ಯಕ್ಕೆ ಪೋಷಕವೆನಿಸಿದ್ದು, ಅಂತಹ ರಜೋಗುಣವನ್ನು ಸಂಕೇತಿಸುವ ಹಳದಿಬಣ್ಣ ಸೂರ್ಯಮಂಡಲದಲ್ಲಿ ಸವಿತೃನಾಮಕನಾಗಿದ್ದು ಸೂರ್ಯನ ಮೂಲಕ ಸೃಷ್ಟಿಯನ್ನು ನಡೆಸುವ ಸವಿತೃನಾರಾಯಣನ ರೂಪದ ಕಾರ್ಯಗಳಲ್ಲಿ ಒಂದಾದ ಸೃಷ್ಟಿಯನ್ನು ಸೂಚಿಸಿಕೊಡಬಲ್ಲದು. ಹಾಗೆಯೇ ಚಿನ್ನದ ಬಣ್ಣ ವೈಭವಕ್ಕೆ, ಶುಭ್ರತೆಗೆ ಸಂಕೇತ. ಆದುದರಿಂದಲೇ ಸಾಕ್ಷಾತ್ಕಾರದಲ್ಲಿ ಜ್ಞಾನಿಯು ಕಾಣುವ ಭಗವದ್ರೂಪ ಚಿನ್ನದ ಬಣ್ಣದ್ದು "**ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ**" ಎಂದೇ ಉಲ್ಲೇಖಿಸಲ್ಪಟ್ಟಿದೆ. ಸೂರ್ಯನಾರಾಯಣನಲ್ಲೂ ವೈಭವವನ್ನೂ, ಶುಭ್ರತೆಯನ್ನೂ ಸಾಂಕೇತಿಕವಾಗಿ ತಿಳಿಸಿಕೊಡುವುದೂ ಚಿನ್ನದ ಬಣ್ಣದ ಉದ್ದೇಶ.

**ಆಯುಧಧಾರಣೆಯ ಸಂಕೇತ:** ಸೂರ್ಯನಾರಾಯಣ ಧರಿಸಿರುವ ಆಯುಧಗಳು ಶಂಖ ಮತ್ತು ಚಕ್ರ. ಸರ್ವಸಮರ್ಥನಾದ ಭಗವಂತನು ತನ್ನ ರಕ್ಷಣೆಗಾಗಿ ಆಗಲಿ, ತನ್ನ ಭಕ್ತರ ರಕ್ಷಣೆಗಾಗಿ ಆಗಲಿ ಆಯುಧವನ್ನು ಧರಿಸುವ ಆವಶ್ಯಕತೆ ಇಲ್ಲ. ಆದರೂ ಆಯುಧಗಳನ್ನು ಧರಿಸುವುದು ಆಯಾ ಆಯುಧದ ಮೂಲಕ ಸಾಂಕೇತಿಕ ಸಂದೇಶಗಳನ್ನು ಭಕ್ತರಿಗೆ ನೀಡುವ ಉದ್ದೇಶದಿಂದಲೇ. ಶಂಖವು ವಿದ್ಯೆಗೆ ಸಂಕೇತ. ಅಂತಹ ಶಂಖದ ಧಾರಣೆಯ ಮೂಲಕ ತಾನು ವಿದ್ಯೆಯನ್ನು, ಬುದ್ಧಿಯನ್ನು ಅನುಗ್ರಹಿಸುವವನು ಎಂದು ಸೂಚಿಸಿದರೆ, ದುಷ್ಟಸಂಹಾರದಲ್ಲಿ ತೊಡಗಿರುವ ಸುದರ್ಶನಚಕ್ರವು ದುಷ್ಟರ, ದೋಷಗಳ ದಮನವನ್ನು ಸಂಕೇತಿಸುತ್ತಿದ್ದು, ಅಂತಹ ಸುದರ್ಶನಚಕ್ರದ ಧಾರಣೆಯಿಂದ ಸೂರ್ಯನಾರಾಯಣನು ತಾನು ಭಕ್ತರ ಪಾಲಿಗೆ ದೋಷಗಳನ್ನೂ, ಅವುಗಳನ್ನು ನಿಯಂತ್ರಿಸುವ ದುಷ್ಟರನ್ನೂ ಸದೆಬಡಿಯಬಲ್ಲೆ ಎಂದು ಸೂಚಿಸುವನು.

**ಆಭರಣಧಾರಣೆಯ ಉದ್ದೇಶ:** ಸ್ವಾಭಾವಿಕವಾಗಿಯೇ ಅತ್ಯಂತ ಸುಂದರನಾದ ಭಗವಂತನಿಗೆ ಆಭರಣಗಳಿಂದ ಏನೂ ಆಗಬೇಕಾದ್ದಿಲ್ಲ. ಆದರೂ ಆಭರಣಗಳನ್ನು ಧರಿಸಿಕೊಂಡಿರುವುದೂ ಆಯಾ ಆಭರಣದ ಮೂಲಕ ಸಾಂಕೇತಿಕ ಸಂದೇಶಗಳನ್ನು ನೀಡುವುದಕ್ಕಾಗಿ. ತಲೆಯ ಮೇಲಿನ ಕಿರೀಟ ಬ್ರಹ್ಮಾಂಡನಾಯಕತ್ವವನ್ನು ಸಾರುತ್ತಿದ್ದರೆ, ಎದೆಯ ಮೇಲೆ ವಿರಾಜಿಸುತ್ತಿರುವ ಹಾರ ಭಕ್ತರ ಭಕ್ತಿಪೂರ್ವಕ ಕೊಡುಗೆಗಳನ್ನು ಹೃತ್ಪೂರ್ವಕವಾಗಿ ಸ್ವೀಕರಿಸುವ ಅವನ ಹೃದಯವಂತಿಕೆಯನ್ನು ಎತ್ತಿತೋರಿಸಬಲ್ಲದು. ಕಿವಿಗಳಲ್ಲಿ ಮೆರೆಯುತ್ತಿರುವ ಮಕರಕುಂಡಲ ಭಕ್ತರ ಮೂಲಕ ಹರಿದುಬರುವ ತನ್ನ ಸ್ತುತಿಯನ್ನು ಕೇಳಲು ಸಿದ್ಧವಾಗಿರುವ ಕಿವಿಗಳ ಆ ದೊಡ್ಡತನವನ್ನು ತೋರಿಸಿಕೊಡುತ್ತಿದೆ. ಲಕ್ಷ್ಮೀದೇವಿಯ ರೂಪಗಳಾಗಿರುವ ತೋಳ್ಬಳೆಗಳಿಂದ ಬದ್ಧಗಳಾಗಿರುವ ಆ ತೋಳುಗಳು ಸರ್ವತಂತ್ರಸ್ವತಂತ್ರನಾದರೂ ಭಗವಂತನು ಭಕ್ತರ ಭಕ್ತಿಯ ಬಂಧನಕ್ಕೆ ಒಲಿದು, ಒಳಗಾಗುವವನು ಎಂದು ಸೂಚಿಸುತ್ತಿವೆ.

ಹೀಗೆ ಸಾಧಕರು ತಮ್ಮ ತಮ್ಮ ಅನುಸಂಧಾನದ ಹಿನ್ನೆಲೆಯಲ್ಲಿ ಭಗವಂತನ ಬೇರೆಬೇರೆ ಆಭರಣಧಾರಣೆಯ ಉದ್ದೇಶವನ್ನು ಅವನ ಸರ್ವೋತ್ತಮ ವ್ಯಕ್ತಿತ್ವಕ್ಕೆ ಒಗ್ಗುವಂತೆ ಭಾವಿಸಿಕೊಂಡು ಧ್ಯಾನಮಾಡಬೇಕು.

*

**ಋಗ್ವೇದದ ಪ್ರತಿನಿಧಿ**

ಇಪ್ಪತ್ನಾಲ್ಕು ಶಾಖೆಗಳನ್ನೊಳಗೊಂಡ ಋಗ್ವೇದವನ್ನು ಪ್ರತಿನಿಧಿಸುವಂತಹದ್ದು ಇಪ್ಪತ್ನಾಲ್ಕು ಅಕ್ಷರಗಳನ್ನೊಳಗೊಂಡ ಗಾಯತ್ರೀಮಂತ್ರ.

–ಬನ್ನಂಜೆ ಗೋವಿಂದಾಚಾರ್ಯ

# ಸೌರಶಕ್ತಿ – ಬೌದ್ಧಿಕಶಕ್ತಿ – ಗಾಯತ್ರಿ

ಶ್ರೀ ವಿಬುಧೇಶತೀರ್ಥರು

ಭೂಮಿಯ ಚೇತನವರ್ಗವೆಲ್ಲ ಸೌರಶಕ್ತಿಯಿಂದ ಬದುಕಿದೆ. ಸೌರಶಕ್ತಿ ಇಲ್ಲವಾದರೆ ಬರೇ ಮನುಷ್ಯನಷ್ಟೇ ಅಲ್ಲ, ಜೀವವರ್ಗವೇ ಇಲ್ಲವಾದೀತು! ಎಂದು ವಿಜ್ಞಾನವಾದ. ಇದು ಶಾಸ್ತ್ರಸಮ್ಮತವೂ ಆಗಿದೆ. 'ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸುವ ಉದ್ದೇಶದಿಂದ ಮೊದಲು ಪ್ರಾಣನನ್ನು ಸೃಷ್ಟಿಸಿ ಅವನನ್ನು ಸೂರ್ಯನಲ್ಲಿಟ್ಟ. ಆ ಮೂಲಕ ಜಗತ್ತನ್ನು ಸೃಷ್ಟಿಸಿದ' ಎಂದಿದೆ ಉಪನಿಷತ್ತು.

ಬೆಳವಣಿಗೆಗೆ ಸೌರಶಕ್ತಿ ಅತ್ಯಾವಶ್ಯಕ ಎಂಬುದು ರೇಶ್ಮೆಹುಳಗಳನ್ನು ಸಾಕುವವರಿಗೆ ಅನುಭವಸಿದ್ಧ ವಿಚಾರ. ರೇಶ್ಮೆಹುಳಗಳಲ್ಲಿ ಕೆಲವು ಉಳಿದವುಗಳಿಗಿಂತ ಅಧಿಕವಾಗಿ ಬೆಳೆದವೆಂದರೆ, ಅವುಗಳ ಬೆಳವಣಿಗೆಯನ್ನು ಸ್ಥಗಿತಗೊಳಿಸಲು ಅವುಗಳನ್ನು ಫ್ರಿಡ್ಜಿನಲ್ಲಿಟ್ಟು, ಅವುಗಳಿಗೆ ಸೌರಶಕ್ತಿಯ ಸಂಪರ್ಕವಾಗದಂತೆ ಮಾಡಲಾಗುವುದು.

ಸೌರಶಕ್ತಿ ಬೆಳವಣಿಗೆಗಷ್ಟೇ ಅಲ್ಲದೆ, ಬೌದ್ಧಿಕಶಕ್ತಿಯ ಜಾಗೃತಿಗೂ ಕಾರಣವಾದುದು. ಸೌರಶಕ್ತಿ ಮಿದುಳಿನ ಎಷ್ಟೋ ಸುಪ್ತಕೋಶಗಳನ್ನೂ ಬಳ್ಳಿಗಳನ್ನೂ ಎಬ್ಬಿಸಿ ಬೌದ್ಧಿಕಶಕ್ತಿಯನ್ನು ಅಭಿವೃದ್ಧಿಪಡಿಸುವುದು. ಆದುದರಿಂದಲೇ ಈ ರಹಸ್ಯವನ್ನು ಅರಿತಿರುವ ಬ್ರಾಹ್ಮಣನು ಸಂಧ್ಯಾಕಾಲದಲ್ಲಿ ತನ್ನ ಮಿದುಳಿಗೆ ಸೌರಶಕ್ತಿಯ ಸಂಪರ್ಕ ದೊರೆಯುವಂತೆ ಮಾಡಿಕೊಳ್ಳುವನು. ಸಂಧ್ಯಾನುಷ್ಠಾನದ, ಗಾಯತ್ರೀಜಪಾನುಷ್ಠಾನದ ಉದ್ದೇಶವೇ ಇದು. ವಿದ್ಯುಚ್ಛಕ್ತಿಯನ್ನು ವಯರಿನ ಮೂಲಕ ಬಲ್ಬಿನೆಡೆಗೆ ಸಾಗಿಸಿ ಬಲ್ಬಿನಲ್ಲಿ ಬೆಳಕನ್ನು ಪಡೆಯುವಂತೆ ಸೌರಶಕ್ತಿಯನ್ನು ಗಾಯತ್ರೀಮಂತ್ರದ ಧ್ಯಾನದ ಮೂಲಕ ಮಿದುಳಿನೆಡೆಗೆ ಸಾಗಿಸಿ ಮಿದುಳಿನ ಸುಪ್ತಶಕ್ತಿಯನ್ನು ಪ್ರಬೋಧಿಸಿ ಅಧಿಕ ಬೌದ್ಧಿಕಶಕ್ತಿಯನ್ನು ಗಳಿಸಿಕೊಳ್ಳಲಾಗುವುದು. ಏಕಾಗ್ರತೆಯ ಧ್ಯಾನವು ಸೌರಶಕ್ತಿ ಹಾಗೂ ಮಿದುಳು ಇವುಗಳೊಳಗೆ ಸಂಬಂಧವನ್ನು ಕಲ್ಪಿಸುವ ತಂತಿ.

ಜಗತ್ಪ್ರಾಣನಾದ ಸೂರ್ಯನಿಗೂ ಬೆಳಗುವ ಸಾಮರ್ಥ್ಯವನ್ನು ನೀಡುವವನು **"ಯಃ ಆದಿತ್ಯಮಂತರೋ ಯಮಯತಿ.... ಏಷ ತ ಆತ್ಮಾ ಅಂತರ್ಯಾಮ್ಯಮೃತಃ"** ಎಂದು ಉಪನಿಷತ್ತು ತಿಳಿಸುತ್ತಿರುವಂತೆ ಸರ್ವಾಂತರ್ಯಾಮಿ ಭಗವಂತ, ಸೂರ್ಯನೊಳಗಿದ್ದು ಸೂರ್ಯಕಿರಣಗಳ ಮೂಲಕ ಬೆಳವಣಿಗೆಗೆ ಕಾರಣನಾಗುತ್ತಾನೆ. ಹಾಗೆಯೇ ನಮ್ಮ ನರಮಂಡಲಗಳನ್ನು ನಿಯಂತ್ರಿಸುತ್ತಿರುತ್ತಾನೆ. ಆ ಮೂಲಕ ನಮ್ಮ ಪೋಷಣೆಯ ಜವಾಬ್ದಾರಿಯನ್ನು ಹೊತ್ತಿದ್ದಾನೆ. ಆದ್ದರಿಂದಲೇ ಅವನೇ ಗಾಯತ್ರೀಮಂತ್ರದಿಂದ ಧ್ಯೇಯನಾದವನು. ಗಾಯತ್ರಿಯ 'ಭರ್ಗಃ'

ಶಬ್ದವು ಅವನು ನಮ್ಮ ಪೋಷಕ ಹಾಗೂ ಪ್ರೇರಕ ಎಂದು ಸಾರುತ್ತಿದೆ. ಆ ಮೂಲಕ ಅವನನ್ನು ಧ್ಯಾನಿಸಿದರೆ ನಾವು ಒಳ್ಳೆಯ ಪ್ರೇರಣೆಯನ್ನು ಪಡೆಯಬಹುದು. ಮಾತ್ರವಲ್ಲ, ಅವನು ಸರ್ವಾಂತರ್ಯಾಮಿಯಾದುದರಿಂದ ಅವನ ಮೂಲಕ ಎಲ್ಲರ ಮೇಲೂ ಪ್ರಭುತ್ವವನ್ನು ಸಂಪಾದಿಸಬಹುದು.

ಪ್ರಾಚೀನ ಬ್ರಾಹ್ಮಣರು ಅನುವಂಶಿಕತೆಯಿಂದ ತಮ್ಮ ರಕ್ತಕಣಗಳಲ್ಲಿ ಹರಿದುಬರುವ ಬೌದ್ಧಿಕಶಕ್ತಿಯನ್ನು ಉಳಿಸಿಕೊಂಡಿದ್ದಲ್ಲದೆ, ಗಾಯತ್ರೀಮಂತ್ರದ ಧ್ಯಾನದ ಮೂಲಕ ಸೌರಶಕ್ತಿಯ ಸಂಪರ್ಕದಿಂದ ಬೌದ್ಧಿಕಶಕ್ತಿಯನ್ನು ಮತ್ತಷ್ಟು ಬೆಳೆಸಿಕೊಂಡಿದ್ದರು. ತಮ್ಮ ಅಧಿಕವಾದ ಬೌದ್ಧಿಕಶಕ್ತಿಗಾಗಿಯೇ ಎಲ್ಲರ ಮನ್ನಣೆಗೆ ಪಾತ್ರರಾಗಿದ್ದರು. ಇತರರು ತಮ್ಮ ಸುದ್ದಿಬರಲೂ ಭಯಪಡುವಷ್ಟು ಅಂತಃಸತ್ವವನ್ನು ಪಡೆದಿದ್ದರು.

ಆದರೆ ಈಗಿನ ಬ್ರಾಹ್ಮಣರು ನಿಧಿಯಂತೆ ತಮ್ಮಲ್ಲಿರುವ ಬೌದ್ಧಿಕಶಕ್ತಿಯನ್ನು ಗುರುತಿಸಿಕೊಳ್ಳಲಾರದೆ, ಉಪಯೋಗಿಸಿಕೊಳ್ಳಲಾರದೆ ವ್ಯರ್ಥಗೊಳಿಸಿರುವರು. ಹೀಗೆ ಪ್ರಕಾಶದೆಡೆಗೆ ಬೆನ್ನುಹಾಕಿ ಜಡವಾದ ಹಣದೆಡೆಗೆ ಧಾವಿಸುತ್ತಿದ್ದಾರೆ. ಜಡದೆಡೆಗೆ ಸಾಗುವ ಅವರಲ್ಲಿ ಜಾಡ್ಯ ಬಂದೀತೇ ವಿನಾ ಬೆಳಕು ಕಾಣಿಸದು.

ಹಿಂದಿನಂತೆ ಮೆರೆಯಬೇಕೆಂದರೆ ಮಹಾಬ್ರಾಹ್ಮಣರಾಗಬೇಕು. ಬ್ರಾಹ್ಮಣರಲ್ಲಿ ಮಹತ್ತ್ವವು ಬೌದ್ಧಿಕಶಕ್ತಿಯಿಂದಲೇ ಹೊರತು ಸಂಪತ್ತಿನಿಂದಾಗಲಿ, ಅಧಿಕಾರದಿಂದಾಗಲಿ ಅಲ್ಲ ಎಂಬುದನ್ನು ಮರೆಯಬಾರದು.

ಅಂತಹ ಬೌದ್ಧಿಕಶಕ್ತಿಯನ್ನು ಹೆಚ್ಚಿಸಿಕೊಳ್ಳಲು ಗಾಯತ್ರೀಮಂತ್ರವನ್ನು ಜಪಿಸಬೇಕು. ಸೂರ್ಯನಾರಾಯಣನನ್ನು ಧ್ಯಾನಿಸಬೇಕು.

*

## ಗಾಯತ್ರೀಪ್ರತಿಪಾದ್ಯ ಸೂರ್ಯನಾಗಲಾರ

ಮಂದೇಹನಾಮಕರಾದ ರಾಕ್ಷಸರು ನಿತ್ಯ ಸಂಧ್ಯಾಕಾಲದಲ್ಲಿ ಸೂರ್ಯನ ವಿರುದ್ಧ ಹೋರಾಟ ನಡೆಸುವರು. ಅವರು ವಾಲಖಿಲ್ಯಾದಿ ಋಷಿಗಳು ನೀಡಿದ ಸೂರ್ಯಾರ್ಘ್ಯದ ಪ್ರಭಾವದಿಂದ ಹತರಾಗುವರೆಂಬುದು ಪುರಾಣಪ್ರಸಿದ್ಧ ವಿಚಾರ.

ಹೀಗೆ ಗಾಯತ್ರೀಮಂತ್ರವನ್ನು ಜಪಿಸಿ ನೀಡುವ ಅರ್ಘ್ಯದಿಂದ ರಕ್ಷಿತನಾಗುವ ಸೂರ್ಯನು ಅಂತಹ ಮಂತ್ರದಿಂದ ಪ್ರತಿಪಾದ್ಯನಾಗಿರುವನೆನ್ನಲು ಸಾಧ್ಯವೇ?

ತನ್ನ ಪ್ರತಿಪಾದಕ ಮಂತ್ರದಿಂದ ತಾನು ರಕ್ಷಿತನೆನ್ನುವುದು ಉಚಿತವಾದೀತೇ?

— *ಶ್ರೀ ವಿದ್ಯೇಶತೀರ್ಥರು*

# 'ಧಿಯೋ ಯೋ ನಃ ಪ್ರಚೋದಯಾತ್' ಲಕ್ಷ್ಮಿಯ ಅನುಸಂಧಾನ

——————— ಸಗ್ರಿ ರಾಘವೇಂದ್ರ ಉಪಾಧ್ಯಾಯ

"**ಅಭಿಮಾನಿನೀ ತು ಗಾಯತ್ರ್ಯಾಃ ಮುಖ್ಯಾ ಶ್ರೀಃ ಪರಿಕೀರ್ತಿತಾ**" ಎಂಬುದಾಗಿ (ಬೃಹದ್ಭಾಷ್ಯ ೭-೧೯-೫) ಗಾಯತ್ರೀಮಂತ್ರಕ್ಕೆ ಮುಖ್ಯಾಭಿಮಾನಿನಿ ಲಕ್ಷ್ಮೀದೇವಿ ಎಂದು ತಿಳಿಸಲಾಗಿದೆ. ಅವಳು ತನ್ನ ನಿಯಂತ್ರಣದಲ್ಲಿರುವ ಆ ಮಂತ್ರವನ್ನು ತಾನು ಅರ್ಥಾನುಸಂಧಾನಪೂರ್ವಕವಾಗಿ ಜಪಿಸುತ್ತಿರುತ್ತಾಳಲ್ಲದೆ, ಉಳಿದ ಯೋಗ್ಯಾಧಿಕಾರಿಗಳು ಅದನ್ನು ಜಪಿಸುವಾಗ ಅದು ಉತ್ತಮ ಅರ್ಥಗಳಲ್ಲಿ ತೆರೆದುಕೊಳ್ಳುವಂತೆಯೂ, ಅಯೋಗ್ಯರು ಜಪಿಸಲು ತೊಡಗಿದರೆ ಅವರ ಪಾಲಿಗೆ ಅದು ಅಪಾರ್ಥವನ್ನೋ, ಅಲ್ಪಾರ್ಥವನ್ನೋ ಕೊಡುವಂತೆಯೂ ನಿಯಮಿಸುತ್ತಿರುವಳು.

ಲಕ್ಷ್ಮೀದೇವಿ ಗಾಯತ್ರಿಮಂತ್ರವನ್ನು ಜಪಿಸುವಾಗ, ಧ್ಯಾನಿಸುವಾಗ ಅದರ '**ಧಿಯೋ ಯೋ ನಃ ಪ್ರಚೋದಯಾತ್**' ಎಂಬ ಭಾಗವನ್ನು ತನ್ನ ವಿಷಯದಲ್ಲಿ ಹೇಗೆ ಅನ್ವಯಿಸಿಕೊಳ್ಳುತ್ತಾಳೆ? ಎಂಬುದು ಕುತೂಹಲದ ವಿಷಯ.

ಬ್ರಹ್ಮಾದಿದೇವತೆಗಳಿಂದ ಪ್ರಾರಂಭಿಸಿ ಪ್ರತಿಯೊಬ್ಬರ ವಿಷಯದಲ್ಲೂ ಭಗವಂತನು ನಡೆಸುವ 'ಧೀ ಪ್ರಚೋದನೆ' ಎಂದರೆ ನೂತನ ಬುದ್ಧಿಯ ಉತ್ಪಾದನೆ. ಆದರೆ ಲಕ್ಷ್ಮೀದೇವಿಯ 'ಧೀ ಪ್ರಚೋದನೆ' ಎಂದರೆ ಹೊಸ ಬುದ್ಧಿಯ ಉತ್ಪಾದನೆ ಎಂದು ಹೇಳಲು ಬರುವುದಿಲ್ಲ. ಯಾಕೆಂದರೆ ಅವಳ ಬುದ್ಧಿಯೂ ಭಗವಂತನ ಬುದ್ಧಿಯಂತೆಯೇ ನಿತ್ಯ; ನಿರ್ವಿಕಾರ. ಅನುವ್ಯಾಖ್ಯಾನದಲ್ಲಿ (೪-೨-೧೭)–

"**ನಿತ್ಯಮೇಕಪ್ರಕಾರಾ ಚ ನಾರಾಯಣಮತಿಃ ಪರಾ । ನಿತ್ಯಮೇವಾವಿಕಾರಿಣೀ.....**"

ಎಂಬುದಾಗಿ ಭಗವಂತನ ಜ್ಞಾನ ವಿಕಾರಕ್ಕೊಳಗಾಗದೆ ನಿತ್ಯವಾದುದು; ಒಂದೇ ರೀತಿಯಾದುದು –ಎಂದು ತಿಳಿಸಿ,

"**ಪ್ರಾಯಸ್ತಲ್ಲಕ್ಷಣಾ ಶ್ರಿಯಃ.....**"

ಎಂಬುದಾಗಿ ಲಕ್ಷ್ಮೀದೇವಿಯ ಜ್ಞಾನವೂ ಭಗವಂತನ ಜ್ಞಾನದ ನಿತ್ಯತ್ವ, ಅವಿಕಾರಿತ್ವ ಮುಂತಾದ ಲಕ್ಷಣಗಳನ್ನೊಳಗೊಂಡದ್ದು ಎಂದು ತಿಳಿಸಲಾಗಿದೆ.

"**ತಥೈವ ಸ್ಪಷ್ಟತಾಭಾವಾತ್.....**"

ಎಂದು ವಿಷಯ–ಉಪಾಧಿಕವಾದ ಸ್ಪಷ್ಟತ್ವ ಧರ್ಮದ ವಿಷಯದಲ್ಲಿ ಮಾತ್ರ ಭಗವದ್‌ಜ್ಞಾನ ಅವಳ ಜ್ಞಾನಕ್ಕಿಂತ ವಿಶಿಷ್ಟವೆನಿಸುವುದೆಂದು ತಿಳಿಸಲಾಗಿದೆ.

ಆದುದರಿಂದ ಲಕ್ಷ್ಮೀದೇವಿಯ 'ಧೀ ಪ್ರಚೋದನೆ' ಎಂದರೆ ನೂತನ ಬುದ್ಧಿಯ ನಿರ್ಮಾಣ ಎಂದು ಹೇಳಲಾಗದು.

**ಶಕ್ತಿ–ವ್ಯಕ್ತಿ–ವಿಶೇಷ:**

ಆದರೆ ಲಕ್ಷ್ಮೀದೇವಿಯ ಬುದ್ಧಿಯು ನಿರ್ವಿಕಾರವಾಗಿರುವುದಾದರೂ ಆಗಾಗ್ಗೆ ಭಗವಂತನ ಬೇರೆ ಬೇರೆ ಗುಣಮಹಿಮೆಗಳನ್ನು ವಿಷಯೀಕರಿಸುವಿಕೆ ಅಲ್ಲಿ ವ್ಯಕ್ತವಾಗುತ್ತಿರುತ್ತದೆ. ಶಕ್ತಿರೂಪದಿಂದ ಆಯಾ ಧರ್ಮಗಳು ಅವಳ ಬುದ್ಧಿಯಲ್ಲಿ ಶಾಶ್ವತವಾಗಿರುವುದರಿಂದ, ಅವು ಹೊಸತಾಗಿ ಹುಟ್ಟದ ಪ್ರಯುಕ್ತ ಆ ಧರ್ಮಗಳ ಬರೇ ಅಭಿವ್ಯಕ್ತಿಯಿಂದ ಬುದ್ಧಿಯು ವಿಕಾರಕ್ಕೊಳಗಾದಂತಾಗುವುದಿಲ್ಲ. ಬುದ್ಧಿಯ ವಿಷಯೀಕರಣಧರ್ಮದಲ್ಲಿಯ ಶಕ್ತಿ ಮತ್ತು ವ್ಯಕ್ತಿ ಎಂಬ ಆವಸ್ಥೆಗಳು ಅತ್ಯಂತ ಭಿನ್ನಗಳಾಗಿರುವವಾದರೂ ಭೇದಪ್ರತಿನಿಧಿಯಾದ ವಿಶೇಷದಿಂದಾಗಿ ಅವುಗಳಲ್ಲಿ ಬೇರೆ ಬೇರೆ ವ್ಯವಹಾರ ನಿರ್ವಾಹಕತ್ವವು ಕೂಡುವುದು.

ಪರಮಾತ್ಮನ ಬುದ್ಧಿಗೆ ಸಂಬಂಧಪಟ್ಟಂತೆ "**ಅತ್ರ ಚ ವಿಶೇಷ ಏವ ನಿರ್ವಾಹಕಃ**" ಎಂಬ ಸುಧಾದ ಮಾತಿಗೆ ವಿವರಣೆಯಾಗಿ ಯಾದುಪತ್ಯದಲ್ಲಿ "**ಚಶಬ್ದೇನ ಶ್ರೀಮುಕ್ತಮತ್ಯೋರ್ಗ್ರಹಣಮ್**" ಎಂದಿರುವುದರಿಂದ ಪರಮಾತ್ಮನ ಬುದ್ಧಿಗೆ ಸಂಬಂಧಿಸಿದಂತೆ ಹೇಳಿರುವ ಈ ವಿಚಾರ ಲಕ್ಷ್ಮೀದೇವಿಯ ಬುದ್ಧಿಗೂ ಅನ್ವಯಿಸುತ್ತದೆ.

ಆದುದರಿಂದ ಲಕ್ಷ್ಮೀದೇವಿಯ ಬುದ್ಧಿಯು ಶಕ್ತ್ಯಾತ್ಮನಾ ಭಗವಂತನ ಗುಣ ಮಹಿಮೆಗಳನ್ನು ಯಾವಾಗಲೂ ವಿಷಯೀಕರಿಸಿದ್ದು, ಹೊಸತಾಗಿ ವಿಷಯೀಕರಿಸದ ಪ್ರಯುಕ್ತ ನಿರ್ವಿಕಾರವಾಗಿಯೇ ಇರುವಂತಹದ್ದು. ಆದರೆ ಶಕ್ತ್ಯಾತ್ಮನಾ ವಿಷಯೀ ಕರಿಸಲ್ಪಟ್ಟದ್ದೂ ವ್ಯಕ್ತ್ಯಾತ್ಮನಾ ವಿಷಯೀಕರಿಸಲ್ಪಡುವುದು. ಇದು ಭಗವದನು ಗ್ರಹದಿಂದ ಸಂಭವಿಸುವುದು.

ಈ ಅಭಿಪ್ರಾಯದಲ್ಲಿಯೇ ಶ್ರೀಮದಾಚಾರ್ಯರು ತಮ್ಮ ಈಶಾವಾಸ್ಯೋಪ ನಿಷದ್ಭಾಷ್ಯದಲ್ಲಿ ಮಂಗಳಾಚರಣೆಯಲ್ಲಿ ಬ್ರಹ್ಮಾದಿಗಳಿಗೆ ಹೇಗೋ ಹಾಗೆಯೇ ಲಕ್ಷ್ಮೀದೇವಿಗೂ ಜ್ಞಾನಸ್ಫೂರ್ತಿಯನ್ನು ನೀಡುವ ಭಗವಂತನು ಅವಳ ಪಾಲಿಗೂ ಗುರು ಎಂದು ಸ್ತುತಿಸಿರುವರು–

**ಯಸ್ಮಾದ್ ಬ್ರಹ್ಮೇಂದ್ರರುದ್ರಾದಿದೇವತಾನಾಂ ಶ್ರಿಯೋऽಪಿ ಚ ।**
**ಜ್ಞಾನಸ್ಫೂರ್ತಿಸ್ಸದಾ ತಸ್ಮೈ ಹರಯೇ ಗುರವೇ ನಮಃ ॥**

ತ್ರಿವಿಕ್ರಮಪಂಡಿತರು ತಮ್ಮ 'ವಿಷ್ಣುಸ್ತುತಿ'ಯಲ್ಲೂ(ೞ) ಲಕ್ಷ್ಮೀದೇವಿಯು ಯಾವಾಗಲೂ ಭಗವಂತನ ಹೊಸ ಹೊಸ ಮಹಿಮಾವಿಶೇಷಗಳನ್ನು ಗುರುತಿಸು ತ್ತಿರುತ್ತಾಳೆಂದು ಸ್ತುತಿಸಿರುವರು–

ಲಕ್ಷ್ಮೀರಕ್ಷೀಣದೀಕ್ಷಾ ಗಣಯಿತುಮನುಪಕ್ರಾಂತಸಂವಿದ್‌ಗುಣಾನಾಂ
ಆನಂತ್ಯಾನಿ ಸ್ವಭರ್ತುಃ ಪದಕಮಲಕನಿಷ್ಠಾಂಗುಲೀಸನ್ನಖಸ್ಯ ।
ಪಶ್ಯಂತೀ ಸಂತತಂ ಸಾ ನವನವಸುವಿಶೇಷೋಪಲಂಭೇನ ತತ್ತತ್‌-
ಕಾಲೇ ಕೌತೂಹಲಾಬ್ಧೌ ಸುಮಹತಿಗಹನೇ ಗಾಹಮಾನಾವತಾನ್ನಃ ॥

ಲಕ್ಷ್ಮೀದೇವಿಯ ಅರಿವಿಗೆ ಆದಿಯಿಲ್ಲ; ಅವಳ ಭಗವಚ್ಚಿಂತನೆಯ ದೀಕ್ಷೆಗೆ ಕೊನೆಯೂ ಇಲ್ಲ. ಆದರೂ ಅವಳು ತನ್ನ ಪತಿಯ ಗುಣಚಿಂತನೆಗೆ ತೊಡಗುತ್ತ, ಅವನ ತಾವರೆಯಂಥ ಚರಣಗಳ ಕಿರುಬೆರಳಿನ ಕುಡಿಯುಗುರಿನ ತುದಿಗಾಣದ ಗುಣಗಳ ಅನಂತತೆಯನ್ನೆ ನಿರುಕಿಸುತ್ತ ನಿರಂತರ ಪ್ರತಿಯೊಂದು ಬಾರಿಯೂ ಹೊಸ ಹೊಸ ಮಹಿಮಾವಿಶೇಷಗಳನ್ನು ಗುರುತಿಸುತ್ತ, ಅಂಥ ಆ ಕ್ಷಣಗಳಲ್ಲಿ ನೆಲೆಗಾಣದ ಹಿರಿಯಚ್ಚರಿಯ ಹೆಗ್ಗಡಲಲ್ಲಿ ಮುಳುಗಿಬಿಡುತ್ತಾಳೆ! ಅಂಥ ಲಕ್ಷ್ಮೀದೇವಿ ನಮ್ಮನ್ನು ಕಾಪಾಡಲಿ.

ಹರಿಕಥಾಮೃತಸಾರದಲ್ಲೂ ಶ್ರೀ ಜಗನ್ನಾಥದಾಸರು ಇದೇ ಅಭಿಪ್ರಾಯದಲ್ಲಿ ಲಕ್ಷ್ಮಿಯನ್ನು ಸ್ತುತಿಸಿರುವರು–

ಜಗದುದರನತಿವಿಮಲಗುಣರೂಪಗಳನಾಲೋಚನದಿ ಭಾರತ
ನಿಗಮತತಿಗಳತಿಕ್ರಮಿಸಿ ಕ್ರಿಯಾವಿಶೇಷಗಳ ।
ಬಗೆಬಗೆಯ ನೂತನವ ಕಾಣುತ ಮಿಗೆ ಹರುಷದಿಂ ಪೊಗಳಿ ಹಿಗ್ಗುವ
ತ್ರಿಗುಣಾಭಿಮಾನಿನಿ ಮಹಾಲಕುಮಿಗೆ...... ॥

ಹೀಗೆ ಲಕ್ಷ್ಮೀದೇವಿಯ ಬುದ್ಧಿಯಲ್ಲಿ ಭಗವಂತನ ಬಗೆಬಗೆಯ ನೂತನ ಗುಣಮಹಿಮೆಗಳು ಶಕ್ತ್ಯಾತ್ಮನಾ ಶಾಶ್ವತವಾಗಿ ಗೋಚರಗಳಾಗಿದ್ದರೂ ವ್ಯಕ್ತ್ಯಾತ್ಮನಾ ಕ್ಷಣಕ್ಷಣದಲ್ಲಿ ಗೋಚರಿಸುತ್ತಿದ್ದು, ಆ ರೀತಿ ಗೋಚರಿಸುವಂತೆ ಪ್ರೇರಿಸುವವನು ಭಗವಂತನೇ ಆಗಿರುವುದರಿಂದ ಲಕ್ಷ್ಮೀದೇವಿಯು "ಧಿಯೋ ಯೋ ನಃ ಪ್ರಚೋದಯಾತ್" ಎಂಬ ಭಾಗದಿಂದ ಭಗವಂತನು ತನ್ನ ಬಗ್ಗೆ ಮಾಡುವ ಈ ಬಗೆಯ ಅನುಗ್ರಹವನ್ನೇ ಅನುಸಂಧಾನ ಮಾಡುತ್ತಿರುವಳು

"ಬ್ರಹ್ಮಣಸ್ತು ಪ್ರಾಯೇಣೈವಂ ಶ್ರಿಯೋ ಯಥಾ" ಎಂದಿರುವಂತೆ ಮುಕ್ತ ಚತುರ್ಮುಖನ ಬುದ್ಧಿಯೂ ಲಕ್ಷ್ಮೀದೇವಿಯ ಬುದ್ಧಿಯಂತೆಯೇ ನಿರ್ವಿಕಾರವೇ ಆಗಿರುವುದಾದರೂ, ಆ ಬುದ್ಧಿಯಲ್ಲೂ ವ್ಯಕ್ತ್ಯಾತ್ಮನಾ ಹೊಸ ಹೊಸ ವಿಚಾರ ಗೋಚರಿಸಬಹುದಾದ ಪ್ರಯುಕ್ತ, ಮುಕ್ತಬ್ರಹ್ಮನ ಬುದ್ಧಿಯ ಪ್ರೇರಣೆಯೂ ಇದೇ ರೀತಿ ಎಂದಿಟ್ಟುಕೊಳ್ಳಬೇಕು.

ಇವೆಲ್ಲವನ್ನೂ ಗಮನದಲ್ಲಿಟ್ಟುಕೊಂಡೇ ಶ್ರೀಮದಾಚಾರ್ಯರು '**ಧಿಯೋ ಯೋ ನಃ ಪ್ರಚೋದಯಾತ್**' ಎಂಬ ಭಾಗಕ್ಕೆ 'ಪ್ರೇರಕೋಽಶೇಷಬುದ್ಧೀನಾಂ' ಎಂಬುದಾಗಿ ಅಶೇಷಶಬ್ದವನ್ನು ಬಳಸಿ ಪ್ರತಿಯೊಬ್ಬರ ಬುದ್ಧಿಯನ್ನೂ ಪ್ರೇರಿಸುವವನೆಂದು ವ್ಯಾಖ್ಯಾನಿಸಿರುವರು. *

# ಮೂರು ಮಜಲಿನ ಅರ್ಥಗಳು

ಸಗ್ರಿ ರಾಘವೇಂದ್ರ ಉಪಾಧ್ಯಾಯ

"ತ್ರಯೋಽರ್ಥಾಃ ಸರ್ವವೇದೇಷು" –ಎಂಬ 'ಸ್ಕಾಂದ'ದ ಮಾತನ್ನು ತಮ್ಮ ಋಗ್ಭಾಷ್ಯದಲ್ಲಿ (೧–೭೬) ಉಲ್ಲೇಖಿಸಿರುವ ಶ್ರೀಮಧ್ವಾಚಾರ್ಯರ ಪ್ರಕಾರ ವೇದದ ಪ್ರತಿಯೊಂದು ಮಾತಿಗೂ ಮೂರು ಮಜಲಿನ ಅರ್ಥಗಳಿವೆ, ಹೊರತು ಮೂರು ಅರ್ಥಗಳಿವೆ ಎಂಬುದಷ್ಟೇ ಅಲ್ಲ. ಮೂರು ಮಜಲಿನ ಅರ್ಥಗಳಲ್ಲಿ ಭಗವತ್ಪರವಾಗಿ ಅರ್ಥೈಸುವಾಗ ಹತ್ತಾರು ಅರ್ಥಗಳನ್ನು ಹೊರಡಿಸಬಹುದಾಗಿದೆ.

ಸಾಮಾನ್ಯವಾಗಿ ಪ್ರಸಿದ್ಧಿ ಇರುವಂತೆ ಮಂತ್ರಗಳನ್ನು ಮೇಲ್ನೋಟಕ್ಕೆ ಕಾಣುವಂತೆ ಆಯಾ ದೇವತೆಗಳ ಪರವಾಗಿ ಅರ್ಥೈಸಿಕೊಳ್ಳುವುದು ಒಂದನೇ ಮಜಲು.

ಆಯಾ ದೇವತೆಗಳನ್ನು ಅಮುಖ್ಯವಾಗಿ ನಿಯಂತ್ರಿಸುವ ಪ್ರಾಣದೇವತೆಯ ಪರವಾಗಿ ಅರ್ಥೈಸಿಕೊಳ್ಳುವುದು ಎರಡನೇ ಮಜಲು.

ಆಯಾ ದೇವತೆಗಳನ್ನೂ, ಅವರನ್ನು ಅಮುಖ್ಯವಾಗಿ ನಿಯಂತ್ರಿಸುವ ಪ್ರಾಣದೇವನನ್ನೂ ನಿಯಮಿಸುವ ಭಗವಂತನ ಪರವಾಗಿ ಅರ್ಥೈಸಿಕೊಳ್ಳುವುದು ಮೂರನೇ ಮಜಲು.

ಈ ಮೂರು ಮಜಲಿನ ಅರ್ಥಗಳಲ್ಲಿ ಮೂರನೇ ಮಜಲಿನ ಅಂದರೆ ಭಗವತ್ಪರವಾದ ಅರ್ಥ ಮುಖ್ಯವಾದುದು ಯಾಕೆಂದರೆ ಆ ಅರ್ಥ ಭಗವಂತನಲ್ಲಿ ಅತ್ಯಧಿಕಪ್ರಮಾಣದಲ್ಲಿ ಸ್ವತಂತ್ರವಾಗಿ ಅನ್ವಯವಾಗುವುದು. ವಾಯುಪರವಾದ ಅರ್ಥ ಅಷ್ಟೊಂದು ಮುಖ್ಯ ಅಲ್ಲ. ಯಾಕೆಂದರೆ ವಾಯುದೇವನಲ್ಲಿ ಭಗವಂತನಲ್ಲಿ ಹೇಗೋ ಹಾಗೆ ಆ ಅರ್ಥ ಪೂರ್ಣವಾಗಿ ಹೊಂದುವುದಿಲ್ಲ. ಆಯಾ ದೇವತೆಗಳಲ್ಲಿ ಮತ್ತಷ್ಟು ಅಪ್ರಧಾನವಾಗಿ ಅನ್ವಯವಾಗುವ ಪ್ರಯುಕ್ತ ದೇವತಾಪರವಾದ ಮೊದಲ ಮಜಲಿನ ಅರ್ಥ ತೀರಾ ಅಮುಖ್ಯ.

ಈ ಎಚ್ಚರವನ್ನಿಟ್ಟುಕೊಂಡು ಮೂರೂ ಅರ್ಥಗಳನ್ನು ಚಿಂತಿಸಬೇಕೆಂಬುದು ಆಚಾರ್ಯರ ಆಂತರ್ಯ.

## ಗಾಯತ್ರೀಮಂತ್ರ ತೆರೆದುಕೊಳ್ಳುವ ಬಗೆ:

ಗಾಯತ್ರೀಮಂತ್ರ ಈ ಮೂರು ಮಜಲುಗಳಲ್ಲಿ ಹೇಗೆ ತೆರೆದುಕೊಳ್ಳಬಲ್ಲದೆಂಬುದನ್ನು ಪರಿಶೀಲಿಸೋಣ.

## ಸೂರ್ಯಪರ ಅರ್ಥ:

ಸವಿತೃ ಶಬ್ದದಿಂದ ಅಮುಖ್ಯವಾಗಿ ವಾಚ್ಯನಾಗುವವನು ಸೂರ್ಯ. ಅವನ ಪರವಾಗಿ ಗಾಯತ್ರೀಮಂತ್ರವನ್ನು ಮೊದಲ ಮಜಲಲ್ಲಿ ಚಿಂತಿಸಬೇಕು:

ಸೂರ್ಯನು ತನ್ನ ಬೆಳಕಿನ ಕಿರಣಗಳಿಂದ ವ್ಯಾಪ್ತನಾಗಿರುವವನು (ತತ್). ಷಟ್‌ಪ್ರಶ್ನೋಪನಿಷತ್ತು ನಿರೂಪಿಸುತ್ತಿರುವಂತೆ ಬಿಸಿಲುಮಳೆಗಳಿಗೆ ಕಾರಣನಾಗಿ ಸೃಷ್ಟಿಗೆ ಪ್ರಯೋಜಕನಾಗಿರುವವನು (ಸವಿತುಃ). ದೇವತಾ ತಾರತಮ್ಯದ ಹನ್ನೆರಡನೇ ಕಕ್ಷೆಯಲ್ಲಿ ಬರುವ ಸೂರ್ಯನು ಚಕ್ಷುರಿಂದ್ರಿಯಕ್ಕೆ ಅಭಿಮಾನಿಯಾಗಿ, ಬೆಳಕು, ಬಿಸಿಲು, ಮಳೆಗಳಿಗೆ ನಿಯಾಮಕನಾಗಿ, ಆ ಮೂಲಕ "ಆರೋಗ್ಯಂ ಭಾಸ್ಕರಾದಿಚ್ಛೇತ್" ಎಂದಿರುವಂತೆ ಆರೋಗ್ಯಕ್ಕೂ ಅನುಗ್ರಾಹಕನಾಗಿ ಜ್ಞಾನಿಗಳಿಂದ, ಭಾವುಕರಿಂದ ಸೇವಿಸಲ್ಪಡುವವನು (ವರೇಣ್ಯಮ್). ತನ್ನ ಬಿಸಿಲಿನ ಮೂಲಕ ಒಣಗಿಸುವವನು, ಸಸ್ಯಗಳು ಪಾಕಕ್ಕೊಳಗಾಗುವಂತೆ ಮಾಡುವವನು (ಭರ್ಗಃ –ಭ್ರಸ್ಜ ಪಾಕೇ). ಕಿರಣಗಳನ್ನು ಹರಿಸಿ ಎಲ್ಲ ಪದಾರ್ಥಗಳನ್ನು ಬೆಳಗುವವನು ಹಾಗೂ ಪ್ರತಿಮೆಯಾಗಿದ್ದುಕೊಂಡು ಸೂರ್ಯನಾರಾಯಣನ ಬಗ್ಗೆ ಬೆಳಕು ಚೆಲ್ಲುವವನು (ದೇವಸ್ಯ). ಸೂರ್ಯನನ್ನೇ ಬೆಳಕು, ಬಿಸಿಲು, ಮಳೆ ನೀಡುವ ದೇವರೆಂದು ಕೆಲವು ಅಜ್ಞರು ಭಾವಿಸಿದರೆ, ಜ್ಞಾನಿಗಳು ಸೂರ್ಯನಾರಾಯಣನಿಗೆ ಪ್ರತಿಮೆಯಾಗಿರುವ ಸೂರ್ಯಮಂಡಲದ ಒಡೆಯನೆಂದು ಭಾವಿಸುವರು. ಹೀಗೆ ಈ ದೃಷ್ಟಿಕೋನಗಳಿಂದ ಎಲ್ಲರಿಂದಲೂ ಧ್ಯಾನಿಸಲ್ಪಡುವವನು (ಧೀಮಹಿ). ಬೆಳಕು ಚೆಲ್ಲುವ ಮೂಲಕ ಹಾಗೂ ಚಕ್ಷುರಿಂದ್ರಿಯವನ್ನು ನಿಯಂತ್ರಿಸುವ ಮೂಲಕ ಹೊರಗಿನ ಪದಾರ್ಥಗಳ ಬುದ್ಧಿಯನ್ನು ಪ್ರೇರಿಸುವನು. ಅವನ ಮಂಡಲವೇ ಸೂರ್ಯನಾರಾಯಣನಿಗೆ ಪ್ರತಿಮೆಯಾಗಿದ್ದು, ಆ ಮೂಲಕ ಸೂರ್ಯನಾರಾ ಯಣನ ವಿಷಯಕವಾದ ಪ್ರಜ್ಞೆಗೂ ಪ್ರೇರಕನಾಗಿರುವವನು (ಧಿಯೋ ಯೋ ನಃ ಪ್ರಚೋದಯಾತ್).

## ಪ್ರಾಣಪರ ಅರ್ಥ:

ಐತರೇಯೋಪನಿಷತ್ತಿನ (೨–೧–೨–೧೨) '....ಏಕೈವ ವ್ಯಾಹೃತಿಃ ಪ್ರಾಣ ಋಚ ಇತ್ಯೇವ ವಿದ್ಯಾತ್' ಎಂಬ ಮಾತನ್ನು ವ್ಯಾಖ್ಯಾನಿಸುವಾಗ ಶ್ರೀಮದಾಚಾರ್ಯರು "ದ್ವಾವಾತ್ಮಾನೌ ಹಿ ವೇದೇಷು ದ್ವೌ ಪ್ರಾಣೌ ದ್ವೌ ಚ ಚೇತನೌ । .....ವಾಯುರ್ನಾರಾಯಣಶ್ಚ ತೌ" ಎಂಬ ಬ್ರಹ್ಮಾಂಡದ ಮಾತನ್ನು ಉಲ್ಲೇಖಿಸಿ, "ಅನ್ಯದೇವತಾವಿಷಯತ್ವೇನ ಪ್ರತೀಯಮಾನಾ ಅಪಿ ಋಚೋ ಭಗವದ್ವಿಷಯಾ ಏವ ಮುಖ್ಯತಃ । ತದನಂತರಂ ವಾಯುವಿಷಯಾಶ್ಚ" ಇತರ ದೇವತಾಪರವಾಗಿ ಕಾಣುವ ಮಂತ್ರಗಳೂ ಮುಖ್ಯವಾಗಿ ಭಗವದ್ವಿಷಯಕಗಳು; ಆ ಬಳಿಕ ಪ್ರಾಣವಿಷಯಕಗಳು ಎಂದು ಸ್ಥಾಪಿಸಿರುವ ಸಿದ್ಧಾಂತಕ್ಕನುಗುಣವಾಗಿ ಸವಿತೃ ಎನಿಸುವ ಸೂರ್ಯಪರವಾಗಿ ಕಾಣಿಸುವ ಗಾಯತ್ರೀಮಂತ್ರ ಮುಖ್ಯವಾಗಿ ಭಗವತ್ಪರವಾಗಿರುವಂತೆ, ಆ ಬಳಿಕ ಪ್ರಾಣಪರವೂ ಆಗಿರುವುದು. ಆದುದರಿಂದ ಗಾಯತ್ರೀಮಂತ್ರ ಪ್ರಾಣದೇವನ ವಿಷಯದಲ್ಲಿ ಹೇಗೆ ತೆರೆದುಕೊಳ್ಳುವುದೆಂಬುದನ್ನು ಪರಿಶೀಲಿಸಬೇಕು.

ಪ್ರಳಯದಲ್ಲೂ ಪರಾಪರತತ್ವಗಳನ್ನು ತಿಳಿಯುವವನಾಗಿದ್ದು 'ನಿತ್ಯಸಮ' ಎನಿಸಿರುವ ಪ್ರಾಣದೇವ ಕಾಲತಃ ವ್ಯಾಪ್ತ. ಎಲ್ಲೆಡೆ ಸಂಚರಿಸುವ ಗಾಳಿಗೆ ಅಭಿಮಾನಿಯಾದ ಅವನು ದೇಶತಃ ವ್ಯಾಪ್ತ. ಜೀವೋತ್ತಮನಾದ ಅವನು ಉಳಿದೆಲ್ಲ ಜೀವರಿಗಿಂತ ಹೆಚ್ಚಿನ ಗುಣಸಂಪನ್ನನಾಗಿದ್ದು ಗುಣತಃ ವ್ಯಾಪ್ತನೂ ಆಗಿರುವನು (ತತ್). ಷಟ್‌ಪ್ರಶ್ನೋಪನಿಷತ್ತಿನಲ್ಲಿ ತಿಳಿಸಿರುವಂತೆ ಭಗವಂತನು ನಡೆಸುವ ಸೃಷ್ಟಿಯಲ್ಲಿ ಪ್ರಾಣ ಮತ್ತು ಭಾರತೀದೇವಿಯರು ಮಾಧ್ಯಮ ರಾಗಿರುವುದರಿಂದ ಸೃಷ್ಟಿಗೆ ಪ್ರಯೋಜಕ ಎನಿಸುವವನು ಪ್ರಾಣದೇವ (ಸವಿತುಃ). ಐತರೇಯೋಪನಿಷತ್ತೇ ಮುಂತಾದ ಅನೇಕ ಉಪನಿಷತ್ತುಗಳಲ್ಲಿ ಬಂದಿರುವಂತೆ ವಾಯುದೇವನು ಉಳಿದೆಲ್ಲ ತತ್ವಾಭಿಮಾನಿಗಳಿಗಿಂತ ಶ್ರೇಷ್ಠನಾಗಿರುವವನು. ಅವರೆಲ್ಲರಿಂದ ಸೇವಿಸಲ್ಪಡುವವನೂ ಕೂಡಾ (ವರೇಣ್ಯಮ್). ಪ್ರಾಣಾಪಾನಾದಿ ರೂಪಗಳಿಂದ ಉಸಿರಾಟ ಮುಂತಾದುವನ್ನು ನಡೆಸುತ್ತ ಪೋಷಿಸುವವನು; ಉಳಿದ ಇಂದ್ರಿಯಗಳನ್ನೂ, ಇಂದ್ರಿಯಾಭಿಮಾನಿಗಳನ್ನೂ ಪ್ರೇರಿಸಿ ಬೇರೆ ಬೇರೆ ಚಟುವಟಿಕೆ ಗಳನ್ನು ಮಾಡಿಸುವವನು (ಭರ್ಗಃ–ಭರಣಗಮನಕರ್ತಾ). ತತ್ವಾಭಿಮಾನಿಗಳ ಸ್ಪರ್ಧೆಯಲ್ಲಿ ಜಯಿಸಿರುವವನು. ಕಲಿಯೇ ಮುಂತಾದ ಅಸುರರ ವಿರುದ್ಧ ಜಯಿಸಿರುವವನು (ದೇವಸ್ಯ–ದಿವು ವಿಜಯೇ). ಪರಮಾತ್ಮನ ಅತ್ಯಂತ ಪ್ರೀತಿಗೆ ಪಾತ್ರನಾಗಿದ್ದು, ಅವನ ಉತ್ತಮ ಪ್ರತಿಮೆಯಾಗಿರುವ, ಎಲ್ಲರ ಆಗುಹೋಗು ಗಳನ್ನೆಲ್ಲ ಅಮುಖ್ಯವಾಗಿ ಪ್ರೇರಿಸುವ ಅವನು ತತ್ವಾಭಿಮಾನಿಗಳೇ ಮುಂತಾದ ಎಲ್ಲರಿಂದ ಧ್ಯಾನಿಸಲ್ಪಡಲು ಅರ್ಹನಾಗಿರುವವನು (ಧೀಮಹಿ). ಅಧ್ಯಾತ್ಮ ಜ್ಞಾನನೇತಾರನಾಗಿದ್ದು, ಮಧ್ವಾಚಾರ್ಯರಾಗಿ ತತ್ವಜ್ಞಾನದ ಪ್ರಸಾರಕನಾಗಿದ್ದು, ಪರಮಾತ್ಮನ ಉತ್ತಮ ಪ್ರತಿಮೆಯಾಗಿದ್ದು ತತ್ವಜ್ಞಾನದ, ಭಗವದ್‌ಜ್ಞಾನದ ಪ್ರೇರಕನಾಗಿರುವನು (ಧಿಯೋ ಯೋ ನಃ ಪ್ರಚೋದಯಾತ್).

### ನಾರಾಯಣಪರ ಅರ್ಥ:

ಹಿಂದಿನ ಎರಡು ಮಜಲಿನ ಅರ್ಥಗಳಿಗಿಂತಲೂ ನಾರಾಯಣಪರವಾದ ಮೂರನೇ ಮಜಲಿನ ಅರ್ಥ ಅತ್ಯಂತ ಮುಖ್ಯವಾದುದು.

ಶ್ರೀಮದಾಚಾರ್ಯರು ಋಗ್ಭಾಷ್ಯದ ಪ್ರಾರಂಭದಲ್ಲಿಯೇ ನಿರೂಪಿಸಿರುವಂತೆ ನಾರಾಯಣನು ಮೂರು ಬಗೆಯ ವ್ಯಾಪ್ತಿಯನ್ನು ಪೂರ್ಣ ಪ್ರಮಾಣದಲ್ಲಿ ಪಡೆದಿರುವವನು. ಅದರಲ್ಲೂ ಗುಣತಃ ವ್ಯಾಪ್ತಿಗೆ ಪ್ರಾಶಸ್ತ್ಯ (ತತ್). ಮುಖ್ಯವಾಗಿ, ಸ್ವತಂತ್ರವಾಗಿ ಎಲ್ಲ ಕಾಲದ, ಎಲ್ಲ ದೇಶದ ಎಲ್ಲರ ವಿಷಯದ ಬೇರೆ ಬೇರೆ ಬಗೆಯ ಸೃಷ್ಟಿಯನ್ನು ನಡೆಸುವವನು (ಸವಿತುಃ). ಗುಣಪೂರ್ಣನಾಗಿದ್ದು ಸರ್ವ ಶ್ರೇಷ್ಠ ಹಾಗೂ ಲಕ್ಷ್ಮೀದೇವಿಯೇ ಮುಂತಾದ ಎಲ್ಲರಿಂದಲೂ ಸೇವ್ಯ (ವರೇಣ್ಯಮ್). ಸೂರ್ಯಾದಿ ಪ್ರಕಾಶಕಪದಾರ್ಥಗಳನ್ನೆಲ್ಲ ಬೆಳಗಿಸುವಷ್ಟು ಪ್ರಕಾಶರೂಪಿ. ಜಗತ್ತಿನ ಸೃಷ್ಟ್ಯಾದಿಗಳನ್ನೆಲ್ಲ ಕ್ರೀಡೆಯಾಗಿ ನಡೆಸುವಷ್ಟು ಸುಖರೂಪಿ. ತನ್ನ ಅನಂತ ವ್ಯಕ್ತಿತ್ವವನ್ನೂ, ತನ್ನನ್ನು ಆಶ್ರಯಿಸಿರುವ ಜಗತ್ತನ್ನೂ ಸಮಗ್ರವಾಗಿ, ಸಾಕ್ಷಾತ್ತಾಗಿ

ಕಾಣುತ್ತಿರುವಷ್ಟೂ ಜ್ಞಾನಸ್ವರೂಪಿ (ಭಾರತಿಜ್ಞಾನರೂಪತ್ವಾತ್ ಭರ್ಗಃ). ಲಕ್ಷ್ಮೀದೇವಿಯಿಂದ ಪ್ರಾರಂಭಿಸಿ ಪ್ರತಿಯೊಬ್ಬರ ಪ್ರತಿಯೊಂದು ಬಗೆಯ ಪೋಷಣೆಯನ್ನೂ, ಚಟುವಟಿಕೆಯನ್ನೂ ನೆರವೇರಿಸುವವನು (ಭರಣಗಮನಕರ್ತೃತ್ವಾತ್ ಭರ್ಗಃ). ಸರ್ವೋತ್ಕೃಷ್ಟನಾಗಿರುವವನು, ಪ್ರಕಾಶಕಪದಾರ್ಥಗಳನ್ನೂ ಬೆಳಗಿಸುವವನು, ಜಗತ್ತಿನ ಸೃಷ್ಟ್ಯಾದಿಗಳನ್ನೆಲ್ಲ ಕ್ರೀಡಾರೂಪವಾಗಿ ನಡೆಸುವವನು (ದೇವಸ್ಯ). ಸರ್ವಗುಣಸಂಪನ್ನನಾಗಿರುವುದರಿಂದ, ಸಕಲವಿಧಪುರುಷಾರ್ಥಗಳನ್ನೂ ಅನುಗ್ರಹಿಸುವವನಾದುದರಿಂದ ಲಕ್ಷ್ಮೀದೇವಿಯೇ ಮುಂತಾದ ಎಲ್ಲರಿಂದಲೂ ಧ್ಯೇಯನಾಗಿರುವವನು (ಧೀಮಹಿ). ಎಲ್ಲರ ಹೃದಯದಲ್ಲಿದ್ದುಕೊಂಡು ಅವರವರ ಯೋಗ್ಯತೆ, ಪ್ರಾರಬ್ಧಕರ್ಮಾದಿಗಳಿಗನುಗುಣವಾಗಿ ಬುದ್ಧಿಯನ್ನು ಪ್ರೇರಿಸುವವನು (ಧಿಯೋ ಯೋ ನಃ ಪ್ರಚೋದಯಾತ್).

ಹೀಗೆ ಗಾಯತ್ರೀಮಂತ್ರವು ನಾರಾಯಣನಲ್ಲಿ ಮುಖ್ಯಾರ್ಥದಲ್ಲಿ ಸಮಗ್ರವಾಗಿ ತೆರೆದುಕೊಳ್ಳಬಲ್ಲದು.

*ಮೂಲ : ಬನ್ನಂಜೆ*

*

## ಗಾಯತ್ರಿಯ ಭರ್ಗ ಶಬ್ದದ ಲಿಂಗ ಯಾವುದು?

ಋಗ್ಭಾಷ್ಯದ ಟೀಕೆಯಲ್ಲಿ 'ಭರ್ಗೋ ರೂಪಂ....' -ಎಂಬುದಾಗಿ ಭರ್ಗ ಶಬ್ದ ನಕಾರಾಂತ ನಪುಂಸಕಲಿಂಗ ಎಂದು ಹೇಳಲಾಗಿದೆ. ಆದಿ-ಉದಾತ್ತಸ್ವರದ ಸಿದ್ಧಿಗಾಗಿ ಹಾಗೆ ಹೇಳಲಾಗಿದೆ. ಆದರೆ 'ಸ ಏವ ಭರ್ಗಶಬ್ದಾರ್ಥಃ....' ಎಂಬ ಅನುವ್ಯಾಖ್ಯಾನದ ಮಾತನ್ನು ವ್ಯಾಖ್ಯಾನಿಸುವಾಗ ಶ್ರೀಮನ್ನ್ಯಾಯಸುಧಾದಲ್ಲಿ 'ನನು ಗಾಯತ್ರ್ಯಾಂ ಯೋ ಭರ್ಗೋ....' ಎಂಬುದಾಗಿಯೂ, 'ಭರ್ಗನಾಮಕಃ ಸವಿತಾ ಪ್ರತಿಪಾದ್ಯೋ ದೃಶ್ಯತೇ' ಎಂಬುದಾಗಿಯೂ ಭರ್ಗ ಶಬ್ದದ ಲಿಂಗ ಪುಲ್ಲಿಂಗ ಎಂದು ಒಪ್ಪಿಕೊಳ್ಳಲಾಗಿದೆ. 'ಯಸ್ಯ ಭರ್ಗಾಖ್ಯಾ ತಚ್ಚಿಂತಯಾಮಿ' ಎಂಬುದಾಗಿ ಮೈತ್ರಾಯಣೀಶ್ರುತ್ಯಾದಿಗಳಲ್ಲಿ ಅಕಾರಾಂತ ಭರ್ಗ ಶಬ್ದವು ಪಠಿತವಾಗಿರುವುದರಿಂದ ಅದಕ್ಕನುಗುಣವಾಗಿ ಇಲ್ಲಿ ಅಕಾರಾಂತವಾದ ಭರ್ಗ ಶಬ್ದವನ್ನೇ ಇಟ್ಟುಕೊಳ್ಳಲಾಗಿದೆ. ಅಕಾರಾಂತ ಭರ್ಗ ಶಬ್ದದ ರೂಢಿ ರುದ್ರನಲ್ಲಿ ಇರುವುದಾದರೂ ಆಗಮದ ವಿರೋಧ ಇರುವುದರಿಂದ, ಅಂತಹ ಆಗಮಕ್ಕೆ ಅನುಗುಣವಾಗಿ ಅಕಾರಾಂತ ಭರ್ಗ ಶಬ್ದದಿಂದಲೂ ಸೂರ್ಯನಾರಾಯಣನೇ ವಾಚ್ಯ ಎನಿಸುವನು.

ಹೀಗೆ ಶ್ರೀರಾಘವೇಂದ್ರಸ್ವಾಮಿಗಳು ತಮ್ಮ 'ಪರಿಮಳ' ಟಿಪ್ಪಣಿಯಲ್ಲಿ ವಿವರಿಸಿರುವರು.

— *ಸಗ್ರಿ*

# ಪ್ರಥಮಾಕ್ಷರದಲ್ಲಿ ಪರಶುರಾಮ

——— ಸಗ್ರಿ ರಾಘವೇಂದ್ರ ಉಪಾಧ್ಯಾಯ

"....ತಸ್ಯಾ ಅಗ್ನಿರೇವ ಮುಖಮ್" ಎಂಬುದಾಗಿ ಬೃಹದಾರಣ್ಯಕೋಪನಿಷತ್ತು (೭-೧೯-೯) ಗಾಯತ್ರೀಮಂತ್ರದ ಮೊದಲ ಅಕ್ಷರದಲ್ಲಿ ನಡೆಸಬೇಕಾದ ಪರಶು ರಾಮನ ಉಪಾಸನೆಯ ಬಗ್ಗೆ ತಿಳಿಸುತ್ತಿದ್ದು ಅದರ ಸ್ಪಷ್ಟೀಕರಣವನ್ನು 'ಗಾಯತ್ರೀಸಂಹಿತೆ' ಹೀಗೆ ಮಾಡಿದೆ-

ವಕ್ತವ್ಯೋ ಭಗವಾನ್ ವಿಷ್ಣುರ್ಗಾಯತ್ರ್ಯಾ ಮುಖಸಂಸ್ಥಿತಃ ।
ಅಗ್ನಿಮಂಡಲಗೋ ನಿತ್ಯಮಗ್ನಿನಾಮಾಗ್ರಣೀತ್ವತಃ ।
ಗಾಯತ್ರ್ಯಾಸ್ತು ಪರಿಜ್ಞಾನಂ ಜ್ಞಾತೇ ಮುಖಗತೇ ಹರೌ ।
ಸಫಲಂ ಭವೇದನ್ಯಥಾ ತು ನ ಸಮ್ಯಕ್ ಫಲದಂ ಭವೇತ್ ।
ಗಾಯತ್ರೀಮುಖಗೋ ವಿಷ್ಣುರ್ಜ್ಞೇಯಃ ಸರ್ವಾತ್ಮನಾ ತತಃ ।
ಸಂಹರ್ತಾ ಸರ್ವದೋಷಾಣಾಮಗ್ನಿಸ್ಥಃ ಸರ್ವದಾಹಕಃ ।
ನಿತ್ಯಾನಂದೋಽಗ್ನಿವರ್ಣಶ್ಚ ರಾಮಃ ಪರಶುಭೃತ್ ಸದಾ ॥

ಎಲ್ಲರಿಗೂ ನೇತಾರನಾಗಿದ್ದು ಅಗ್ನಿನಾಮಕನಾಗಿ ಅಗ್ನಿಮಂಡಲದಲ್ಲಿರುವ ಭಗವಾನ್ ವಿಷ್ಣುವನ್ನು ಗಾಯತ್ರಿಯ ಪ್ರಥಮಾಕ್ಷರದಲ್ಲಿರುವವನೆಂದು ತಿಳಿಯಬೇಕು. ಪ್ರಥಮಾಕ್ಷರದಲ್ಲಿರುವ ಶ್ರೀಹರಿಯನ್ನು ತಿಳಿದರೆ ಮಾತ್ರ ಗಾಯತ್ರಿಯ ಜ್ಞಾನವು ಸಫಲವಾಗುವುದು. ಇಲ್ಲದಿದ್ದರೆ ಗಾಯತ್ರೀಜ್ಞಾನವು ಪೂರ್ಣಫಲವನ್ನು ಕೊಡುವುದಿಲ್ಲ. ಆದ್ದರಿಂದ ಗಾಯತ್ರಿಯ ಪ್ರಥಮಾಕ್ಷರದಲ್ಲಿರುವ ವಿಷ್ಣುವನ್ನು ತಿಳಿಯಲೇಬೇಕು. ಎಲ್ಲ ಇಂಧನವನ್ನೂ ಅಗ್ನಿ ಸುಟ್ಟುಹಾಕುವಂತೆ ಅಗ್ನಿಯಲ್ಲಿರುವ ನಿತ್ಯಾನಂದಸ್ವರೂಪನೂ, ಅಗ್ನಿಯಂತೆ ಕೆಂಪುಬಣ್ಣವುಳ್ಳವನೂ ಆಗಿರುವ ಕೊಡಲಿಯನ್ನು ಧರಿಸಿರುವ ಪರಶುರಾಮನು ಎಲ್ಲ ಪಾಪಗಳನ್ನೂ ಪರಿಹಾರಮಾಡುತ್ತಾನೆ.

ಹೀಗೆ ಗಾಯತ್ರಿಯ ಮೊದಲ ಅಕ್ಷರದಲ್ಲಿ ಇರುವವನನ್ನಾಗಿ ತಿಳಿಯಬೇಕೆಂದರೆ, ಪ್ರತಿಪಾದ್ಯತ್ವೇನ ಇರುವವನನ್ನಾಗಿ ತಿಳಿಯಬೇಕು. ಪ್ರತಿಪಾದ್ಯನನ್ನಾಗಿ ತಿಳಿಯಬೇಕು ಎಂದೇ ಅಭಿಪ್ರಾಯ. ಆದ್ದರಿಂದ ಗಾಯತ್ರಿಯ ಮೊದಲ ಅಕ್ಷರವಾದ 'ತ'ದಿಂದ ಪರಶುರಾಮನು ಹೇಗೆ ಪ್ರತಿಪಾದ್ಯನಾಗಬಲ್ಲ ಎಂಬುದನ್ನು ವಿವೇಚಿಸಿಕೊಳ್ಳಬೇಕು.

ವಿಸ್ತಾರ ಎಂಬ ಅರ್ಥದ 'ತನು' ಎಂಬ ಕ್ರಿಯಾಪದದಿಂದ ನಿಷ್ಪನ್ನವಾದ 'ತತ' ಶಬ್ದದ ಏಕದೇಶವಾಗಿ ಉಳಿದಿರುವ 'ತ' ವರ್ಣವು 'ವಿಸ್ತಾರ' 'ವ್ಯಾಪ್ತಿ' ಎಂಬ ಅರ್ಥವನ್ನು ತಿಳಿಸಬಲ್ಲದು. ಹೀಗೆ 'ತ' ಅಕ್ಷರ ಹೇಳುವ 'ವಿಸ್ತಾರ' ಎಂಬ

ಅರ್ಥದ ಆಧಾರದಲ್ಲಿ ಪರಶುರಾಮನ ಚರಿತ್ರೆ, ಮಹಿಮೆ, ಅನುಗ್ರಹ ಗಳನ್ನೆಲ್ಲ ಅನುಸಂಧಾನ ಮಾಡಬೇಕು.

೧) ಭೃಗುವಂಶದಲ್ಲಿ, ಜಮದಗ್ನಿಗಳ ಪುತ್ರನಾಗಿ ಅವತರಿಸುವ ಮೂಲಕ ಭೃಗುಗಳ ಹಾಗೂ ಜಮದಗ್ನಿಗಳ ಕೀರ್ತಿಯನ್ನು ವಿಸ್ತಾರಗೊಳಿಸಿದವನು. (ತನ್ಯತೇ ಯಶಃ ಅನೇನೇತಿ ತತ್, ತದೇವ ತಃ).

೨) ಜಮದಗ್ನಿಗಳ ಆದೇಶವನ್ನು ಶಿರಸಾವಹಿಸಿ ತಾಯಿ ರೇಣುಕೆ ಮುಂತಾದವರ ತಲೆಗಳನ್ನು ಕಡಿಯುವ ಮೂಲಕ ಜಮದಗ್ನಿಗಳ ಆನಂದವನ್ನು ವಿಸ್ತಾರಗೊಳಿಸಿದವನು.

೩) ಕಾರ್ತವೀರ್ಯಾರ್ಜುನನನ್ನೂ, ಅವರ ಹತ್ತು ಸಾವಿರ ಮಕ್ಕಳನ್ನೂ, ಇಪ್ಪತ್ತೊಂದು ಬಾರಿ ಭೂಮಿಯ ಮೇಲೆ ಅಡ್ಡಾಡಿ ಭೂಮಿಯಲ್ಲಿದ್ದ ದುಷ್ಟ ಕ್ಷತ್ರಿಯರನ್ನೆಲ್ಲ ಸಂಹರಿಸಿ 'ದೃಪ್ತಕ್ಷತ್ರಕುಲಾಂತಕ' ಎಂಬ ತನ್ನ ಯಶಸ್ಸನ್ನು ವಿಸ್ತಾರಗೊಳಿಸಿದವನು ಬ್ರಾಹ್ಮಣ್ಯವನ್ನು ವಿಸ್ತಾರಗೊಳಿಸಿದವನು.

೪) ಮುನ್ನೂರೈವತ್ತು ವರ್ಷಗಳ ಕಾಲ ತತ್ತ್ವಶಾಸ್ತ್ರವನ್ನೂ, ಎಪ್ಪತ್ತೈದು ವರ್ಷಗಳ ಕಾಲ ಅಸ್ತ್ರಗಳನ್ನೂ ಭೀಷ್ಮನಿಗೆ ಅಭ್ಯಾಸಮಾಡಿಸಿ ಅವನ ಜ್ಞಾನವನ್ನು ವಿಸ್ತಾರಗೊಳಿಸಿದವನು.

೫) ದ್ರೋಣರಿಗೆ ವಿದ್ಯೋಪದೇಶ ನೀಡಿ ಅವರ ಮೂಲಕ ಪಾಂಡವರ ಹಾಗೂ ಕೌರವರ ಶಾಸ್ತ್ರ-ಅಸ್ತ್ರಗಳಿಗೆ ಸಂಬಂಧಿಸಿದ ಜ್ಞಾನವನ್ನು ವಿಸ್ತಾರ ಗೊಳಿಸಿದವನು.

೬) ಅಂಬೆಯ ವಿಷಯದಲ್ಲಿ ಭೀಷ್ಮನ ವಿರುದ್ಧ ಕಾದಾಡಿ, ಅವನನ್ನು ಸೋಲಿಸಿದರೂ ಅವನ ಬ್ರಹ್ಮಚರ್ಯದ ಪ್ರತಿಜ್ಞೆಗೆ ಹಾನಿಬಾರದಂತೆ ನಡೆದು ಕೊಳ್ಳುವ ಮೂಲಕ ಅವನ ಯಶಸ್ಸನ್ನು ವಿಸ್ತಾರಗೊಳಿಸಿದವನು.

೭) ತನ್ನದೇ ಸ್ವರೂಪವಾದ ದಾಶರಥಿ ರಾಮನ ವಿರುದ್ಧ ಕಾದಾಡಿ ಅವನಿಂದ ಪರಾಜಿತನಾದವನಂತೆ ನಟಿಸಿ, ಆ ಮೂಲಕ ಅವನ ಯಶಸ್ಸನ್ನು ವಿಸ್ತಾರಗೊಳಿಸಿದವನು.

೮) ಚಿರಂಜೀವಿಗಳಲ್ಲೊಬ್ಬನಾಗಿ ಪರಿಗಣಿತನಾಗಿದ್ದು, ಈಗಲೂ ಮಹೇಂದ್ರ ಪರ್ವತದಲ್ಲಿ ಹಿಂದೆ ಇದ್ದಂತೆಯೇ ಏಕರೂಪವಾಗಿ ಇರುವವನು (ಯಥಾ ಪೂರ್ವಂ ತಥೇದಾನೀಮಿತಿ ವಿಷ್ಣುಸ್ತದುಚ್ಯತೇ -ಬೃ.ಉ.ಭಾ. ೬-೪-೫).

೯) ಅಗ್ನಿಯ ಅಂತರ್ಯಾಮಿಯಾಗಿದ್ದು, ಅಗ್ನಿಯ ಮೂಲಕ ಬೆಳಕನ್ನೂ ಅಗ್ನಿಯಿಂದ ಅಭಿಮನ್ಯಮಾನವಾದ ವಾಗಿಂದ್ರಿಯದ ಮೂಲಕ ವಿಚಾರಧಾರೆ ಯನ್ನೂ ವಿಸ್ತಾರಗೊಳಿಸುವವನು.

೧೦) ವೇದದ ಅಗ್ನಿಸೂಕ್ತಗಳಲ್ಲಿ ಮುಖ್ಯವಾಗಿ ಪ್ರತಿಪಾದ್ಯನಾಗಿರುವವನು. ("ವೇದೋಕ್ತರೂಪ್ರೋಽನುಪಚಾರತಶ್ಚ.... ತತ್.... ಇತ್ಯೇನಮಥೋ ವದಂತಿ" -ಋಗ್ವೇದಖಿಲ (ಗೀ.ಭಾ. ೧೭-೨೩).

ಹೀಗೆ ಗಾಯತ್ರಿಯ ಮೊದಲ ಅಕ್ಷರವಾದ 'ತ' ಅಥವಾ 'ತತ್' ಇದರಿಂದ ಪರಶುರಾಮನ ಮಹಿಮೆಗಳನ್ನಷ್ಟೇ ಅಲ್ಲ ಗುಣಧರ್ಮಗಳನ್ನೂ ಅನು ಸಂಧಾನ ಮಾಡಬಹುದಾಗಿದೆ.

*(ಗಾಯತ್ರೀಮಂತ್ರ ತೇಜಸ್ಸಿನ ಧ್ಯಾನವನ್ನು ತಿಳಿಸಿದೆ. ತೇಜಸ್ಸಿನಲ್ಲಿ ಭಗವಂತನ ಪರಶುರಾಮರೂಪ ಸನ್ನಿಹಿತವಾಗಿದೆ. ಹಾಗಾಗಿ ಗಾಯತ್ರಿಯ ಪ್ರಾರಂಭಿಕ ಚಿಂತನೆ ಪರಶುರಾಮನ ಉಪಾಸನೆ ಎನಿಸಿದೆ. ಇದನ್ನಿಲ್ಲಿ ಗಾಯತ್ರೀಮುಖಗತ ಎಂದು ತಿಳಿಸಿದ್ದು. -ಸಂಪಾದಕ)*

*

## ಗಾಯತ್ರಿಯಲ್ಲಿ ವ್ಯಾಸಚಿಂತನೆ

**ಯಃ** -ಪ್ರಕಟವಾದ ಅಪಾರ ಜ್ಞಾನಸ್ವರೂಪರಾದ ಶ್ರೀ ವೇದವ್ಯಾಸರು **ನಃ** -ನಮ್ಮ

**ಧಿಯಃ**-ಕರ್ತವ್ಯಾಕರ್ತವ್ಯಗಳ ಬಗೆಗಿನ ನಿರ್ಣಯಾತ್ಮಕ ಜ್ಞಾನವನ್ನು ಅಥವಾ ವೇದಗಳ ಅರ್ಥ-ಅಪಾರ್ಥಗಳ ಬಗೆಗಿನ ಖಚಿತವಾದ ಬೋಧವನ್ನೂ ಮಹಾಭಾರ ತಾದಿ ನಿರ್ಮಾಣದಿಂದ, **ಪ್ರಚೋದಯಾತ್**-ಪ್ರೇರಿಸುತ್ತಾರೆ. **ತಸ್ಯ** -ಅಂತಪ.

**ದೇವಸ್ಯ ಸವಿತುಃ**-ಕುರುರಾಜರಾದ ಧೃತರಾಷ್ಟ್ರ ಹಾಗೂ ಪಾಂಡುರಾಜನ ಸ್ರಷ್ಟಾರರಾದ ವ್ಯಾಸರ, **ತತ್**-ಸರ್ವತ್ರ ವ್ಯಾಪ್ತವಾದ ಅಥವಾ ಗುಣಪೂರ್ಣವಾದ,

**ವರೇಣ್ಯಂ**-ಬ್ರಹ್ಮಾದಿದೇವತೆಗಳಿಂದಲೂ ಜ್ಞಾನಾದಿಸಂಪತ್ತಿಗಾಗಿ ಭಜಿಸಲು ಯೋಗ್ಯವಾದ, **ಭರ್ಗಃ**-ಪ್ರಕಾಶ, ಆನಂದ, ಜ್ಞಾನಸ್ವರೂಪವಾದ ಅಂತಹ ತೇಜಃಸ್ವ ರೂಪವಾದ (ರೂಪಂ) ರೂಪವನ್ನು **ಧೀಮಹಿ** -ಧ್ಯಾನಿಸುತ್ತೇವೆ.

## ನಿರ್ಗುಣಬ್ರಹ್ಮಬೋಧ ಮೋಕ್ಷಸಾಧನವಲ್ಲ

ಗಾಯತ್ರಿಯ ವ್ಯಾಖ್ಯಾನವೆನಿಸಿರುವ ಪುರುಷಸೂಕ್ತವು ಉಪಸಂಹಾರದಲ್ಲಿ 'ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾ ಅಯನಾಯ ವಿದ್ಯತೇ' ಎಂಬುದಾಗಿ ಪರಮಾತ್ಮನನ್ನು ಸಹಸ್ರಶೀರ್ಷತ್ವಾದಿಗುಣಸಂಪನ್ನನನ್ನಾಗಿ ತಿಳಿದವನೇ ಮೋಕ್ಷಹೊಂದುವನೆಂದು ಸಗುಣಸಾಕಾರ ಬ್ರಹ್ಮಜ್ಞಾನವೇ ಮೋಕ್ಷಸಾಧನ ಎಂದು ತಿಳಿಸಿದೆ.

ಆದ್ದರಿಂದ ಅಂತಹ ಪುರುಷಸೂಕ್ತದ ವ್ಯಾಖ್ಯಾನವಾದ ಗಾಯತ್ರಿಗೂ ಸಗುಣ ಸಾಕಾರ ಬ್ರಹ್ಮಜ್ಞಾನವೇ ಮುಕ್ತಿಸಾಧನವೆಂಬುದು ಅಭಿಪ್ರೇತ ಎಂದು ಸಿದ್ಧಿಸುವುದು.

— *ಶ್ರೀ ವಿದ್ಯೇಶತೀರ್ಥರು*

# ಗಾಯತ್ರಿಯಲ್ಲಿ ಶ್ರೀಕೃಷ್ಣ

ಶ್ರೀ ವಿದ್ಯೇಶತೀರ್ಥರು

"ಅಧ್ಯಾತ್ಮದೀಪ"ನಾದ ಭಗವಾನ್ ಶ್ರೀಕೃಷ್ಣನು ಗಾಯತ್ರೀಮಂತ್ರದಲ್ಲಿ ಸ್ಫುಟವಾಗಿ ವಿರಾಜಮಾನನಾಗಿದ್ದಾನೆ, ಪ್ರತಿಪಾದ್ಯನಾಗಿದ್ದಾನೆ. ಆತನು ತೋರಿದ ಅದ್ಭುತಲೀಲೆ, ಮಹಿಮೆಗಳನ್ನೆ ಗಾಯತ್ರೀಮಂತ್ರವು ಸಾರುತ್ತಿದೆ.

ಈ ಬಗ್ಗೆ ಸ್ವಲ್ಪ ಚಿಂತನೆ ನಡೆಸೋಣ.

**'ತತ್'**

"ತತ್" ಎನ್ನುವ ಗಾಯತ್ರಿಯ ಮೊದಲನೆಯ ಪದದ ಅರ್ಥವು 'ಸರ್ವ ವ್ಯಾಪಿ'. ಇದನ್ನು ಶ್ರೀಕೃಷ್ಣನು ಬಹು ಬಾರಿ ತನ್ನಲ್ಲಿ ತೋರಿಸಿದ್ದಾನೆ.

ಮಥುರೆಗೆ ಶ್ರೀಕೃಷ್ಣ-ಬಲಭದ್ರರನ್ನು ಕರೆದುಕೊಂಡು ಹೋಗುವ ಸಂದರ್ಭ ದಲ್ಲಿ, ಮಧ್ಯಮಾರ್ಗದಲ್ಲಿ, ಅಕ್ರೂರನಿಗೆ ಮಧ್ಯಾಹ್ನ ವೈದಿಕಕ್ರಿಯೆಯನ್ನು ಪೂರೈಸಲು ಯಮುನಾ ನದಿಯಲ್ಲಿ ಮುಳುಗಿದಾಗ ಕೃಷ್ಣ-ಬಲಭದ್ರರು ಅಲ್ಲಿ ಕಾಣುವರು. ನೀರಿನಲ್ಲಿ ಕಂಡ ಕೃಷ್ಣ-ಬಲಭದ್ರರು ರಥದಲ್ಲಿ ಇದ್ದಾರೆಯೇ ಎಂದು ಜಿಜ್ಞಾಸೆ ಯಿಂದ ಮೇಲೆದ್ದು ದೃಷ್ಟಿಬೀರಿದಾಗ ಅಲ್ಲಿಯೂ ಅವರು ಅಕ್ರೂರನಿಗೆ ಕಾಣ ಸಿಗುತ್ತಾರೆ. ಪುನಃ ಮುಳುಗಿದಾಗಲೂ ಅವರು ನೀರಿನಲ್ಲಿ ಕಣ್ಣಿಗೆ ಗೋಚರ ರಾಗುತ್ತಾರೆ. ಹೀಗೆ ಅಕ್ರೂರನಿಗೆ ದಿವ್ಯಪ್ರತ್ಯಕ್ಷದಿಂದ ಕೃಷ್ಣನು ಸರ್ವವ್ಯಾಪ್ತನೆಂದು ಮನವರಿಕೆಯಾಗಿದೆ.

ಮಿಥಿಲಾನಗರದಲ್ಲಿ ರಾಜನಾದ ಬಹುಲಾಶ್ವನು ಹಾಗೂ ಸಾಮಾನ್ಯ ಪ್ರಜೆಯಾದ ಶ್ರುತದೇವನೂ ಏಕ ಸಮಯದಲ್ಲಿ ತಮ್ಮ ಪೂಜೆಯನ್ನು ಸ್ವೀಕರಿಸ ಬೇಕೆಂದು ಭಕ್ತಿಯಿಂದ ಶ್ರೀಕೃಷ್ಣನಿಗೆ ಆಹ್ವಾನ ನೀಡುತ್ತಾರೆ. ಆಗ ಶ್ರೀಕೃಷ್ಣನು ಎರಡು ರೂಪ ತೊಟ್ಟು ಒಂದೇ ಸಮಯದಲ್ಲಿ ಒಂದು ರೂಪದಿಂದ ಕೆಲವು ಮುನಿಜನರಿಂದೊಡಗೂಡಿ ಬಹುಲಾಶ್ವನ ಮನೆಯಲ್ಲಿ ಪೂಜೆ ಸ್ವೀಕರಿಸಿದರೆ, ಇನ್ನೊಂದು ರೂಪದಿಂದ ಕೆಲವು ಮುನಿಗಳಿಂದೊಡಗೂಡಿ ಶ್ರುತದೇವನ ಮನೆ ಯಲ್ಲಿ ಪೂಜೆ ಸ್ವೀಕರಿಸುವನು. ಅಂತೆಯೇ ಅವರಿಬ್ಬರನ್ನು ಅನುಗ್ರಹಿಸುತ್ತಾನೆ. ಈ ಘಟನೆಯಿಂದಲೂ ಶ್ರೀಕೃಷ್ಣನು ಸರ್ವವ್ಯಾಪ್ತನೆಂದು ಸ್ಪಷ್ಟವಾಗಿದೆ. ಅಷ್ಟೇ ಅಲ್ಲ. ಪ್ರಾಕೃತಜನರಂತೆ ಭಗವಂತನು ರಾಜನಾದ ಬಹುಲಾಶ್ವನ ಬಾಹ್ಯ ಸಂಪತ್ತನ್ನು ಗಮನಿಸಿ ಮೊದಲು ಆತನ ಪೂಜೆಯನ್ನು ಸ್ವೀಕರಿಸಿದ ಅನಂತರ ಬಡವನಾದ ಶ್ರುತದೇವನ ಪೂಜೆಯನ್ನು ಸ್ವೀಕರಿಸಿ ತಾನು ಬಾಹ್ಯಸಂಪತ್ತಿಗೆ ಮರುಳಾಗ ಲಾರೆನು, ಬಡವನಾದರೂ ಆತನ ಹೃದಯಸಂಪತ್ತಿಗೆ (ಭಕ್ತಿಗೆ) ಮಾತ್ರ ತಾನು

ವಶನಾಗಿ ಅನುಗ್ರಹಿಸುವೆನೆಂದೂ, ರಾಜನ ಪೂಜಾಸ್ವೀಕಾರ ಸಮಯದಲ್ಲಿ ಶ್ರುತದೇವನ ಪೂಜಾಸ್ವೀಕಾರದ ನಿದರ್ಶನದಿಂದ ಸಾಬೀತುಪಡಿಸಿದ್ದಾನೆ.

೧೬೧೦೮ ಸ್ತ್ರೀಯರನ್ನು ವಿವಾಹ ಮಾಡಿಕೊಂಡ ಶ್ರೀಕೃಷ್ಣನು ಹೇಗೆ ಅವರಿಂದೊಡಗೂಡಿ ಗೃಹಸ್ಥಧರ್ಮವನ್ನು ಆಚರಿಸುವನೆಂದು ಜಿಜ್ಞಾಸೆಯಿಂದ ದ್ವಾರಕೆಗೆ ಬಂದ ನಾರದರು ಪ್ರತಿಯೊಂದು ಮನೆಯಲ್ಲಿಯೂ ತನ್ನ ಪತ್ನಿ–ಪುತ್ರ–ಬಂಧುಗಳಿಂದೊಡಗೂಡಿ ಒಂದೊಂದು ರೂಪದಿಂದ ನಾನಾ ತೆರನಾಗಿ ವ್ಯವಹರಿಸುತ್ತಿರುವ ಕೃಷ್ಣನನ್ನು ಕಂಡು ಆಶ್ಚರ್ಯಚಕಿತರಾದರು. ಹೀಗೆ ನಾರದರೂ ಭಗವಾನ್ ಶ್ರೀಕೃಷ್ಣನು ೧೬೧೦೮ ಮನೆಗಳಲ್ಲಿ ಒಂದೊಂದು ರೂಪದಿಂದ ವ್ಯಾಪಿಸಿದ್ದನ್ನು ಕಂಡಿದ್ದಾರೆ.

ಮರ್ದಿಸಲು ಅಶಕ್ಯವಾದ ಏಳು ಗೂಳಿಗಳಿರುವ ಸ್ಥಳಗಳಲ್ಲಿ ಏಳು ರೂಪಗಳಿಂದ ವ್ಯಾಪಿಸಿ ಕನ್ಯಾಶುಲ್ಕರೂಪದಿಂದ ಅವುಗಳನ್ನು ನಿಗ್ರಹಿಸಿ ಶ್ರೀಕೃಷ್ಣನು ನಗ್ನಜಿತ್ ರಾಜನ ಮಗಳಾದ ನೀಲಾದೇವಿಯನ್ನು ಪರಿಗ್ರಹಿಸಿದನು.

ಇದಲ್ಲದೆ ಯಶೋದೆ, ಅರ್ಜುನ, ಉತ್ತಂಕ ಮುಂತಾದ ಭಕ್ತರಿಗೂ ತನ್ನ ವಿಶ್ವವ್ಯಾಪ್ತವಾದ ರೂಪವನ್ನು ತೋರಿಸುವುದರ ಮೂಲಕ ತಾನು 'ವಿಶ್ವವ್ಯಾಪ್ತ'ನೆಂದು ಸ್ಪಷ್ಟಪಡಿಸಿದ್ದಾನೆ.

'ಸವಿತುಃ'

ತಾನು "ಜಗತ್ ಸ್ರಷ್ಟಾರ" ಎಂಬುದನ್ನೂ ಶ್ರೀಕೃಷ್ಣ ಪ್ರತ್ಯಕ್ಷವಾಗಿ ತೋರಿಸಿದ್ದಾನೆ. ಗೋಪಿಕಾಸ್ತ್ರೀಯರಲ್ಲಿ ತಾನು "ನಾರಾಯಣ" ಎಂಬ ಹೆಸರುಳ್ಳ ೧೦ ಲಕ್ಷ ಮಂದಿ ಗೋಪಾಲಕರನ್ನು ಉತ್ಪಾದಿಸಿದ್ದಲ್ಲದೆ, ೧೬,೧೦೦ ಜನ ರಾಜಕುಮಾರಿಯರನ್ನು ವಿವಾಹಿತನಾಗಿ ಪ್ರತಿಯೊಬ್ಬರಲ್ಲೂ ೧೦ ಪುತ್ರರನ್ನು ಹಾಗೂ ಏಕ ಪುತ್ರಿಯನ್ನು ಕ್ರಮಬದ್ಧವಾಗಿ ಸೃಷ್ಟಿಸಿದನು. ತನ್ನ ರೋಮಕೂಪಗಳಿಂದ ಹುಲಿಗೆ ಸಮಾನವಾದ ಕೋಟಿಗಟ್ಟಲೆ ತೋಳಗಳನ್ನು ಸೃಷ್ಟಿಸಿ ನಂದ ಗೋಕುಲದಿಂದ ಭೀತರಾದ ಎಲ್ಲರನ್ನೂ ವೃಂದಾವನಕ್ಕೆ ಕೊಂಡೊಯ್ದನು. ದ್ರೌಪದಿಯ ವಸ್ತ್ರಾಪಹರಣಕಾಲದಲ್ಲಿ ತನ್ನನ್ನು ಸ್ಮರಿಸಿದಾಗ ಆಕೆಗೆ ಅಕ್ಷಯಾಂಬರವನ್ನು ಸೃಷ್ಟಿಸಿ ನೀಡಿದ. ಕುಚೇಲನ ಹಿಡಿ ಅವಲಕ್ಕಿಯನ್ನು ಸ್ವೀಕರಿಸಿ ಆತನಿಗೆ 'ದಿವ್ಯ ರಾಜಧಾಮ'ವನ್ನು ನಿರ್ಮಿಸಿ ನೀಡುವುದರ ಮೂಲಕ 'ಸುಚೇಲ'(ಒಳ್ಳೆಯ ವಸ್ತ್ರವುಳ್ಳವನು)ನನ್ನಾಗಿ ಮಾಡಿ ಅನುಗ್ರಹಿಸಿದ. ಜಯದ್ರಥನನ್ನು ಕೊಲ್ಲಲು ಅರ್ಜುನನಿಗೆ ಅನುಕೂಲ ಸನ್ನಿವೇಶವನ್ನು ಕಲ್ಪಿಸಿಕೊಡುವುದರ ಸಲುವಾಗಿ ಸೂರ್ಯನಿಗೂ ಆವರಕವಾದ ಘೋರ ತಮಸ್ಸನ್ನು ಸೃಷ್ಟಿಮಾಡಿದ. ಹೀಗೆ ಬಹುವಿಧ ನಿದರ್ಶನಗಳಿಂದ ಬೇರೆ ಯಾರಿಂದಲೂ ಮಾಡಲು ಸಾಧ್ಯವಾಗದ ಸೃಷ್ಟಿಕ್ರಿಯೆಯನ್ನು ತಾನು ಮಾಡಿ ತಾನು "ಸವಿತಾ" "ಸೃಷ್ಟಿಕರ್ತ"ನೆಂದು ಶ್ರೀಕೃಷ್ಣನು ಸ್ಪಷ್ಟಪಡಿಸಿದ್ದಾನೆ.

ಆದುದರಿಂದ ಗಾಯತ್ರಿಯಲ್ಲಿ 'ಸವಿತುಃ' ಎನ್ನುವ ಪದದಿಂದ ಉಕ್ತನಾದ ವನು ಶ್ರೀಕೃಷ್ಣನೊಬ್ಬನೆ. ಜಗತ್ ಸೃಷ್ಟಿಕ್ರಿಯೆಯು ಶ್ರೀಕೃಷ್ಣನ ಅಧೀನದಲ್ಲಿಲ್ಲದಿದ್ದರೆ ಪ್ರತಿಯೊಬ್ಬ ರಾಜಕುಮಾರಿಯಲ್ಲೂ ೧೦ ಪುತ್ರರನ್ನು ಹಾಗೂ ಏಕ ಪುತ್ರಿಯನ್ನು ಸ್ವಲ್ಪವೂ ಕ್ರಮತಪ್ಪದೇ ಸೃಷ್ಟಿಸಲು ಹೇಗೆ ಸಾಧ್ಯ? ಇದಲ್ಲದೆ ಸೂರ್ಯನನ್ನು ಆವರಿಸುವ ಅದ್ಭುತ ಕತ್ತಲೆಯನ್ನು ಹೇಗೆ ಸೃಜಿಸಬಲ್ಲನು?

ಶ್ರೀಕೃಷ್ಣನು, ಜರಾಸಂಧನ ವಿರುದ್ಧ ಯುದ್ಧದಲ್ಲಿ ಆತನ ಸಹಾಯಕನಾದ ಏಕಲವ್ಯನು ಭೀತನಾಗಿ ಓಡುತ್ತಿರಲು ಆತನನ್ನು ಎದುರಿಸಲು ಪ್ರದ್ಯುಮ್ನನನ್ನು ತನ್ನ ಉದರದಿಂದ ತತ್‌ಕ್ಷಣ ಸೃಷ್ಟಿಸಿದನು. ಅಷ್ಟೇ ಅಲ್ಲ ವಕ್ರಾಸುರನನ್ನು ಸಂಹರಿಸುವ ಸಲುವಾಗಿಯೂ ತನ್ನ ಉದರದಿಂದ ಮತ್ತೊಮ್ಮೆ ಪ್ರದ್ಯುಮ್ನನನ್ನು ಸೃಜಿಸಿದನು. ಹೀಗೆ ಎರಡು ಬಾರಿಯೂ ಸ್ತ್ರೀಯ ಅಪೇಕ್ಷೆ ಇಲ್ಲದೆ ಪ್ರದ್ಯುಮ್ನ ನನ್ನು ಉತ್ಪಾದಿಸಿ ತಾನು "ಜಗತ್ತಿನ ಸ್ವತಂತ್ರ ಸ್ರಷ್ಟಾರ" ಎಂಬುದನ್ನು ಸ್ಫುಟ ಗೊಳಿಸಿದನು.

ಸವಿತೃ(ಸೂರ್ಯ)ಮಂಡಲ ಮಧ್ಯವರ್ತಿಯಾಗಿಯೂ ಶ್ರೀಕೃಷ್ಣ 'ಸವಿತಾ' ಎನ್ನುವ ಪದದಿಂದ ಕಥನಾರ್ಹನಾಗಿದ್ದಾನೆ. ಶ್ರೀಕೃಷ್ಣನು ಪರಂಧಾಮಕ್ಕೆ ತೆರಳುವಾಗ ಒಂದು ರೂಪದಿಂದ ಸೂರ್ಯಮಂಡಲದಲ್ಲಿ ವಿರಾಜಮಾನನಾದನು ಎನ್ನುವ ಪ್ರಮೇಯವನ್ನು "ತಸ್ಥೌ ದ್ವಿತೀಯೇನ ಚ ಸೂರ್ಯಮಂಡಲೇ" ಎನ್ನುವ ವಚನದಿಂದ ಮಧ್ವರು ಸ್ಪಷ್ಟಪಡಿಸಿದ್ದಾರೆ.

ಸರ್ವ ವಸ್ತುಗಳಲ್ಲಿ "ಅಂತರ್ಯಾಮಿ"ಯಾಗಿ ಸನ್ನಿಹಿತನಾದ ಭಗವಂತನಿಗೆ ಮುಖ್ಯವಾಗಿ ಎಲ್ಲಾ ವಸ್ತುಗಳ ನಾಮಗಳೂ ಅನ್ವಯಿಸುತ್ತವೆ ಎನ್ನುವ ಪ್ರಮೇಯ ರಹಸ್ಯವನ್ನು ಶ್ರೀಮದಾನಂದತೀರ್ಥರು "ತತ್ತದ್ಗತಸ್ಯೈವ ಹರೇಸ್ತತ್ತನ್ನಾಮಾನಿ ಚಾಂಜಸಾ" ಎನ್ನುವ 'ಶಬ್ದನಿರ್ಣಯ'ದ ವಚನದಿಂದ ಸಮರ್ಥಿಸಿದ್ದಾರೆ. ಹೀಗಾಗಿ 'ಸವಿತಾ' ಎಂದು ಕರೆಯಿಸಿಕೊಳ್ಳುವ ಸೂರ್ಯಮಂಡಲದಲ್ಲಿ ಸನ್ನಿಹಿತನಾದ ಶ್ರೀಕೃಷ್ಣನಿಗೆ ಮುಖ್ಯವಾಗಿ ಈ ನಾಮವು ಸಮನ್ವಿತವಾಗುತ್ತದೆ.

### 'ವರೇಣ್ಯಂ'

'ವರೇಣ್ಯಂ' ಶಬ್ದದ ಅರ್ಥ ಸಕಲ ಕಲ್ಯಾಣ ಸದ್ಗುಣಗಳಿಂದ ಎಲ್ಲರ ಮನ ಸೆಳೆದು ಎಲ್ಲರಿಂದಲೂ ಸೇವ್ಯನು, ಭಜನೀಯನು ಎಂದು. ಶ್ರೀಕೃಷ್ಣನು ಲಕ್ಷ್ಮೀ ಸ್ವರೂಪಳಾದ ರುಕ್ಮಿಣಿಯ ಮನವನ್ನು ಸೆಳೆದು ಆಕೆಯಿಂದ ಭಜನೀಯನು, ಸೇವ್ಯನೂ ಆದನು.

ಎಲ್ಲರ ಮನಸ್ಸನ್ನು ಸೆಳೆವ ಭಾಗ್ಯದೇವಿ ಲಕ್ಷ್ಮೀ. ಆಕೆಯ (ರುಕ್ಮಿಣಿ) ಮನಸ್ಸನ್ನು ತನ್ನ ಭುವನಸುಂದರ ರೂಪದಿಂದ ಹಾಗೂ ಅಪಾರ ಸದ್ಗುಣಗಳಿಂದ ಆಕರ್ಷಿಸಿ ಅವಳಿಂದ ತನ್ನ ಬಗೆಗೆ ವೈವಾಹಿಕ ವಿಚಾರದಲ್ಲಿ ಪ್ರೇಮಪತ್ರವನ್ನು ಬರೆಸಿ ಸ್ವೀಕರಿಸಬೇಕಾದರೆ ಶ್ರೀಕೃಷ್ಣ ಎಂಥಹ ಆಕರ್ಷಕನಾಗಿರಬೇಡ? ಎಂತಹ

ಆದರಣೀಯ ಸೇವ್ಯನಾಗಿರಬೇಡ? ರುಕ್ಮಿಣಿಯು ತಾನು 'ನರಿ' ಶಿಶುಪಾಲಾದಿಗಳಿಗೆ ಸೇರತಕ್ಕ ಬಲಿಯಾಗಬಾರದು, 'ಸಿಂಹ' ಎನಿಸಿದ ಶ್ರೀಕೃಷ್ಣನಿಗೆ ಮೀಸಲ್ಪಟ್ಟ ಸೊತ್ತಾಗಿ ಆತನ ಪಾದದಾಸ್ಯದ ಸೌಭಾಗ್ಯ ಪಡೆಯಬೇಕೆನ್ನುವ ಹಿರಿಯ ಹಂಬಲ ದಿಂದ ಪ್ರೇಮಪತ್ರ ಬರೆದಳು. ಸರ್ವರಿಂದಲೂ ಸೇವ್ಯಳಾದ ಆಕೆಯಿಂದಲೂ ಅತ್ಯಾದರದಿಂದ ಸೇವ್ಯನಾಗಿ ಶ್ರೀಕೃಷ್ಣ 'ಪರಮಭಜನೀಯ' ಎನ್ನುವ 'ವರೇಣ್ಯ' ಪದಾರ್ಥವನ್ನು ತನ್ನಲ್ಲಿ ಸ್ಫುಟವಾಗಿ ಸಮನ್ವಯಗೊಳಿಸಿದನು.

ತನ್ನ ಸೊತ್ತಾದ ಸ್ಯಮಂತಕಮಣಿಯ ಹಗರಣದಿಂದ ತನ್ನ ಮಣಿಯನ್ನು ತನ್ನ ನಾಮವನ್ನು ಲೋಕದಲ್ಲಿ ಹೆಸರುವಾಸಿಯಾಗಿ ಮಾಡಿದ ಶ್ರೀಕೃಷ್ಣನು ಸೂರ್ಯನಿಗೆ ಅತ್ಯಂತ ಪ್ರಿಯನೂ ಭಜನೀಯನೂ ಆದನು. ಈ ದೃಷ್ಟಿ ಯಿಂದಲೂ ಗಾಯತ್ರೀಮಂತ್ರವು 'ಸವಿತುಃ ವರೇಣ್ಯಂ' (ಸ್ಯಮಂತಕಮಣಿಪ್ರಯುಕ್ತ ಸೂರ್ಯನಿಗೂ ಅತ್ಯಾದರದಿಂದ ಸೇವ್ಯನು) ಎಂದು ಶ್ರೀಕೃಷ್ಣನ ರೂಪವನ್ನು ಬಣ್ಣಿಸಿದೆ.

'ರೈವತಕ' ಪರ್ವತದಲ್ಲಿ ತಾನು ರುಕ್ಮಿಣಿಯೊಂದಿಗೆ ವಿಹರಿಸುತ್ತಿರಲು ತನ್ನ ದರ್ಶನಾರ್ಥಿಯಾಗಿ ಬಂದ ದುರ್ಯೋಧನಾದಿಗಳು, ಪಾಂಡವರು, ಹಾಗೂ ಅನ್ಯ ನರಪತಿಗಳಿಂದಲೂ ಸೇವ್ಯನಾಗಿ ಎಲ್ಲರಿಂದಲೂ 'ವರೇಣ್ಯ' ಎನಿಸಿದನು. ಪರಮ ದ್ವೇಷಿಯಾದ ದುರ್ಯೋಧನನಿಂದಲೂ, ಯುದ್ಧ ಸಹಾಯಕ್ಕಾಗಿ ಸೇವ್ಯನಾಗಿ ತಾನು ಸರ್ವರಿಂದಲೂ, 'ವರೇಣ್ಯ' ಅರ್ಥಾತ್ ಸೇವಿಸಲು ಅರ್ಹನೆಂಬುದನ್ನು ಮತ್ತೊಮ್ಮೆ ಸಾಬೀತುಪಡಿಸಿದನು. ಐತರೇಯೋಪನಿಷತ್ತು ಜಗತ್ತಿನ ತಂದೆ ಎನಿಸಿದ ಭಗವಂತನನ್ನು ಉಪದೇಶಾಮೃತದಿಂದ ಅಭಿವ್ಯಕ್ತಿಗೊಳಿಸುವುದರಿಂದ ಮುಖ್ಯಪ್ರಾಣನನ್ನು 'ಸವಿತಾ' ಎಂದು ಕರೆದಿದೆ. ಆತನ ಅವತಾರಸ್ವರೂಪನಾದ ಭೀಮಸೇನನೂ, ಪಂಚರಾತ್ರ ಮುಂತಾದ ಪರಮ ವೈಷ್ಣವಶಾಸ್ತ್ರಗಳಿಂದ ಮಿಥ್ಯಾ ಜ್ಞಾನಪ್ರವರ್ತಕರಾದ ಜರಾಸಂಧ, ಮಣಿಮಂತ ಮುಂತಾದ ದೈತ್ಯರನ್ನು ವಾಗ್ಯುದ್ಧದಲ್ಲಿ ಸೋಲಿಸಿ ಹರಿಯ ಮಹತ್ವವನ್ನು ಬೆಳಕಿಗೆ ತಂದನು. ಭಾಗವತ ಪಂಥದ ಪ್ರವರ್ತಕನಾಗಿಯೂ ಹರಿಯನ್ನು ಲೋಕದಲ್ಲಿ ಸ್ಫುಟವಾಗಿ ಬೆಳಕಿಗೆ ತಂದು ಅಭಿವ್ಯಕ್ತಿಗೊಳಿಸಿದ. ಅಷ್ಟೆ ಅಲ್ಲ, ಆತ ಮಧ್ವರೂಪದಿಂದ ಕಲಿಯುಗದಲ್ಲಿ ಪ್ರಕಟನಾಗಿ ಪೂರ್ಣಕಾಲವನ್ನು ಹರಿಯನ್ನು ಅಭಿವ್ಯಕ್ತಿಗೊಳಿಸುವ ಸಲುವಾಗಿಯೇ ಮೀಸಲಿರಿಸಿದನು. ಹೀಗಾಗಿ ಆತನಿಗೂ 'ಸವಿತಾ' ಎನ್ನುವ ಹೆಸರು ಅತ್ಯಂತ ಸಮರ್ಪಕವಾಗಿ ಅನ್ವಯಿಸುತ್ತದೆ.

ಶ್ರೀಕೃಷ್ಣನು, ಅಂತಹ ಸಾರ್ಥಕ ನಾಮವನ್ನು ಧರಿಸಿದ ಭೀಮಸೇನನಿಂದ ಭೂಭಾರಹರಣರೂಪ ಮಹೋನ್ನತ ಸೇವಾಕಾರ್ಯದಿಂದ ಪೂಜಿತನಾದನು. ಆತನಿಂದ ಅತ್ಯಂತಾದರದಿಂದ ಸ್ವೀಕಾರಾರ್ಹನಾದನು. ಅದಕೆಂದೇ ಶ್ರೀಕೃಷ್ಣರೂಪ ವನ್ನು ಗಾಯತ್ರಿಯು "ಸವಿತುಃ ವರೇಣ್ಯಮ್" (ಮುಖ್ಯಪ್ರಾಣಸ್ವರೂಪನಾದ ಭೀಮನಿಂದಲೂ ಸೇವ್ಯನು) ಎಂದು ಬಣ್ಣಿಸಿದೆ. ಅದಕೆಂದೇ ಹಿರಿಯರು "ಶ್ರೀಕೃಷ್ಣಂ ಭೀಮಸೇವಿತಮ್" ಎಂದು ಉದ್ಗರಿಸಿದ್ದಾರೆ.

ಬ್ರಹ್ಮಾದಿ ದೇವತೆಗಳು ಹಾಗೂ ಹಿರಿಯಜ್ಞಾನಿಗಳಾದ ಮುನಿಗಳಿಂದ ತುಂಬಿದ ಪಾಂಡವರ ರಾಜಸೂಯಯಾಗದ ಸಭೆಯಲ್ಲಿ ಜ್ಞಾನವೃದ್ಧರಾದ ಭೀಷ್ಮರ ಸಲಹೆಗನುಸಾರವಾಗಿ ಧರ್ಮರಾಯನಿಂದ ಸಮರ್ಪಿತವಾದ ಅಗ್ರಪೂಜೆಯನ್ನು ತಾನು ಸ್ವೀಕರಿಸಿ 'ಸರ್ವೋತ್ಕೃಷ್ಟ' ರೂಪದಲ್ಲಿ ತಾನೇ 'ವರೇಣ್ಯ' ಅರ್ಥಾತ್ ಸೇವ್ಯನೂ, ಭಜನಾರ್ಹನೂ ಎಂದು ಸ್ಪಷ್ಟಪಡಿಸಿದ.

ಇದಲ್ಲದೆ ರಾಜಸೂಯಯಾಗದಲ್ಲಿ ಬ್ರಹ್ಮಾದಿ ದೇವತೆಗಳು ನಡೆಸಿದ ತತ್ತ್ವ ಚರ್ಚಾಗೋಷ್ಠಿಯಲ್ಲಿಯೂ ಶ್ರೀಕೃಷ್ಣನೇ ಸರ್ವರಿಂದಲೂ ಭಜನಾರ್ಹವಾದ "ಸರ್ವೋತ್ತಮತತ್ವ"ವೆಂದು ಸಾಬೀತಾದನು. ಈ ದೃಷ್ಟಿಯಿಂದಲೂ, ಆತ 'ವರೇಣ್ಯ'ನೆಂದು ವರ್ಣಿಸಲರ್ಹನಾದನು.

**'ಭರ್ಗಃ'**

'ಭರ್ಗ' ಶಬ್ದದ ಅರ್ಥವಾದ ಜಗದ್ರಕ್ಷಣ ಕ್ರಿಯೆಯೂ ಶ್ರೀಕೃಷ್ಣನಲ್ಲೇ ಸಾಬೀತಾಗಿದೆ.

ಅಶ್ವತ್ಥಾಮಾಚಾರ್ಯರು ಪಾಂಡವರ ಸಂತತಿಯನ್ನು ನಿರ್ಮೂಲಗೊಳಿಸುವ ಉದ್ದೇಶದಿಂದ ಉತ್ತರೆಯ ಗರ್ಭದಲ್ಲಿರುವ ಪರೀಕ್ಷಿತ್ ರಾಜನ ಮೇಲೆ ಬ್ರಹ್ಮಾಸ್ತ್ರ ಪ್ರಯೋಗಿಸಿದಾಗ ಭಗವಾನ್ ಶ್ರೀಕೃಷ್ಣನನ್ನು ಉತ್ತರೆಯು ಶರಣಾಗತಳಾದಳು. ದಯಾಳುವಾದ ವಾಸುದೇವನು ಗದಾಧರನಾಗಿ ಗರ್ಭವನ್ನು ಪ್ರವೇಶಿಸಿ ಮಹಾಭಾಗವತನಾದ ಪರೀಕ್ಷಿದ್ರಾಜನನ್ನು ರಕ್ಷಿಸಿದನು. ಇದರಿಂದ ಜಗದ್ರಕ್ಷಕನು ಶ್ರೀಕೃಷ್ಣನೆಂದು ಸ್ಪಷ್ಟವಾಯಿತು. ಯಾರು ಗರ್ಭದಲ್ಲಿ ರಕ್ಷಕನಾಗಿರುವನೋ ಅವನೇ ನಿಜವಾದ ಜಗದ್ರಕ್ಷಕನು ಎಂದು "ಸ ರಕ್ಷಿತಾ ರಕ್ಷತಿ ಯೋ ಹಿ ಗರ್ಭೇ" ಎನ್ನುವ ಸ್ಮೃತಿವಚನವು ಸ್ಪಷ್ಟಪಡಿಸಿದೆ. ಪರೀಕ್ಷಿದ್ರಾಜ ಜನ್ಮವೆತ್ತಿದ ತತ್‌ಕ್ಷಣ ಬ್ರಹ್ಮಾಸ್ತ್ರದಿಂದ ಮೃತನಾದಾಗಲೂ ಶ್ರೀಕೃಷ್ಣನೇ ಪುನಃ ಆತನನ್ನು ಬದುಕಿಸಿದ. ಮೃತನಾದ ಗುರುಪುತ್ರನನ್ನು, ಮೃತ ವಿಪ್ರಸುತರನ್ನು ಹಾಗೂ ಮೃತರಾದ ದೇವಕೀಪುತ್ರರನ್ನು ಬದುಕಿಸಿ ಅನುಕ್ರಮವಾಗಿ ಗುರು–ಬ್ರಾಹ್ಮಣ–ತಾಯಿಗೆ ತಂದಿತ್ತು ಸಂತೋಷ ಪಡಿಸಿದ. ಕಾಲಿಯ ವಿಷದಿಂದ ಕಲುಷಿತವಾದ ಯಮುನಾ ಜಲದ ಪಾನದಿಂದ ಮೃತರಾದ ಗೋ–ಗೋಪಾಲಕರನ್ನು ದೃಷ್ಟಿಸುಧೆಯನ್ನು ಬೀರಿ ಸಂರಕ್ಷಿಸಿದ. ಹೀಗೆ ಬಹು ನಿದರ್ಶನಗಳಿಂದ ಶ್ರೀಕೃಷ್ಣನು ತಾನು 'ವಿಶ್ವಪಾಲಕ' ನೆಂದು ಸ್ಫುಟಗೊಳಿಸಿದ್ದಾನೆ. ಭರ್ಗಶಬ್ದಾರ್ಥದಲ್ಲಿ ಸೇರಿದ ಜಗತ್ ಚೇಷ್ಟಾ ಕರ್ತೃತ್ವವೂ (ಜಗತ್ತಿನ ಸರ್ವವ್ಯವಹಾರಕರ್ತೃತ್ವ) ಶ್ರೀಕೃಷ್ಣನಲ್ಲಿದೆಯೆಂಬುದೂ ಸಿದ್ಧವಾಗಿದೆ.

ಬಾಣಾಸುರನನ್ನು ರಕ್ಷಿಸುವ ಸಲುವಾಗಿ ಶ್ರೀಕೃಷ್ಣನ ವಿರುದ್ಧ ಯುದ್ಧಕ್ಕೆ ಬಂದ ಶಿವನು ಆತನ ಜೃಂಭಣಾಸ್ತ್ರಕ್ಕೆ ಗುರಿಯಾಗಿ ಸ್ತಬ್ಧನಾಗುತ್ತಾನೆ. ಆಸುರೀಶಕ್ತಿಯ ಆಕ್ರಮಣದಿಂದ ಶ್ರೀಕೃಷ್ಣನ ಮಹಿಮೆಯನ್ನು ಮರೆತ ಶಿವನಿಗೆ ಭಗವತ್‌ಪ್ರಜ್ಞೆ

ಜಾಗೃತಿಗೊಳಿಸುವ ಉದ್ದೇಶದಿಂದ ಬ್ರಹ್ಮದೇವನು ಆತನನ್ನು ಕರೆದುಕೊಂಡು ಭಗವಂತನ ಉದರದೊಳಗೆ ಪ್ರವೇಶಿಸುವನು. ಅಲ್ಲಿ ತನ್ನ ರುದ್ರಪದವಿಗೆ ವಿಘ್ನ ಬರಬಾರದೆನ್ನುವ ಉದ್ದೇಶದಿಂದ ಭಗವಂತನನ್ನು ಕುರಿತು ಬಿಲ್ವವನದಲ್ಲಿ ತಪಸ್ಸು ಗೈಯುತ್ತಿದ್ದ ರುದ್ರರೂಪವು ಈಗ ತಮಸ್ಸಿನಿಂದ ವಿಮುಖವಾಗಿ ಸ್ತಬ್ಧವಾಗಿರುವುದನ್ನು ಬ್ರಹ್ಮದೇವನ ಮೂಲಕ ಪ್ರತ್ಯಕ್ಷ ಕಂಡನು. ಭಗವಂತನ ವಿರುದ್ಧ ಯುದ್ಧಮಾಡಿ ಅಪರಾಧವೆಸಗಿದ್ದರಿಂದ ತಪಸ್ಸು ಗೈಯುತ್ತಿರುವ ರುದ್ರರೂಪವು ತಪೋವಿಮುಖವಾಗಿರುವುದನ್ನು ಬ್ರಹ್ಮದೇವನು ರುದ್ರನಿಗೆ ತಿಳಿಸಿದನು. ಆಗ ಶಿವನು ಮೋಹದಿಂದ ದೂರ ಸರಿದವನಾಗಿ ಭಗವಾನ್ ಶ್ರೀಕೃಷ್ಣನನ್ನು ಶರಣಾಗತನಾಗಿ ತನ್ನ ಭಕ್ತನಾದ ಬಾಣನನ್ನು ಸಂರಕ್ಷಿಸಲು ಪ್ರಾರ್ಥಿಸಿದನು. ಶ್ರೀಕೃಷ್ಣನು ಬಾಣನನ್ನು ಸಂಹರಿಸದೆ ಮೋಚನಗೊಳಿಸಿದನು.

ಶಿವನು ಭಗವಾನ್ ಶ್ರೀಕೃಷ್ಣನ ಅವಕೃಪೆಗೊಳಗಾಗಿ ಸ್ತಬ್ಧನಾದುದರ ನಿದರ್ಶನದಿಂದ ಯಾವಾತನು ಶ್ರೀಕೃಷ್ಣನ ಅವಕೃಪೆಗೊಳಗಾಗುವನೋ ಆತನು ತನ್ನ ಕರ್ತವ್ಯವನ್ನು ಮಾಡಲು ಶಕ್ತನಾಗಲಾರನು ಎಂಬುದು ಸ್ಫುಟವಾಗುವುದರಿಂದ ಸರ್ವಜಗತ್ತಿನ ಚಟುವಟಿಕೆಗಳಿಗೆ "ಮೂಲಪ್ರವರ್ತಕ" ಶ್ರೀಕೃಷ್ಣನೇ ಎಂದು ನಿರ್ಧಾರಿತವಾಗುವುದು.

ದುಷ್ಟರನ್ನು ಭರ್ಜನ ಮಾಡುವುದರಿಂದ (ಹಿಂಸಿಸುವುದರಿಂದ) ಶ್ರೀಕೃಷ್ಣನು 'ಭರ್ಗ' ಎಂದು ವರ್ಣಿಸಲರ್ಹನಾಗಿದ್ದಾನೆ.

ಶ್ರೀಕೃಷ್ಣನು ವಿಶೇಷವಾಗಿ ದುಷ್ಟರನ್ನು ಸದೆಬಡಿಯುವ ಮೂಲಕ ದೇವತೆಗಳಿಗೆ ವಿಶೇಷಾನಂದವನ್ನುಂಟುಮಾಡಿದ್ದಾನೆ. ಆತನು ದೈವೀಸಂಪತ್ತಿನಿಂದ ಸಂಪನ್ನರಾದವರಿಗೆ ಆನಂದವನ್ನು ಅನುಗ್ರಹಿಸುವ ಸಲುವಾಗಿಯೇ ದುಷ್ಟರನ್ನು ಪೀಡಿಸುವನೆಂದು "ಸತಾಂ ಸುಖವಿವೃದ್ಧ್ಯರ್ಥಮಸತಾಂ ಪೀಡನಂ ಹರೇಃ" ಎನ್ನುವ ಶ್ರೀಮದಾನಂದತೀರ್ಥರ ವಚನವು ಸ್ಪಷ್ಟಪಡಿಸಿದೆ.

"ಭರ್ಗಸ್ತೇಜಃ ಇತಿ ಸ್ಮೃತಮ್" ಎಂದು ಅಗ್ನಿಪುರಾಣದ ವಚನವು 'ತೇಜಸ್ಸು' 'ಭರ್ಗ' ಶಬ್ದದ ಅರ್ಥವೆಂದು ವಿವರಿಸಿದೆ. ಶ್ರೀಕೃಷ್ಣನು ಅರ್ಜುನನಿಗೆ ಸಹಸ್ರ ಸೂರ್ಯಸಮಾನವಾದ ತೇಜೋರೂಪವನ್ನು ವಿಶ್ವರೂಪವನ್ನು ಪ್ರದರ್ಶಿಸುವ ಸಮಯದಲ್ಲಿ ತೋರಿಸಿದ್ದಲ್ಲದೆ, ತನ್ನನ್ನು ಬಂಧಿಸಲು, ಉದ್ಯುಕ್ತನಾದ ಮೂರ್ಖ ದುರ್ಯೋಧನನಿಗೂ ಅದನ್ನು ಪ್ರದರ್ಶಿಸಿ ಆತನ ಕಣ್ಣನ್ನು ಮುಚ್ಚಿಸಿದ್ದಾನೆ.

**'ದೇವಸ್ಯ'**

'ದೇವಸ್ಯ' ಎಂಬ ಪದದ ಅರ್ಥ "ಕ್ರೀಡಾಕರ್ತನು" ಎಂದು. ಶ್ರೀಕೃಷ್ಣನು ಅದ್ಭುತ ಬಾಲಲೀಲೆ ತೋರಿ ಭಕ್ತರಲ್ಲಿ ತನ್ನ ಬಗೆಗಿನ ಭಕ್ತಿಭಾವವನ್ನು ಅಭಿವೃದ್ಧಿಗೊಳಿಸಿದ್ದಾನೆ. ಈ ತೆರನಾದ ವಿವಿಧ ಲೀಲೆಗಳನ್ನು ತೋರಲೆಂದೇ

ಶ್ರೀಕೃಷ್ಣ ಮನುಷ್ಯರೂಪ ತೊಟ್ಟು ಧರೆಗಿಳಿದು ಬಂದ. ಇದನ್ನೇ ಆತನ ಸ್ತೋತ್ರವು ಬಣ್ಣಿಸಿದೆ. "ಲೀಲಾಮಾನುಷವಿಗ್ರಹಃ" ಎಂದು. ಗಾಯತ್ರಿಯಲ್ಲಿ ಸೇರಿದ 'ದೇವ' ಪದದ ಅರ್ಥರೂಪದಲ್ಲಿ ಶ್ರೀಕೃಷ್ಣನ ಅದ್ಭುತಲೀಲೆಯನ್ನು ಭಾಗವತವು ವಿಶೇಷವಾಗಿ ವಿವರಿಸುವುದರಿಂದಲೇ ಭಾಗವತವನ್ನು 'ಗಾಯತ್ರೀಭಾಷ್ಯ'ವೆಂದು ಗರುಡಪುರಾಣವು ಬಣ್ಣಿಸಿದೆ. 'ಸ್ತುತ್ಯ'ನೆಂದೂ ದೇವ ಶಬ್ದದ ಅರ್ಥವನ್ನು ವಿವರಿಸಬಹುದು. ಶ್ರೀಕೃಷ್ಣನು ದೇವಕೀಗರ್ಭದಲ್ಲಿರುವಾಗಲೇ ಬ್ರಹ್ಮರುದ್ರರು ಉಪಸ್ಥಿತರಾಗಿ, ಆತನನ್ನು ದಿವ್ಯವಾಗಿ ಸ್ತುತಿಸಿದ್ದಾರೆ. ಪ್ರಾದುರ್ಭಾವವಾದೊಡನೇ ಆತನನ್ನು ವಸುದೇವದೇವಕಿಯರೂ, ಕೃಷ್ಣ ತಮ್ಮ ಪುತ್ರನಲ್ಲ, ಪರಬ್ರಹ್ಮನೆಂದು ಗುರುತಿಸಿ ಆತನ ಗುಣಗಾನ ಮಾಡಿದ್ದಾರೆ.

ನರಕಾಸುರನ ವಧೆಯನ್ನು ಪ್ರಾರ್ಥಿಸಲು ಬದರಿಯಿಂದ ಬಂದ ಮುನಿಗಳು ವೇದ–ಪಂಚರಾತ್ರಗಳಲ್ಲಿ ಉಕ್ತವಾದ ಸ್ತೋತ್ರಗಳಿಂದ ಶ್ರೀಕೃಷ್ಣನನ್ನು ಸ್ತುತಿಸಿದ್ದಾರೆ.

ಶ್ರೀಕೃಷ್ಣನ ಗೋವರ್ಧನಗಿರಿಯ ಉದ್ಧಾರದ ಕಾರ್ಯದಿಂದ ಭಗ್ನಮನೋರಥನೂ, ಖಂಡಿತದರ್ಪನೂ ಆದ ಇಂದ್ರನು ಜ್ಞಾನೋದಯದಿಂದ ಶ್ರೀಕೃಷ್ಣನನ್ನು ಉಪನಿಷತ್ತುಗಳಲ್ಲಿ ಉಕ್ತವಾದ ವಚನಗಳಿಂದ ಸ್ತುತಿಸಿದ್ದಾನೆ. ಇದಲ್ಲದೆ ಭಗವಂತನ ದಿವ್ಯರೂಪವನ್ನು ಯಮುನಾಜಲಾಶಯದಲ್ಲಿ ಕಂಡ ಅಕ್ರೂರ, ಮುಚುಕುಂದ ಹಾಗೂ ಅರ್ಜುನನು ಸ್ತುತಿಸಿದ್ದಲ್ಲದೆ, ವೇದಾಭಿಮಾನಿಗಳಾದ ರುಕ್ಮಿಣಿದ್ರೌಪದಿಯರು ವೇದದ ಪ್ರತಿನಿಧಿಗಳಾಗಿ ಶ್ರೀಕೃಷ್ಣನನ್ನು ಸ್ತುತಿಸಿದ್ದಾರೆ.

ಬಲಿಚಕ್ರವರ್ತಿಯು ನಾರಾಯಣನ ಕಿರೀಟವನ್ನು ಅಪಹರಿಸಿದಾಗ ಆತನನ್ನು ಸೋಲಿಸಿ ಅದನ್ನು ಸ್ವೀಕರಿಸಿ ಗೋಮಂತಗಿರಿಯಲ್ಲಿರುವ ಶ್ರೀಕೃಷ್ಣನಿಗೆ ಅರ್ಪಿಸಿ ವೇದಪುರುಷನಾದ ಗರುಡನು ಶ್ರೀಕೃಷ್ಣನನ್ನು 'ಪರಬ್ರಹ್ಮ'ನೆಂದು ಸ್ತೋತ್ರ ಮಾಡಿದ್ದಾನೆ. ಹೀಗೆ ವೇದಾಭಿಮಾನಿದೇವಿಯರು, ವೇದಪುರುಷನಾದ ಗರುಡ ಹಾಗೂ ಹಿರಿಯ ಜ್ಞಾನಿಗಳಿಂದ ಸ್ತುತ್ಯನಾದ ಶ್ರೀಕೃಷ್ಣನೇ 'ದೇವ' ಎನ್ನುವ ಪದದ ಅರ್ಥವಾಗಲು ಅರ್ಹನಾಗಿದ್ದಾನೆ. ಶ್ರೇಷ್ಠವಾದ ವಿಷ್ಣುಸಹಸ್ರನಾಮ ಹಾಗೂ ಭೀಷ್ಮಸ್ತವರಾಜದಿಂದ ಸ್ತುತ್ಯನಾದುದರಿಂದಲೂ ಭಗವಾನ್ ಶ್ರೀಕೃಷ್ಣ 'ದೇವ' ಎನಿಸಿದ್ದಾನೆ.

"ವೇದೈಶ್ಚ ಸರ್ವೈರಹಮೇವ ವೇದ್ಯಃ" (ಸರ್ವವೇದಗಳಿಂದ ಪ್ರತಿಪಾದ್ಯನು ನಾನು) ಎನ್ನುವ ಗೀತಾವಚನವು ಶ್ರೀಕೃಷ್ಣನೇ ಸರ್ವವೇದಗಳಿಂದ ಸ್ತುತ್ಯನಾಗಿ 'ದೇವ' ಎನಿಸಿಕೊಳ್ಳಲು ಶಕ್ತನೆಂದು ಸ್ಪಷ್ಟಪಡಿಸಿದೆ. 'ದೇವ' ಶಬ್ದದ ಇನ್ನೊಂದು ಅರ್ಥ 'ಸರ್ವರಿಗೂ ಗಮ್ಯ'(ಪ್ರಾಪ್ಯ)ನೆಂದು. ಬಡವನಿಗೂ ಬಲ್ಲಿದನಿಗೂ ಭಗವಾನ್ ಶ್ರೀಕೃಷ್ಣ ಗಮ್ಯ(ಲಭ್ಯ)ನಾದ. ದ್ವಾರಕಾಪುರಿಯ ರಾಜಭವನದಲ್ಲಿ ಪತ್ನಿಯರಿಂದೊಡಗೂಡಿ 'ಹಂಸತೂಲಿಕಾತಲ್ಪದಲ್ಲಿ ವಿರಾಜಮಾನನಾದ ಶ್ರೀಕೃಷ್ಣನು ಬಡವನಾದ ಕುಚೇಲನ ಆಗಮನವನ್ನು ಕಂಡು ಸಂಭ್ರಮದಿಂದ ಎದುರಾಗಿ ಸ್ವಾಗತಿಸಿ ಆತನಿಗೂ ಲಭ್ಯನಾದ. ರಾಜ ಬಹುಲಾಶ್ವನಿಗೆ ಲಭ್ಯನಾದಂತೆ

ಐಶ್ವರ್ಯವಿಲ್ಲದ ಶ್ರುತದೇವನಿಗೂ ಒಂದೇ ಸಮಯದಲ್ಲಿ ಲಭ್ಯನಾದ. ಏಕ ಸಮಯದಲ್ಲಿ ಒಂದೊಂದು ರೂಪದಿಂದ ಇಬ್ಬರ ಪೂಜೆಯನ್ನು ಸ್ವೀಕರಿಸಿ ಅನುಗ್ರಹಿಸಿದ. ಶ್ರೀಕೃಷ್ಣಸಮುದ್ರವು ಆತ್ಮಜ್ಞಾನಿ ನದಿಗಳಿಂದ ಸರ್ವದಾಗಮ್ಯ (ಪ್ರಾಪ್ಯ)ವೆಂದು ಮಧ್ವರು ವರ್ಣಿಸಿದ್ದಾರೆ-"ಸದಾ ಸದಾತ್ಮಜ್ಞನದೀಭಿರಾಪ್ಯಃ" "ಗಮ್ಯತ್ವಾತ್ ಸರ್ವಜೀವಾನಾಂ ದೇವಃ ನ ಸಮುದಾಹೃತಃ" ಎನ್ನುವ ವಚನ ದಿಂದ ದೇವ ಶಬ್ದದ ಅರ್ಥ ಗಮ್ಯ-ಲಭ್ಯವೆಂದು ಮಧ್ವರು ಸ್ಪಷ್ಟಪಡಿಸಿದ್ದಾರೆ. ದೇವ ಶಬ್ದದ ಅರ್ಥ ಜಯಶೀಲನು ಎಂದೂ ಹೇಳಬಹುದು. 'ದಿವ್' ಧಾತು 'ವಿಜಗೀಷಾ' ಎನ್ನುವ ಅರ್ಥವನ್ನು ನೀಡುತ್ತದೆ. ಜರಾಸಂಧಾದಿಗಳ ವಿರುದ್ಧ ಯುದ್ಧದಲ್ಲಿ ವಿಜಯಲಕ್ಷ್ಮಿಯಿಂದ ಹೂಮಾಲೆ ಹಾಕಿಸಿಕೊಂಡ ಭಗವಾನ್ ಶ್ರೀಕೃಷ್ಣನು 'ದೇವ' ಎನ್ನುವ ಪದದಿಂದ ಕೀರ್ತನಾರ್ಹನಾಗಿದ್ದಾನೆ. ಅಷ್ಟೆ ಅಲ್ಲ ಸುರಸ್ವರೂಪರಾದ ಭೀಷ್ಮಾದಿಗಳ ವಿರುದ್ಧ ಕ್ರೀಡಾಯುದ್ಧದಲ್ಲೂ ವಿಜಯಲಕ್ಷ್ಮಿ ಯಿಂದ ವರಿಸಲ್ಪಟ್ಟವನಾದುದರಿಂದ 'ದೇವ'ನೆಂದು ವರ್ಣಿಸಲರ್ಹನಾಗಿದ್ದಾನೆ.

ಪಾರಿಜಾತ ಅಪಹರಣಕಾಲದಲ್ಲೂ ತನ್ನ ವಿರುದ್ದ ನಿಜ ಯುದ್ಧಕ್ಕೆ ಬಂದ ರುದ್ರಾದಿ ದೇವತೆಗಳನ್ನು ಸೋಲಿಸಿ ವಿಜಯಶೀಲನಾಗಿ ತಾನು 'ದೇವಾಧಿ ದೇವ'ನೆಂದು ಸ್ಫುಟಗೊಳಿಸಿದ.

'ದೇವಸ್ಯ ವರೇಣ್ಯಂ' ಎರಡು ಪದಗಳನ್ನು ಸಂಯೋಜಿಸಿಕೊಂಡಾಗ ದೇವ ಸ್ವರೂಪರಾದ ಪಂಚಪಾಂಡವರ ಸಮುದಾಯದಿಂದ 'ಅಗ್ರಪೂಜಾರ್ಹ'ನಾಗಿ ವರಿಸಲ್ಪಟ್ಟವನು ಎನ್ನುವ ಅರ್ಥವು ಸೂಚಿತವಾಗುವುದಲ್ಲದೆ ದೇವಸ್ವರೂಪರಾದ ೧೬,೧೦೦ ಮಂದಿ ಅಗ್ನಿಪುತ್ರರಿಗೂ (ರಾಜಕನ್ಯಾವಸ್ಥೆಯಲ್ಲಿ) ಗುಣಪೂರ್ಣ ನಾದುದರಿಂದ ಪತಿರೂಪದಲ್ಲಿ ವರಿಸಲರ್ಹನು ಎನ್ನುವ ಅರ್ಥವೂ ಬೋಧ್ಯ ವಾಗುವುದು. ಅಗ್ನಿಪುತ್ರರೇ ಭಗವಂತನನ್ನು ಪತಿರೂಪದಲ್ಲಿ ಪಡೆಯಬೇಕೆನ್ನುವ ಹಿರಿಯ ಹಂಬಲದಿಂದ ಭಗವಂತನನ್ನು ಕುರಿತು ತಪಸ್ಸುಮಾಡಿದರು. ಕೃಷ್ಣಾವ ತಾರದಲ್ಲಿ ರಾಜಕನ್ಯೆಯರಾಗಿ ಅವತಾರತಾಳಿದ ಅವರು ನರಕಾಸುರನ ಕಾರಾಗೃಹ ದಿಂದ ಶ್ರೀಕೃಷ್ಣನಿಂದ ಬಿಡುಗಡೆ ಹೊಂದಿ ಆತನನ್ನೇ ಪತಿರೂಪದಲ್ಲಿ ವರಿಸಿ ಕೃತಕೃತ್ಯರಾದರು. 'ವರೇಣ್ಯ' ಎನ್ನುವ ಪದವು 'ವರಿಸಲರ್ಹ'ನೆಂಬ ಅರ್ಥವನ್ನು ಪ್ರತಿಪಾದಿಸುತ್ತದೆ.

### 'ಧೀಮಹಿ'

'ಧೀಮಹಿ' ಎನ್ನುವ ಪದವು ಶ್ರೀಕೃಷ್ಣ 'ಧ್ಯಾನಾರ್ಹನು' ಎಂದು ಬೋಧಿಸುತ್ತದೆ. ಓರ್ವ ವಿಪ್ರಪತ್ನಿ ಶ್ರೀಕೃಷ್ಣನಿಗೆ ನೈವೇದ್ಯವನ್ನು ಸಮರ್ಪಿಸಲು, ಮನೆಯಿಂದ ಹೊರಟಾಗ ಆಕೆಯ ಪತಿ ತಡೆಯುವನು. ಇದರಿಂದ ತಪ್ತಳಾದ ಆಕೆ ಕೃಷ್ಣದರ್ಶನ ಪಡೆಯುವ ಭಾಗ್ಯವಿಲ್ಲದ ತನಗೇಕೆ ಈ ದೇಹವೆನ್ನುವ ಬೇಸರ ದಿಂದ ಶ್ರೀಕೃಷ್ಣನನ್ನು ಧ್ಯಾನಿಸುತ್ತಾ ದೇಹತೊರೆದು ಶ್ರೀಕೃಷ್ಣನ ಪಾದಾರವಿಂದವನ್ನೇ ಸೇರಿದಳು.

ಕೆಲವು ಗೋಪಿಕಾಸ್ತ್ರೀಯರು ಶ್ರೀಕೃಷ್ಣನ ಸುಮಧುರ ವೇಣುನಾದಾಮೃತ ವನ್ನು ತಮ್ಮ ಕರ್ಣಗಳಿಂದ ಪಾನಮಾಡಿ ಮನಸೋತು ಆತನ ಸಾನ್ನಿಧ್ಯ ಪಡೆಯಲು ಉದ್ಯುಕ್ತರಾದಾಗ ತಮ್ಮ ಪತಿಯಿಂದ ನಿಷೇಧಿಸಲ್ಪಟ್ಟರು. ಅವರ ನಿರ್ಬಂಧದಿಂದ ಶ್ರೀಕೃಷ್ಣನ ವಿರಹಾಗ್ನಿಯಿಂದ ತಪ್ತರಾದ ಗೋಪಿಕಾಸ್ತ್ರೀಯರು ಶ್ರೀಕೃಷ್ಣನನ್ನು ಧ್ಯಾನಿಸುತ್ತಾ ತಮ್ಮ ಕಳೇಬರವನ್ನು ತ್ಯಜಿಸಿ ಶ್ರೀಕೃಷ್ಣನ ಸಾನ್ನಿಧ್ಯ ವನ್ನು ಪಡೆದು ಕೃತಕೃತ್ಯರಾದರು. ಅಹಂಕಾರಕ್ಕೊಳಗಾಗಿ ಶ್ರೀಕೃಷ್ಣನ ಸಾನ್ನಿಧ್ಯವನ್ನು ಕಳೆದುಕೊಂಡ ಗೋಪಿಯರು ಶ್ರೀಕೃಷ್ಣನನ್ನೇ ಧ್ಯಾನಿಸುತ್ತಾ ಆತನ ಕುರಿತು ಗೀತೆ ಹಾಡಿದರು. ಅವರ ಗೀತೆ ಸಹಿತವಾದ ಧ್ಯಾನಕ್ಕೆ ಪ್ರಸನ್ನನಾದ ಶ್ರೀಕೃಷ್ಣನು 'ಮನ್ಮಥ ಮನ್ಮಥ'ನಾಗಿ ಪ್ರಕಟಗೊಂಡು ಅವರನ್ನು ವಿವಿಧ ಲೀಲೆಗಳಿಂದ ಸಂತೋಷಪಡಿಸಿದ.

ದುಶ್ಶಾಸನನು ದ್ರೌಪದಿಯ ವಸ್ತ್ರಾಪಹರಣ ಮಾಡುವ ವೇಳೆ ಆಕೆ ಶ್ರೀಕೃಷ್ಣ ನನ್ನು ವಿಶೇಷವಾಗಿ ಧ್ಯಾನಿಸಿದಾಗ ಅಕ್ಷಯಾಂಬರವನ್ನಿತ್ತು ಅನುಗ್ರಹಿಸಿದ. ಶ್ರೀಕೃಷ್ಣ ನಿಂದ ನೀಚ ಜನ್ಮದಿಂದ ಬಿಡುಗಡೆಹೊಂದಿದ ನಳಕೂಬರ ಮಣಿಗ್ರೀವರು, ನಗರಾಜ, ಸುದರ್ಶನ, ವಿದ್ಯಾಧರ, ಮುಚುಕುಂದ ಹಾಗೂ ಕುಂತೀದೇವಿ ಮೊದಲಾದ ಮಹನೀಯರು ಶ್ರೀಕೃಷ್ಣನ ಧ್ಯಾನವನ್ನೇ ಬಯಸಿದರು. ಸಾಕ್ಷಾತ್ ಭಗವಾನ್ ಶ್ರೀಕೃಷ್ಣನೇ ತನ್ನ ಪ್ರಾದುರ್ಭಾವ ಮಹೋತ್ಸವದ ಸಂದರ್ಭದಲ್ಲಿ ತನ್ನ ತಂದೆ ತಾಯಿಗಳಾದ ವಸುದೇವದೇವಕಿಯರಿಗೆ, ತನ್ನನ್ನು ಪರಬ್ರಹ್ಮನೆಂದು ಧ್ಯಾನಿಸಿ ಸದ್ಗತಿಯನ್ನು ಪಡೆಯಲು ಸಂದೇಶಿಸಿದ್ದಾನೆ. ಗೋಪಿಕಾಸ್ತ್ರೀಯರಿಗೆ ತನ್ನ ಸಾಮೀಪ್ಯದಿಂದ ತನ್ನ ಧ್ಯಾನವು ಬರಲಾರದೆಂದು ಶ್ರೀಕೃಷ್ಣ ಅವರಿಗೆ ತನ್ನ ನಿರಂತರ ಧ್ಯಾನಸೌಭಾಗ್ಯವನ್ನು ಅನುಗ್ರಹಿಸಲೆಂದೇ ಅವರ ಕಣ್ಣಿಗೆ ದೂರವಾಗಿ ಉಳಿದ. ಯಾವುದೇ ವಿಶಿಷ್ಟ ವಸ್ತು ನಮ್ಮ ನಿಕಟವರ್ತಿಯಾಗಿ ಉಳಿದರೆ ನಿರ್ಲಕ್ಷ್ಯ ವಾಗುವುದು ತಾನೆ?

ಬದರಿಕಾಶ್ರಮದಲ್ಲಿ ಮುನಿಮಂಡಲಧ ಮಧ್ಯದಲ್ಲಿ ವಿರಾಜಮಾನನಾದ ಶ್ರೀಕೃಷ್ಣನನ್ನು ಘಂಟಾಕರ್ಣ ಹಾಗೂ ಕರ್ಣ ಎಂಬ ಪಿಶಾಚಿಗಳು ಧ್ಯಾನದಿಂದ ತಮ್ಮ ಹೃದಯದಲ್ಲಿ ಕಂಡು ಪ್ರಸನ್ನನಾದ ಶ್ರೀಕೃಷ್ಣನ ಅನುಗ್ರಹದಿಂದ ನೀಚ ಪಿಶಾಚಜನ್ಮದಿಂದ ಮುಕ್ತರಾಗಿ ದಿವ್ಯರೂಪ ಸುಮಧುರಸ್ವರಸಂಪತ್ತಿನಿಂದ ಸಂಪನ್ನರಾಗಿ ಸದ್ಗತಿಯನ್ನು ಪಡೆದವು. ಪಂಚಪಾಂಡವರು ಯಾವಾಗಲೂ ಶ್ರೀಕೃಷ್ಣನ ಧ್ಯಾನದ ಮಹಿಮೆಯಿಂದ ಐಹಿಕ-ಪಾರತ್ರಿಕ ಸಂಪತ್ತನ್ನು ಅನಾಯಾಸ ದಿಂದ ಪಡೆದರು. ಸುಭದ್ರೆಯನ್ನು ಆಕೆಯ ತಂದೆತಾಯಿಗಳ ಸಮಕ್ಷಮದಲ್ಲಿ ವಿವಾಹವಾಗಲು ಬಯಸಿ ಶ್ರೀಕೃಷ್ಣನನ್ನು ಅರ್ಜುನನು ಧ್ಯಾನಿಸಿದಾಗ ಶ್ರೀಕೃಷ್ಣನು ತನ್ನ ತಂದೆತಾಯಿಗಳಾದ ವಸುದೇವದೇವಕಿಯರೊಂದಿಗೆ ಅರ್ಜುನನಿದ್ದೆಡೆಗೆ ಬಂದು ತನ್ನ ತಂಗಿಯಾದ ಸುಭದ್ರೆಯೊಂದಿಗೆ ಆತನ ವಿವಾಹಮಹೋತ್ಸವವನ್ನು ಮುನಿಗಳ ಮಾರ್ಗದರ್ಶನದಲ್ಲಿ ಮಾಡಿಸಿ ಆತನ ಅಭೀಷ್ಟವನ್ನು ಪೂರೈಸಿದನು. ಹೀಗೆ ಭಾಗವತದಲ್ಲಿ ಉಲ್ಲೇಖಿತವಾದ ಅನೇಕ ಕೃಷ್ಣಧ್ಯಾನದ ಘಟನೆಗಳನ್ನು

ಅವಲೋಕಿಸುವಾಗ ಶ್ರೀಕೃಷ್ಣಧ್ಯಾನದ ಮಹತ್ವವು ಸ್ಪಷ್ಟವಾಗದೇ ಇರಲಾರದು. ಅದಕೆಂದೇ ಜ್ಞಾನಿಗಳು ಶ್ರೀಕೃಷ್ಣಧ್ಯಾನದ ಮಹತ್ವವನ್ನು ಅರಿತು ಆತನನ್ನು 'ಧೀಮಹಿ' ಧ್ಯಾನಿಸುತ್ತೇವೆ ಎಂದು ನಿರ್ಧರಿಸಿದರು.

## 'ಧಿಯೋ ಯೋ ನಃ ಪ್ರಚೋದಯಾತ್'

'ಧಿಯೋ ಯೋ ನಃ ಪ್ರಚೋದಯಾತ್' ಎನ್ನುವ ವಚನವು ಶ್ರೀಕೃಷ್ಣನು ಎಲ್ಲ ಜೀವರ ಬುದ್ಧಿಪ್ರೇರಕನೆಂದು ಬೋಧಿಸುತ್ತದೆ.

**ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಃ ಶಮಃ..... ।**

**ಅಹಿಂಸಾ ಸಮತಾ ತುಷ್ಟಿಸ್ತಪೋದಾನಂ ಯಶೋಯಶಃ ।**

**ಭವಂತಿ ಭಾವಾಃ ಭೂತಾನಾಂ ಮತ್ತ ಏವ ಪೃಥಗ್ ವಿಧಾಃ ॥**

ಎನ್ನುವ ಗೀತಾವಚನದಲ್ಲಿ ಶ್ರೀಕೃಷ್ಣನು, ತನ್ನ ಅನುಗ್ರಹದಿಂದಲೇ ಜೀವನಿಗೆ ಕರ್ತವ್ಯಾಕರ್ತವ್ಯಗಳ ನಿರ್ಣಯರೂಪ ಬುದ್ಧಿಯು ಉಂಟಾಗುವುದೆಂದು ತಿಳಿಸಿದ್ದಾನೆ. ಶ್ರೀಕೃಷ್ಣನು, ಪರಸೇನೆಯಲ್ಲಿ ಗುರು, ಬಂಧುಜನರನ್ನು ನೋಡಿ ಮೋಹ ಪರವಶತೆಯಿಂದ ಕಿಂಕರ್ತವ್ಯತಾಮೂಢನಾದ ಅರ್ಜುನನಿಗೆ ಕರ್ತವ್ಯಾಕರ್ತವ್ಯಗಳ ನಿರ್ಣಯರೂಪ ಬುದ್ಧಿಯನ್ನು ಗೀತೋಪದೇಶದ ಮೂಲಕ ಪ್ರದಾನಮಾಡಿ ಆತನನ್ನು ಯುದ್ಧಕಾರ್ಯದಲ್ಲಿ ತೊಡಗಿಸಿದ. ಈ ಮೂಲಕ ಆತ ಬುದ್ಧಿ ಪ್ರೇರಕನಾದ ಗಾಯತ್ರಿ ಪ್ರತಿಪಾದ್ಯ ಪರತತ್ವ ತಾನೆ ಎಂದು ಸ್ಪಷ್ಟಪಡಿಸಿದ. ಉದ್ಧವಗೀತೋಪದೇಶದ ಮೂಲಕವೂ ಉದ್ಧವನನ್ನು ಪ್ರತಿನಿಧಿಯಾಗಿ ಸ್ವೀಕರಿಸಿ ಇಡೀ ವಿಶ್ವಕ್ಕೆ ಕರ್ತವ್ಯಾಕರ್ತವ್ಯಗಳ ನಿರ್ಣಾಯಾತ್ಮಕ ಜ್ಞಾನವನ್ನು ಅನುಗ್ರಹಿಸಿದ. ಅಷ್ಟೇ ಅಲ್ಲ ಯುದ್ಧದಿಂದುಂಟಾದ ಸಾವುನೋವುಗಳಿಂದ ವ್ಯಥಿತನಾದ, ಪಾಪಪ್ರಜ್ಞೆಯ ಧರ್ಮರಾಜನಿಗೆ, ಧರ್ಮಾಧರ್ಮ ವಿವೇಕಜ್ಞಾನವನ್ನು ಭೀಷ್ಮರಲ್ಲಿ ನಿಂತು ತಾನೆ ಉಪದೇಶದ ಮೂಲಕ ಪ್ರದಾನಮಾಡಿದ. ಅದೇ "ಅನುಶಾಸನಪರ್ವ" ಎಂದು ಖ್ಯಾತವಾಯಿತು.

ಬುದ್ಧಿ ಮೊದಲಾದ ಇಂದ್ರಿಯಗಳಿಗೆ ನಿಯಾಮಕನಾಗಿ 'ಹೃಷೀಕೇಶ' ಎನಿಸಿದ ಶ್ರೀಕೃಷ್ಣನಿಗೆ ಬುದ್ಧಿಪ್ರೇರಕತ್ವವು ಅತ್ಯಂತ ಸಮರ್ಪಕವೆನಿಸುವುದು.

'ಯಃ' ಎನ್ನುವ ಪದವು ಯಾವಾತನು ಎನ್ನುವ ಅರ್ಥವನ್ನು ಬೋಧಿಸುವಂತೆ 'ಲಕ್ಷ್ಮೀಸಹಿತನಾದ ನಾರಾಯಣ' ಎನ್ನುವ ಅರ್ಥವನ್ನೂ ಬೋಧಿಸುತ್ತದೆ. 'ಈ + ಅಃ' ಎನ್ನುವ ಎರಡು ಅಕ್ಷರಗಳನ್ನು ಸಂಯೋಜಿಸಿಕೊಂಡಾಗ 'ಯಃ' ಎಂದು ಶಬ್ದದ ಸ್ವರೂಪವು ಸಿದ್ಧವಾಗುತ್ತದೆ. ನಾರಾಯಣಸ್ವರೂಪನಾದ ಶ್ರೀಕೃಷ್ಣನು ಲಕ್ಷ್ಮೀಸ್ವರೂಪರಾದ ರುಕ್ಮಿಣಿಸತ್ಯಭಾಮೆಯರ ಸಹಿತನಾಗಿ ವಿರಾಜಿಸಿದ. ಹೀಗಾಗಿ ಆತನಿಗೂ 'ಯಃ' ಎನ್ನುವ ಪದವು ಅತ್ಯಂತ ಸಮರ್ಪಕವಾಗಿ ಸಮನ್ವಿತವಾಗುತ್ತದೆ.

'ರುಕ್ಮಿ' ಜರಾಸಂಧಾದಿ ಮಹಾಬಲಿಷ್ಠರಾಜರು ಶ್ರೀಕೃಷ್ಣನಿಗೆ ಸೇರಬೇಕಾದ ರುಕ್ಮಿಣಿಯನ್ನು ಶಿಶುಪಾಲನಿಗೆ ನೀಡಲು ಬಹು ಪ್ರಯತ್ನಿಸಿದರೂ ಶಿಶುಪಾಲನಿಗೆ ಆಕೆ ದೊರೆಯಲಿಲ್ಲ. ಹೀಗಾಗಿ ಶ್ರೀಕೃಷ್ಣನೇ 'ರುಕ್ಮಿಣಿ ಸಹಿತ'ನಾದನೇ ವಿನಾ ಶಿಶುಪಾಲನಲ್ಲ, ಅಷ್ಟೇ ಅಲ್ಲ, ಕೃತವರ್ಮ ಅಕ್ರೂರರಿಗೆ ತನ್ನ ಮಗಳಾದ ಸತ್ಯಭಾಮೆಯನ್ನು ಕೊಡುತ್ತೇನೆಂದು ಸತ್ರಾಜಿತನು ವಚನ ನೀಡಿದ್ದರೂ ಅಂತಿಮವಾಗಿ ಎಸಗಿದ ಅಪರಾಧದ ಪರಿಮಾರ್ಜನೆಗಾಗಿ ತನ್ನ ಮಗಳಾದ ಸತ್ಯಭಾಮೆಯನ್ನು ಶ್ರೀಕೃಷ್ಣನಿಗೆ ಸ್ಯಮಂತಕಮಣಿಯೊಂದಿಗೆ ನೀಡಿದ. ಹೀಗಾಗಿ ಲಕ್ಷ್ಮಿಯ ಇನ್ನೊಂದು ರೂಪವಾದ ಸತ್ಯಭಾಮೆಯೂ ಕೂಡ ಶ್ರೀಕೃಷ್ಣನನ್ನೇ ಸೇರಿದಳು. ಆದುದರಿಂದ ಶ್ರೀಕೃಷ್ಣ ಲಕ್ಷ್ಮೀ(ರುಕ್ಮಿಣಿ, ಸತ್ಯಭಾಮೆ) ಸಹಿತ ನಾದುದರಿಂದ ಆತನೇ 'ಯಃ' ಎಂದು ಹೇಳಿಸಿಕೊಳ್ಳಲು ಅರ್ಹನು. ಹೀಗೆ ಲಕ್ಷ್ಮೀಪತಿತ್ವವನ್ನು ಸೂಚ್ಯವಾಗಿ ತಿಳಿಸುತ್ತಾ ಶ್ರೀಕೃಷ್ಣನು ಸರ್ವೋತ್ತಮನೆಂದು 'ಯಃ' ಪದವು ಸೂಚಿಸಿದೆ. ಉಪನಿಷತ್ತಿನ 'ಪರೋವರೀಯಾನ್' ಎಂಬ ಪದವು ಲಕ್ಷ್ಮಿಗಿಂತಲೂ ಭಗವಂತನಿಗೆ ಉತ್ತಮತ್ವವನ್ನು ಸಾರಿ ಆತನ ಸರ್ವೋತ್ಕೃಷ್ಟತ್ವವನ್ನು ಪ್ರತಿಪಾದಿಸಿದೆ. ಹೀಗಾಗಿ 'ಯಃ' ಪದದಿಂದ ಲಕ್ಷ್ಮೀಸ್ವರೂಪರಾದ ರುಕ್ಮಿಣಿಸತ್ಯ ಭಾಮೆಯರ ಪತಿತ್ವವು ಶ್ರೀಕೃಷ್ಣನಿಗೆ ಸರ್ವೋತ್ಕೃಷ್ಟತೆಯನ್ನು ಸಮರ್ಥಿಸುತ್ತದೆ. ರಾವಣ, ಶಿಶುಪಾಲ, ಕೃತವರ್ಮ, ಅಕ್ರೂರಾದಿಗಳು ಲಕ್ಷ್ಮೀಪತಿಯಾಗಲು ಪ್ರಯತ್ನಿ ಸಿದರೂ ಸಫಲರಾಗಲಿಲ್ಲ. ಈ ಬಹುನಿದರ್ಶನಗಳಿಂದ ಲಕ್ಷ್ಮೀಪತಿತ್ವವು ಅನ್ಯರಿಗೆ ಲಭ್ಯವಾಗದಿರುವುದರಿಂದಲೇ, ಅದು ಶ್ರೀಕೃಷ್ಣನದ್ದೇ ಅಸಾಧಾರಣ ಮಹಿಮೆ ಎಂದು ಸಾಬೀತಾಗುವುದು.

'ಸವಿತುಃ' ಎನ್ನುವ ಪದದಿಂದ ಶ್ರೀಕೃಷ್ಣನನ್ನು ಉಲ್ಲೇಖಿಸಿ ಗಾಯತ್ರೀ ಮಂತ್ರವು ಆತನು ಸೂರ್ಯನಂತೆ ಲೋಕಕರ್ಮಗಳ ಸಾಕ್ಷಿಯೇ ವಿನಾ ಅವುಗಳ ಲೇಪವುಳ್ಳವನಲ್ಲವೆಂದು ಸೂಚ್ಯವಾಗಿ ತಿಳಿಸಿ ಶ್ರೀಕೃಷ್ಣನಿಗೆ ನವನೀತಚೌರ್ಯ, ಗೋಪಿಜಾರತ್ವ ಮೊದಲಾದ ದೋಷಗಳ ಲೇಪವನ್ನು ಅಲ್ಲಗಳೆದಿದೆ.

'ದೇವಸ್ಯ ಸವಿತುಃ' ಎಂದು ಪದಗಳನ್ನು ಸಂಯೋಜಿಸಿದಾಗ ದೇವ ಸ್ವರೂಪರಾದ ೧೦ ಲಕ್ಷ ಮಂದಿ ಗೋಪಾಲಕರನ್ನು ಗೋಪಿಕಾಸ್ತ್ರೀಯರಲ್ಲಿ ಸೃಷ್ಟಿ ಮಾಡಿದವನು ಎಂಬ ಅರ್ಥವೂ ಸೂಚಿತವಾಗುವುದಲ್ಲದೆ ದೇವಸ್ವರೂಪರಾದ ಭೀಮ, ಅರ್ಜುನ, ಭೀಷ್ಮಾದಿಗಳಿಗೆ ಭೂಭಾರಹರಣ ರೂಪ ತನ್ನ ಸೇವೆ ಗೈದುದರಿಂದ ವಿಶಿಷ್ಟ ಮುಕ್ತಿಯನ್ನು ಪ್ರದಾನಮಾಡಿದವನು ಎನ್ನುವ ರಹಸ್ಯಾರ್ಥವೂ ಧ್ವನಿತವಾಗುತ್ತದೆ. ಮಧ್ವಾಚಾರ್ಯರು "ಸ್ರಷ್ಟಾ ಬ್ರಹ್ಮಾದಯೋ ದೇವಾಃ" ಎನ್ನುವ ಭಾರತಶ್ಲೋಕವನ್ನು ವ್ಯಾಖ್ಯಾನಿಸುತ್ತಾ ಬ್ರಹ್ಮಾದಿ ದೇವತೆ ಗಳನ್ನು ಸೃಷ್ಟಿಸುವುದೆಂದರೆ ಅವರಿಗೆ ಮುಕ್ತಿಯನ್ನು ಸೃಷ್ಟಿಸುವುದು ಎಂದು ವಿವರಿಸಿದ್ದಾರೆ.

ಗಾಯತ್ರೀಮಂತ್ರದಲ್ಲಿ ಶ್ರೀಕೃಷ್ಣನು ಪ್ರತಿಪಾದ್ಯನಾದುದರಿಂದಲೇ ಆತನು ಗೋವರ್ಧನ ಗಿರಿಯನ್ನು ಎತ್ತಿಹಿಡಿದು ತನ್ನವರನ್ನು ಸಂರಕ್ಷಿಸಿದಾಗ, ಮಳೆ ಸುರಿಸಿದ ಇಂದ್ರನು ಭಗ್ನದರ್ಪನಾಗಿ ಗಾಯತ್ರೀಮಂತ್ರದಿಂದ ಶ್ರೀಕೃಷ್ಣನನ್ನು ಸ್ತುತಿಸಿದ್ದಾನೆ.

**ತದ್ವೋ ದೇವಸ್ಯ ಸವಿತುರ್ವರೇಣ್ಯಂ ಭರ್ಗ ಉತ್ತಮಮ್ ।**
**ಸದಾ ಧೀಮಹಿ ತೇ ರೂಪಂ ಧಿಯೋ ಯೋ ನಃ ಪ್ರಭಾತಿ ಹಿ ।**

ಇದುವೆ ಇಂದ್ರನು ಶ್ರೀಕೃಷ್ಣನನ್ನು ಸ್ತುತಿಸಿದ ಗಾಯತ್ರೀಮಂತ್ರ.

*

## 'ಧಿಯಃ' ಶಬ್ದದ ಬಹುವಚನದ ಆಂತರ್ಯ

ಗಾಯತ್ರೀಮಂತ್ರದಲ್ಲಿ 'ಧಿಯೋ ಯೋ ನಃ ಪ್ರಚೋದಯಾತ್' ಎಂಬಲ್ಲಿಯ 'ಧಿಯಃ' ಶಬ್ದದ ಬಹುವಚನವು ಆದ್ಯರ್ಥಕವಾಗಿದ್ದು ಮೊದಲಾದ ಎಂಬ ಅರ್ಥವನ್ನು ನೀಡುವುದು. ಸಂಸ್ಕೃತದಲ್ಲಿ ಮೊದಲಾದ ಎಂಬ ಅರ್ಥದಲ್ಲೂ ಬಹುವಚನವನ್ನು ಬಳಸುವುದಿದೆ. 'ಕಡಾರಾಃ ಕರ್ಮಧಾರಯೇ' ಎಂಬ ಸೂತ್ರದಲ್ಲಿ ಕಡಾರ ಎಂಬ ಶಬ್ದದ ಮೇಲೆ ಕಡಾರವೇ ಮೊದಲಾದ ಶಬ್ದಗಳು ಎಂಬ ಅರ್ಥದಲ್ಲಿಯೇ ಬಹುವಚನವನ್ನು ಪ್ರಯೋಗಿಸಲಾಗಿದೆ ಎಂಬುದನ್ನು ಒಪ್ಪಲಾಗಿದೆ.

ಆದುದರಿಂದ ಗಾಯತ್ರಿಯ 'ಧಿಯಃ' ಶಬ್ದದ ಬಹುವಚನದಿಂದಾಗಿ ಬುದ್ಧಿಯೇ ಮುಂತಾದ ಇಂದ್ರಿಯಗಳನ್ನು ಎಂಬ ಅರ್ಥವು ಫಲಿಸುವುದು.

**''ಶ್ರೋತ್ರಾದೀನಿ ತು ಪಂಚೈವ ತಥಾ ವಾಗಾದಿ ಪಂಚಕಮ್ ।**
**ಮನೋಬುದ್ಧಿಸಹಾಯಾನಿ ದ್ವಾದಶೈವೇಂದ್ರಿಯಾಣಿ ತು ॥**

ಎಂಬುದಾಗಿ ಶ್ರೋತ್ರೇಂದ್ರಿಯವೇ ಮುಂತಾದ ಐದು ಜ್ಞಾನೇಂದ್ರಿಯಗಳೂ, ವಾಗಿಂದ್ರಿಯವೇ ಮುಂತಾದ ಐದು ಕರ್ಮೇಂದ್ರಿಯಗಳೂ, ಮನಸ್ಸು ಹಾಗೂ ಬುದ್ಧಿ ಇವುಗಳಿಂದ ಕೂಡಿ ಹನ್ನೆರಡು ಇಂದ್ರಿಯಗಳಾಗುವವೆಂದು ಬುದ್ಧಿಯನ್ನೂ ಇಂದ್ರಿಯ ಗಳಲ್ಲೊಂದನ್ನಾಗಿ ಪರಿಗಣಿಸಲ್ಪಟ್ಟಿರುವುದರಿಂದ, ಅಂತಹ ಬುದ್ಧಿಯನ್ನು ತಿಳಿಸುವ 'ಧೀ' ಶಬ್ದದ ಬಹುವಚನದಿಂದ ಉಳಿದ ಹನ್ನೊಂದು ಇಂದ್ರಿಯಗಳನ್ನು ಇಟ್ಟುಕೊಳ್ಳ ಬಹುದಾಗಿದೆ.

ಹೀಗೆ 'ಧಿಯಃ ಪ್ರಚೋದಯಾತ್' ಎಂದರೆ ಬುದ್ಧಿ ಹಾಗೂ ಮನಸ್ಸೇ ಮುಂತಾದ ಹನ್ನೊಂದು ಇಂದ್ರಿಯಗಳನ್ನು ಪ್ರೇರಿಸುವವನೆಂಬ ಅರ್ಥ ಸಿದ್ಧಿಸುವುದು.

— *ಶ್ರೀ ವಿದ್ಯೇಶತೀರ್ಥರು*

# ಗಾಯತ್ರಿಯಲ್ಲಿ ಲಕ್ಷ್ಮೀನಾರಾಯಣರು

— ಶ್ರೀ ವಿದ್ಯಾಮಾನ್ಯತೀರ್ಥರು.

ಗಾಯತ್ರಿಯಲ್ಲಿ ಮುಖ್ಯವಾಗಿ "ಧಿಯೋ ಯೋ ನಃ ಪ್ರಚೋದಯಾತ್" ನಮಗೆ ಸದ್ಬುದ್ಧಿಯನ್ನು ಪ್ರೇರಿಸಲಿ ಎಂದು ಪ್ರಾರ್ಥಿಸಿಕೊಳ್ಳುವುದಿದೆ. ಶ್ರೀಮನ್ನಾರಾಯಣನೇ ನಮ್ಮ ಬುದ್ಧಿಪ್ರೇರಕನೆಂದಮೇಲೆ ಅವನಲ್ಲೇ ನಮ್ಮ ಪ್ರಾರ್ಥನೆ ಸಲ್ಲಬೇಕು. ಅದಕ್ಕಾಗಿ ಅವನ ಉಲ್ಲೇಖವೂ ಗಾಯತ್ರಿಯಲ್ಲಿ ಇರುವುದು ಸಮುಚಿತ. ಗಾಯತ್ರಿಯ "ಧಿಯೋ ಯೋ ನಃ ಪ್ರಚೋದಯಾತ್" ಎಂಬಲ್ಲಿ ಇರುವ 'ಯಃ' ಶಬ್ದವು ಜ್ಞಾನಪ್ರದನಾದ ಲಕ್ಷ್ಮೀನಾರಾಯಣನನ್ನೇ ಪ್ರತಿಪಾದಿಸುತ್ತಿದೆ.

'ಈ ಸಹಿತಃ ಅಃ' ಎಂಬ ಅರ್ಥದಲ್ಲಿ ಈಕಾರ ಮತ್ತು ಅಕಾರಗಳು ಸೇರಿ ನಿಷ್ಪನ್ನವಾದ ಶಬ್ದ 'ಯಃ' ಎಂಬುದು. 'ಅಃ ಇತಿ ಬ್ರಹ್ಮ' ಎಂದು ಉಪನಿಷತ್ತು ಸಾರುವಂತೆ ಪೂರ್ಣನಾದ ನಾರಾಯಣನೇ 'ಅ' ಎನಿಸಿರುವನು. ಅಂತಹ ಅಕಾರವಾಚ್ಯನಾದ ಅವನ ಪತ್ನಿಯಾದುದರಿಂದಲೇ ಲಕ್ಷ್ಮೀದೇವಿಯು 'ಅಸ್ಯ ಇಯಂ ಈ' ಎಂದು 'ಈ' ಶಬ್ದವಾಚ್ಯಳಾಗಿರುವವಳು. ಆದುದರಿಂದ ಲಕ್ಷ್ಮೀವಾಚಕವಾದ ಈಕಾರ ಮತ್ತು ನಾರಾಯಣವಾಚಕವಾದ ಅಕಾರ ಸೇರಿ ನಿಷ್ಪನ್ನವಾಗುವ 'ಯಃ' ಶಬ್ದವು ಲಕ್ಷ್ಮೀನಾರಾಯಣನನ್ನು ಪ್ರತಿಪಾದಿಸುವುದು.

ಲಕ್ಷ್ಮೀದೇವಿ ಸಕಲ ವಾಙ್ಮನೋಭಿಮಾನಿನಿ. ಅಂತಹ ಲಕ್ಷ್ಮೀದೇವಿಯ ಮೂಲಕವೇ ಭಗವಂತನು ನಮ್ಮ ಬುದ್ಧಿಯನ್ನು ಪ್ರಚೋದಿಸುವನು. ಆದ್ದರಿಂದ ಬುದ್ಧಿಗಾಗಿ ಪ್ರಾರ್ಥನೆಯನ್ನು ಸಲ್ಲಿಸುವಾಗ ಆಕೆಯನ್ನು ಸ್ಮರಿಸಿಕೊಳ್ಳುವುದೂ ಅತ್ಯಾವಶ್ಯಕ. ಗಾಯತ್ರಿಯ 'ಯಃ' ಶಬ್ದವು ಲಕ್ಷ್ಮೀನಾರಾಯಣನನ್ನು ಪ್ರತಿಪಾದಿಸುವುದೆಂದು ಒಟ್ಟಿನಲ್ಲಿ ಭಗವದಧೀನಳಾಗಿ ಲಕ್ಷ್ಮೀದೇವಿಯನ್ನು ಸ್ಮರಿಸಿಕೊಂಡಂತಾಗುವುದು. **"ಗುಣಾಧಿಕ್ಯಂ ಯೇನ ಭವೇದ್ ವೇದಸ್ಯಾರ್ಥಃ ಸ ಏವ ಹಿ"** (ಋ.ಭಾ. ೧೧೨) ಯಾವ ಅರ್ಥದಿಂದಾಗಿ ಭಗವಂತನ ಗುಣಾಧಿಕ್ಯವನ್ನು ಹೇಳಿದಂತಾಗುವುದೋ ಅದೇ ವೇದದ ಅರ್ಥ ಎನ್ನುವ ಶ್ರೀಮದಾಚಾರ್ಯರಿಗೆ ಈ ಅರ್ಥ ಸಮ್ಮತವಾಗದಿರದು.

ಸಾಮಾನ್ಯವಾಗಿ ಗಾಯತ್ರಿಯಲ್ಲಿಯ 'ಯಃ' ಶಬ್ದವು ಸರ್ವನಾಮ ಶಬ್ದವೆಂದು ಇಟ್ಟುಕೊಂಡು 'ಯಾರು' ಎಂಬ ಅರ್ಥವನ್ನು ಹೇಳುವ ಪದ್ಧತಿ ಇದೆ. ಆದರೆ ಹಾಗೆ ಇಟ್ಟುಕೊಂಡಲ್ಲಿ 'ಯಃ' ಶಬ್ದದಿಂದ ಪ್ರಸ್ತಾಪಿಸಲ್ಪಟ್ಟದ್ದನ್ನು ಪರಾಮರ್ಶಿಸಿ ಅನ್ವಯವನ್ನು ಪೂರ್ಣಗೊಳಿಸಲು ತತ್ ಶಬ್ದದ ರೂಪವು ಅಲ್ಲಿರಬೇಕಿತ್ತು. ಗಾಯತ್ರಿಯ ಪ್ರಾರಂಭದಲ್ಲಿ 'ತತ್' ಎಂಬ ಶಬ್ದವೊಂದಿದೆ. ಆದರೆ

ಅದು 'ಯಃ' ಶಬ್ದದಿಂದ ಪ್ರಸ್ತಾವಿಸಲ್ಪಟ್ಟದ್ದನ್ನು ಪರಾಮರ್ಶಿಸುವಂತಹದ್ದಾಗಿದ್ದಲ್ಲಿ 'ಯಃ' ಎಂದು ಪುಲ್ಲಿಂಗದ ರೂಪವಿರುವಂತೆ, ತತ್ ಶಬ್ದದ ಪುಲ್ಲಿಂಗದ ರೂಪವೇ ಇರಬೇಕಿತ್ತು. ಹೊರತು 'ತತ್' ಎಂಬುದಾಗಿ ನಪುಂಸಕ ಲಿಂಗದ ರೂಪವು ಇರುವಂತಿಲ್ಲ.

ವಾಸ್ತವಿಕವಾಗಿ ಗಾಯತ್ರಿಯ 'ತತ್' ಶಬ್ದ ಸರ್ವನಾಮ ಅಲ್ಲ. 'ತನೋತಿ ವ್ಯಾಪ್ನೋತೀತಿ ತತ್' ಎಂಬುದಾಗಿ 'ತನು' ಧಾತುವಿನಿಂದ ನಿಷ್ಪನ್ನವಾದ ಶಬ್ದ ಅದು. ಭಗವಂತನಲ್ಲಿ ಗುಣವ್ಯಾಪ್ತಿಯನ್ನು ತಿಳಿಸುವಂತಹುದು ಎಂದು ಶ್ರೀಮಧ್ವಾಚಾರ್ಯರು ಸ್ಪಷ್ಟಪಡಿಸಿರುವರು.

ಆದ್ದರಿಂದ ಗಾಯತ್ರಿಯಲ್ಲಿಯ 'ಯಃ' ಶಬ್ದವು ಸರ್ವನಾಮವೆಂದು ಇಟ್ಟುಕೊಂಡು 'ಯಾರು' ಎಂದು ಅರ್ಥ ಹೇಳಿದರೆ, ಅದನ್ನು ಪರಾಮರ್ಶಿಸಿ ಅನ್ವಯವನ್ನು ಪೂರ್ಣಗೊಳಿಸುವ 'ತತ್' ಎಂಬ ಸರ್ವನಾಮ ಪದವಿಲ್ಲದ ಪ್ರಯುಕ್ತ ನ್ಯೂನತೆಯೇ ಬಂದೀತು! ಅದಕ್ಕಾಗಿ ಗಾಯತ್ರಿಯಲ್ಲಿಯ 'ಯಃ' ಶಬ್ದವು ಸರ್ವನಾಮ ಎಂದು ಹೇಳಬಾರದು. ಲಕ್ಷ್ಮೀನಾರಾಯಣನನ್ನು ಪ್ರತಿಪಾದಿಸುವಂತಹದ್ದೆಂದು ಒಪ್ಪಬೇಕು.

ಆದ್ದರಿಂದಲೇ ಗಾಯತ್ರಿಯ ಮೂಲಕ ಲಕ್ಷ್ಮೀನಾರಾಯಣರನ್ನು ಸ್ತುತಿಸಿ ಅವರಲ್ಲಿ ಸದ್ಬುದ್ಧಿಯನ್ನು ಪ್ರೇರಿಸುವಂತೆ ಪ್ರಾರ್ಥಿಸಿಕೊಳ್ಳಬೇಕು.

*

## ತಾಯಿಯನ್ನು ಮರೆಯಬಹುದೆ?

ನಮಗೆ ಭೌತಿಕಶರೀರವನ್ನು ಕೊಟ್ಟ ತಾಯಿ ಹೊರಗಿನ ಸೂರ್ಯನನ್ನಷ್ಟೇ ಕಾಣಬಲ್ಲ ಕಣ್ಣು ನೀಡಿರುವಳು. "ಯದಾದಿತ್ಯಗತಂ ತೇಜೋ ಜಗದ್ ಭಾಸಯತೇಽಖಿಲಮ್...... ತತ್ತೇಜೋ ವಿದ್ಧಿ ಮಾಮಕಮ್" ಎಂದು ಗೀತೆಯಲ್ಲಿ ಹೇಳಿರುವಂತೆ ಸೂರ್ಯನಿಗೂ ಬೆಳಕುನೀಡುವ ಸೂರ್ಯನಾರಾಯಣನನ್ನು ಪರಿಚಯಿಸಿಕೊಡುವವಳು ಗಾಯತ್ರೀಮಾತೆ.

ಉಪನಯನ ಸಂಸ್ಕಾರದಿಂದ ಆಧ್ಯಾತ್ಮಿಕ ಜನ್ಮ ಪಡೆಯುವುದರಲ್ಲಿ ಮಾತೃಸ್ಥಾನದಲ್ಲಿರುವ ಗಾಯತ್ರಿಯು ನಮ್ಮ ಸೃಷ್ಟ್ಯಾದಿಗಳಿಗೆಲ್ಲ ಕಾರಣನಾದ ಬುದ್ಧಿಪ್ರಚೋದಕನಾದ ನಮ್ಮ ನಿಜವಾದ ತಂದೆಯನ್ನು ಗುರುತಿಸಿಕೊಡುವಳು. ಆ ಮೂಲಕ ನಮ್ಮ ಸ್ವರೂಪಾತ್ಮಕವಾದ, ಶಾಶ್ವತವಾದ ಶರೀರವನ್ನು ಪಡೆಯುವಂತೆ ಮಾಡುವಳು.

ಅಶಾಶ್ವತವಾದ ಭೌತಿಕಶರೀರವನ್ನು ಕೊಟ್ಟ ತಾಯಿಯನ್ನೇ ಮರೆಯಬಾರದೆಂದು ಶಾಸ್ತ್ರ ಒತ್ತಿ ಹೇಳುತ್ತಿದೆ. ಹೀಗಿರುವಾಗ ಶಾಶ್ವತವಾದ, ಚಿದಾನಂದಾತ್ಮಕವಾದ ಶರೀರಕ್ಕೆ ಕಾರಣಳಾದ ಆಧ್ಯಾತ್ಮಿಕ ಮಾತೆ 'ಗಾಯತ್ರೀಮಾತೆ'ಯನ್ನು ಮರೆಯಬಹುದೇ?

— *ಶ್ರೀ ವಿಶ್ವೇಶತೀರ್ಥರು*

# ಮಂತ್ರಾರ್ಥಾನುಸಂಧಾನಪೂರ್ವಕ ಧ್ಯಾನ

—————————— ಸಗ್ರಿ ರಾಘವೇಂದ್ರ ಉಪಾಧ್ಯಾಯ

ಯಾವುದೇ ಮಂತ್ರವನ್ನು ಜಪಿಸುವ ಮುನ್ನ ಒಂದು ಧ್ಯಾನಶ್ಲೋಕವನ್ನು ಪಠಿಸಿ ಅದರಲ್ಲಿ ನಿರೂಪಿಸಿರುವಂತೆ ಭಗವದ್ರೂಪವನ್ನು ಧ್ಯಾನಿಸುತ್ತಾ ಮಂತ್ರವನ್ನು ಜಪಿಸಬೇಕೆಂಬುದು ಶಾಸ್ತ್ರನಿರ್ಣಯ. ಮಂತ್ರವನ್ನು ಜಪಿಸುವಾಗ ಆ ಮಂತ್ರಾರ್ಥವನ್ನು ಚಿಂತಿಸುತ್ತಿರಲೇಬೇಕು. 'ಮಾನಾತ್ ತ್ರಾಯತೇ ಇತಿ ಮಂತ್ರಃ' ಎಂಬುದಾಗಿ ತನ್ನ ಅರ್ಥದ ಅನುಸಂಧಾನವನ್ನು ತಂದುಕೊಡುವುದರ ಮೂಲಕ ಮಂತ್ರವು ತನ್ನನ್ನು ಜಪಿಸುವವನನ್ನು ರಕ್ಷಿಸುವುದರಿಂದಲೇ ಮಂತ್ರ ಎನಿಸಿರುವುದೆಂದ ಮೇಲೆ ಮಂತ್ರವನ್ನು ಜಪಿಸುವಾಗ ಮಂತ್ರದ ಅರ್ಥಾನುಸಂಧಾನ ಅತ್ಯಾವಶ್ಯಕ ಎಂಬುದು ಸ್ಪಷ್ಟ. ಆದರೆ ಏಕಕಾಲದಲ್ಲಿ ಧ್ಯಾನಶ್ಲೋಕಕ್ಕನುಗುಣವಾಗಿ ಧ್ಯಾನಿಸುವುದನ್ನೂ, ಮಂತ್ರಾರ್ಥದ ಅನುಸಂಧಾನ ನಡೆಸುವುದನ್ನೂ ಮನಸ್ಸು ನಡೆಸಲಾರದು. ಯಾಕೆಂದರೆ ಒಮ್ಮೆ ಒಂದು ಚಟುವಟಿಕೆಯನ್ನಷ್ಟೇ ನಿರ್ವಹಿಸಬಲ್ಲ ಸಾಮರ್ಥ್ಯವುಳ್ಳದ್ದು ನಮ್ಮ ಮನಸ್ಸು. ಹೀಗಿರುವಾಗ ಧ್ಯಾನವನ್ನು ಮಂತ್ರಾರ್ಥ ಅನುಸಂಧಾನವನ್ನು ಜೊತೆಗೆಯೇ ಹೇಗೆ ಮಾಡಲು ಸಾಧ್ಯ?

ಈ ಬಗ್ಗೆ ಕೆಲವು ಸಾಧಕರಲ್ಲಿ ವಿಚಾರಿಸಿದಾಗ ಅವರು ಮಂತ್ರ ಜಪಿಸುವ ಪ್ರಾರಂಭದಲ್ಲಿ ಧ್ಯಾನಶ್ಲೋಕದಲ್ಲಿ ಹೇಳಿರುವಂತೆ ಆ ರೂಪವನ್ನು ಧ್ಯಾನಿಸಿ, ಆ ರೂಪದಲ್ಲಿ ಮತ್ತೆ ಮಂತ್ರಾರ್ಥದ ಅನುಸಂಧಾನಮಾಡಿಕೊಳ್ಳಬೇಕೆಂದು ಸಮಾಧಾನ ನೀಡಿರುವರು. ಉದಾಹರಣೆಗೆ ಗಾಯತ್ರೀಮಂತ್ರ ಜಪಿಸುವ ಮುನ್ನ ಸೂರ್ಯಮಂಡಲದ ಮಧ್ಯದಲ್ಲಿರುವ ನಾರಾಯಣನನ್ನು ಧ್ಯಾನಿಸಿ, ಅಂತಹ ಗಾಯತ್ರಿ ನಾರಾಯಣ ಮಂತ್ರದ 'ತತ್' 'ಸವಿತುಃ' ಮುಂತಾದ ಶಬ್ದಗಳು ಸಾರುವಂತೆ ವ್ಯಾಪ್ತನಾಗಿರುವನು, ಸೃಷ್ಟಿಕರ್ತನಾಗಿರುವನು ಎಂದೆಲ್ಲ ಅರ್ಥಾನುಸಂಧಾನ ಮಾಡಬೇಕೆಂದು ಅವರ ಅಭಿಪ್ರಾಯ.

ಆದರೆ ಇದರಿಂದ ಧ್ಯಾನಶ್ಲೋಕ ನಿರೂಪಿಸುವಂತೆ ರೂಪವನ್ನು ಏಕಕಾಲದಲ್ಲಿ ಧ್ಯಾನಿಸುತ್ತಾ ಮಂತ್ರವನ್ನು ಜಪಿಸಿದಂತಾಗಲಾರದು. ಧ್ಯಾನ ಮತ್ತು ಮಂತ್ರಾರ್ಥ ಅನುಸಂಧಾನ ಒಂದೇ ಕಾಲದಲ್ಲಿ ನಡೆಸಬೇಕೆಂದರೆ ಧ್ಯಾನಶ್ಲೋಕದಲ್ಲಿ ಬಂದಿರುವ ವಿಶೇಷಾರ್ಥಗಳ ಅರ್ಥವನ್ನೂ, ಮಂತ್ರವನ್ನೂ ಪರಸ್ಪರ ಹೊಂದಿಸಿಕೊಂಡೆವೆಂದರೆ ಧ್ಯಾನ ಮತ್ತು ಮಂತ್ರಾರ್ಥಾನುಸಂಧಾನ ಏಕಕಾಲದಲ್ಲಿ ನಡೆಸಬಹುದಾಗಿದೆ. ಇದನ್ನು ಗಾಯತ್ರೀಮಂತ್ರದ ವಿಷಯದಲ್ಲಿ ಪರಿಶೀಲಿಸಬಹುದು.

ಗಾಯತ್ರೀಮಂತ್ರವನ್ನು ಜಪಿಸುವಾಗ ಯಾವ ರೂಪವನ್ನು ಧ್ಯಾನಿಸಬೇಕೆಂದು ತಿಳಿಸುವ ನೃಸಿಂಹಪುರಾಣದ ಶ್ಲೋಕವನ್ನು ಶ್ರೀಮದಾಚಾರ್ಯರು ಐತರೇಯ ಭಾಷ್ಯದಲ್ಲಿ (೨-೧-೧) ಉಲ್ಲೇಖಿಸಿರುವರು.

ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ
ನಾರಾಯಣಃ ಸರಸಿಜಾಸನಸನ್ನಿವಿಷ್ಟಃ ।
ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ
ಹಾರೀ ಹಿರಣ್ಮಯವಪುರ್ಧೃತಶಂಖಚಕ್ರಃ ॥

ಈ ಧ್ಯಾನಶ್ಲೋಕ ನಿರೂಪಿಸುತ್ತಿರುವ ಸವಿತೃನಾರಾಯಣ ಗಾಯತ್ರೀ ಮಂತ್ರದ ಯಾವ ಶಬ್ದದಿಂದ ಹೇಗೆ ಪ್ರತಿಪಾದ್ಯನಾಗಿರುವನೆಂಬುದನ್ನು ನೋಡೋಣ. ನೇರವಾಗಿ ಮಂತ್ರದ ಶಬ್ದ, ವಿಶೇಷಣದ ಅರ್ಥವನ್ನು ಹೇಳಲಾರದಾದರೂ ಪೋಷಕವಾಗಿಯಾಗಲಿ ಸಾಂಕೇತಿಕವಾಗಿಯಾಗಲಿ ಸೂಚಕವಾಗಿಯಾಗಲಿ ಮಂತ್ರದ ಘಟಕ ಶಬ್ದಗಳೂ ಧ್ಯಾನಶ್ಲೋಕದ ವಿಶೇಷಣಗಳೂ ಅನ್ಯೋನ್ಯವಾಗಿ ಅರ್ಥವನ್ನು ಬೋಧಿಸುವವು.

ಗಾಯತ್ರಿಯ 'ತತ್' ಶಬ್ದ ವ್ಯಾಪ್ತಿಯನ್ನು ತಿಳಿಸುವುದು. ಧ್ಯಾನಶ್ಲೋಕದ 'ಸವಿತೃಮಂಡಲಮಧ್ಯವರ್ತೀ' ಎಂಬ ವಿಶೇಷಣ, ತನ್ನ ಕಿರಣಗಳಿಂದ ಎಲ್ಲೆಡೆ ವ್ಯಾಪಿಸಿರುವ ಸೂರ್ಯನ ಮಧ್ಯದಲ್ಲಿದ್ದು ಅವನನ್ನು ಪ್ರೇರಿಸುವವನು ನಾರಾಯಣ ಎಂಬುದನ್ನು ತಿಳಿಸುತ್ತ ಸೂರ್ಯನಿಗೆ ವ್ಯಾಪಕತ್ವ ಗುಣವನ್ನು ಅನುಗ್ರಹಿಸಿರುವ ಭಗವಂತನು ಎಲ್ಲೆಡೆ ವ್ಯಾಪಿಸಿರುವುದು ಸುಸ್ಪಷ್ಟ ಎಂಬುದಾಗಿ ಗಾಯತ್ರಿಯ 'ತತ್' ಶಬ್ದದ ಅರ್ಥಕ್ಕೆ ಪುಷ್ಟಿ ನೀಡುವುದು. ಈ ಶಬ್ದವನ್ನು ಪಠಿಸುವಾಗ 'ಸವಿತೃಮಂಡಲಮಧ್ಯವರ್ತೀ' ವಿಶೇಷಣದ ಅರ್ಥವನ್ನೂ ವ್ಯಾಪ್ತಿಯನ್ನೂ ಅನುಸಂಧಾನಕ್ಕೆ ಬರುವಂತೆ ಮಾಡಿಕೊಳ್ಳಬೇಕು. 'ತತ್' ಶಬ್ದಕ್ಕೆ ಮುಖ್ಯಾರ್ಥ ಗುಣತಃ ವ್ಯಾಪ್ತಿ ಅನ್ನುವುದು. ಶ್ರೀಮದಾಚಾರ್ಯರು 'ಗುಣೈಸ್ತತಃ' ಎಂದೇ ಗಾಯತ್ರಿಯ 'ತತ್' ಶಬ್ದವನ್ನು ವ್ಯಾಖ್ಯಾನಿಸಿರುವರು. ಆದ್ದರಿಂದ 'ತತ್' ಶಬ್ದದ ಗುಣತಃ ವ್ಯಾಪ್ತಿ ಎಂಬ ಅರ್ಥವನ್ನು ಧ್ಯಾನಶ್ಲೋಕದ 'ನಾರಾಯಣ' ಎಂಬ ಶಬ್ದವು ಸೂಚಿಸುವುದು. 'ನಾರಾಃ' ಅಂದರೆ ಗುಣಗಳು. ಅವುಗಳಿಗೆ ಆಶ್ರಯನಾಗಿರುವುದರಿಂದಲೇ ಅವನು ನಾರಾಯಣ. ಆದುದರಿಂದ ಗಾಯತ್ರಿಯ 'ತತ್' ಶಬ್ದ ಪಠಿಸುವಾಗ ಧ್ಯಾನಶ್ಲೋಕದ 'ನಾರಾಯಣ' ವಿಶೇಷಣದ ಅನುಸಂಧಾನ ನಡೆಯಬೇಕು.

ಗಾಯತ್ರಿಯ ಎರಡನೆಯ ಶಬ್ದ 'ಸವಿತುಃ' –ಸೃಷ್ಟಿಕರ್ತೃತ್ವವನ್ನು ಹೇಳುವಂತಹದ್ದು.' 'ಪ್ರಸವಿತಾ' ಎಂದು ವ್ಯಾಖ್ಯಾನಿಸಿರುವರು ಶ್ರೀಮಧ್ವರು. ಧ್ಯಾನಶ್ಲೋಕದ 'ಸವಿತೃಮಂಡಲಮಧ್ಯವರ್ತೀ' ಎಂಬ ವಿಶೇಷಣ ಈ ಅರ್ಥಕ್ಕೂ ಪೋಷಕ. ಸೂರ್ಯ ಬೆಳಕು, ಮಳೆ, ಉಷ್ಣತೆಗಳನ್ನು ಒದಗಿಸುವುದರ ಮೂಲಕ ಸೃಷ್ಟಿಗೆ ಕಾರಣನಾಗಿರುವುದು ಎಲ್ಲರೂ ಒಪ್ಪುವಂತಹದ್ದು. ಅಂತಹ

ಸವಿತೃಮಂಡಲದ ಮಧ್ಯದಲ್ಲಿ ಅಂತರ್ಯಾಮಿಯಾಗಿರುವ ನಾರಾಯಣ ಸೂರ್ಯ ನಿಗಿಂತಲೂ ಹೆಚ್ಚಾಗಿ ಸೃಷ್ಟಿಕರ್ತ ಎನ್ನುವುದು ಒಪ್ಪಲೇಬೇಕು ತಾನೆ?

ಧ್ಯಾನಶ್ಲೋಕದ 'ಸರಸಿಜಾಸನಸನ್ನಿವಿಷ್ಟಃ' ಎಂಬ ವಿಶೇಷಣವೂ ಗಾಯತ್ರಿಯ 'ಸವಿತುಃ' ಶಬ್ದದ ಅರ್ಥಕ್ಕೆ ಪೋಷಕ. ಭಗವಂತನು ಕೂತಿರುವ ಕಮಲ ಸಾಧಾರಣವಾದುದಲ್ಲ. ಅದು 'ಭೂಃ' ಎನಿಸುವ ಲಕ್ಷ್ಮೀದೇವಿಯ ರೂಪಾತ್ಮಕ ವಾದುದು 'ಭೂರ್ನಾಮಿಕಾ ಪದ್ಮಮಭೂದ್ಧರೇರ್ಹಿ' (ಮ.ಭಾ.ತಾ.ನಿ. ೩–೭೬) ಎಂದಿರುವರು ಶ್ರೀಮಧ್ವರು. ಈ ಭೂದೇವಿ ರಜೋಗುಣಕ್ಕೆ ಮುಖ್ಯಾಭಿಮಾನಿನಿ ಎಂದೂ ವಿಶ್ಲೇಷಿಸಿರುವರು. 'ರಜಃಸ್ಥಾ ಭೂರ್ನಾಮಿಕಾ' ಎಂದು. ರಜೋಗುಣ ಸೃಷ್ಟಿಗೆ ಪೋಷಕ. ಅಂತಹ ಗುಣಕ್ಕೆ ಅಭಿಮಾನಿನಿಯಾದ ಭೂದೇವಿಯ ಸ್ವರೂಪಾತ್ಮಕವಾದ ಕಮಲದಲ್ಲಿ ಕೂತಿರುವುದೆಂದರೆ, 'ಸವಿತೃಮಂಡಲಮಧ್ಯ ವರ್ತೀ' ಎಂದಂತೆ. ಆ ಕಮಲದ ಒಳಗಿದ್ದು ಅದನ್ನು ಪ್ರೇರಿಸಿ ಅದರ ಚಟು ವಟಿಕೆಗಳನ್ನು ನಡೆಸುವುದೆಂದರ್ಥ. ಹೀಗೆ 'ಸರಸಿಜಾಸನ ಸನ್ನಿವಿಷ್ಟಃ' ಎಂಬ ವಿಶೇಷಣವು ಭಗವಂತನು ಭೂದೇವಿಯನ್ನು ಪ್ರೇರಿಸಿ ರಜೋಗುಣದ ಮೂಲಕ ಸೃಷ್ಟಿ ನಡೆಸುವನೆಂದು ಸೂಚಿಸುತ್ತ 'ಸವಿತುಃ' ಶಬ್ದಾರ್ಥದ ಅನುಸಂಧಾನಕ್ಕೆ ಪುಷ್ಟಿ ನೀಡುವುದು.

ಗಾಯತ್ರಿಯ 'ವರೇಣ್ಯಂ' ಶಬ್ದಕ್ಕೆ ಗುಣಗಳ ಆಧಿಕ್ಯಪ್ರಯುಕ್ತವಾಗಿ ಎಲ್ಲರಿಂದಲೂ ಆಶ್ರಯಿಸಲ್ಪಡುವವನು ಭಗವಂತನೆಂದರ್ಥ. **'ವರಣೀಯೋ ಗುಣೋನ್ನತೇಃ'** ಇದನ್ನು ಧ್ಯಾನಶ್ಲೋಕದ ನಾರಾಯಣಶಬ್ದ ಸ್ಪಷ್ಟವಾಗಿ ತಿಳಿಸು ವುದು. ನಾರಾಯಣ ಶಬ್ದಕ್ಕೆ ಗುಣಗಳಿಗೆ ಆಶ್ರಯ ಎಂದೂ, ನರರ ಸಮುದಾ ಯಕ್ಕೆ ಆಶ್ರಯ ಎಂದೂ, ನಾರಾ ಎನಿಸುವ ಲಕ್ಷ್ಮೀದೇವಿಗೂ ಆಶ್ರಯ ಎಂದೂ ಅರ್ಥ. ಹೀಗಾಗಿ ನಾರಾಯಣ ಶಬ್ದ ವರೇಣ್ಯಶಬ್ದದ ಗುಣೌನ್ನತ್ಯ ಅರ್ಥವನ್ನೂ ಸಕಲರಿಂದ ವರಣೀಯ ಎಂಬ ಅರ್ಥವನ್ನೂ ಅನುಸಂಧಾನ ಮಾಡಲು ಪೋಷಕ ವಾಗಬಲ್ಲುದು.

**'ಭಾರತಿಜ್ಞಾನರೂಪತ್ವಾತ್ ಭರ್ಗಃ'** ಎಂದು ಶ್ರೀಮದಾಚಾರ್ಯರು ವ್ಯಾಖ್ಯಾನಿಸಿರುವಂತೆ ಭರ್ಗಶಬ್ದಕ್ಕೆ ಪ್ರಕಾಶರೂಪಿ, ಸುಖರೂಪಿ ಹಾಗೂ ಜ್ಞಾನರೂಪಿ ಎಂದು ಅರ್ಥ. ಧ್ಯಾನಶ್ಲೋಕದ 'ಸವಿತೃಮಂಡಲಮಧ್ಯವರ್ತೀ' ಎಂಬ ವಿಶೇಷಣ ಭಗವಂತನ ಪ್ರಕಾಶರೂಪತ್ವವನ್ನು ಸಾಧಿಸಿದರೆ, 'ಹಿರಣ್ಮಯ ವಪುಃ' ವಿಶೇಷಣ ಸುಖಾತ್ಮಕತ್ವವನ್ನು ಸಮರ್ಥಿಸುವುದು. ಭಗವಂತನು ಚಿನ್ನದ ಬಣ್ಣದವನಾಗಿರುವುದರಿಂದಷ್ಟೇ 'ಹಿರಣ್ಮಯವಪುಃ' ಅಲ್ಲ. ಮತ್ತೆ 'ಆಪಾದನಖಾತ್ ಸರ್ವ ಏವಾನಂದಃ' ಎಂದು ಶ್ರುತಿ ಸಾರುವಂತೆ, ಅಡಿಯಿಂದ ಮುಡಿಯ ವರೆಗೆ ಆನಂದಸ್ವರೂಪಿಯಾಗಿರುವುದರಿಂದಲೂ 'ಹಿರಣ್ಮಯವಪುಃ' ಎಂಬುದಾಗಿ ಶ್ರೀಮದಾಚಾರ್ಯರು ಐತರೇಯಭಾಷ್ಯದಲ್ಲಿ (೧–೩–೭) ತಿಳಿಸಿರುವರು–
**"ಇಚ್ಛಾನಂದಪ್ರಭೂತತ್ವಾತ್ ಸ ಏವ ಚ ಹಿರಣ್ಮಯಃ"**

'ಸವಿತೃಮಂಡಲಮಧ್ಯವರ್ತೀ' ಎಂಬ ವಿಶೇಷಣವೇ ಸೂರ್ಯನು ಪ್ರಕಾಶ ಸ್ವರೂಪಿ ಆಗಿರುವಂತೆ 'ವಿಜ್ಞಾನರೋಚಿಷ್' ಆಗಿರುವ ಭಗವಂತನು ವಿಜ್ಞಾನ ಸ್ವರೂಪಿ ಆಗಿರುವನೆಂದೂ ಸೂಚಿಸಿಕೊಡಬಲ್ಲುದು.

ಗಾಯತ್ರಿಯ ದೇವಶಬ್ದಕ್ಕೆ ಪ್ರಕಾಶಿಸುವವನು, ಎಲ್ಲವನ್ನೂ ಜಯಿಸಿರುವವನು ಎಲ್ಲರಿಂದಲೂ ಸ್ತುತ್ಯನಾಗಿರುವವನು ಮುಂತಾದ ಅರ್ಥಗಳಿವೆ. '**ದ್ಯೋತನಾತ್ ವಿಜಯಾತ್ ಕಾಂತ್ಯಾ ಸ್ತುತ್ಯಾ ವ್ಯವಹೃತೇರಪಿ । ಗತ್ಯಾ ರತ್ಯಾ ಚ ದೇವಾಖ್ಯಮ್**' ಎಂದಿರುವರು ಶ್ರೀಮದಾಚಾರ್ಯರು. ಧ್ಯಾನಶ್ಲೋಕದ 'ಕೇಯೂರವಾನ್ ಮಕರ ಕುಂಡಲವಾನ್ ಕಿರೀಟೀ ಹಾರೀ ಹಿರಣ್ಮಯವಪುಃ' ಈ ವಿಶೇಷಣಗಳು ದೇವ ಶಬ್ದಾರ್ಥ ಅನುಸಂಧಾನಕ್ಕೆ ಪುಷ್ಟಿ ನೀಡಬಲ್ಲವು. ಕೇಯೂರ, ಮಕರಕುಂಡಲ, ಕಿರೀಟ ಹಾಗೂ ಹಾರ ಈ ಆಭರಣಗಳು ಮತ್ತು ಚಿನ್ನದ ಬಣ್ಣದ ಮೈ ಅವನ ದ್ಯುತಿಯನ್ನು ಸೂಚಿಸುವವು ತಾನೆ? ಅಂತೆಯೆ ಕಿರೀಟ ಜಯದ ಸಂಕೇತವೆನಿಸಿದ್ದು ಸಕಲ ರೀತಿಯ ಉತ್ಕರ್ಷರೂಪವಾದ ವಿಜಯ ಎಂಬ ಅರ್ಥದ ಹಿರಣ್ಮಯವಪುಃ ಎಂಬ ವಿಶೇಷಣ ದೇವಶಬ್ದದ ಕ್ರೀಡಿಸುತ್ತಿರುವವನೆಂಬ ಅರ್ಥವನ್ನೂ ಸೂಚಿಸಿ ಕೊಡಬಲ್ಲುದು.

'ಧೀಮಹಿ' ಶಬ್ದ ನಾವು ಧ್ಯಾನಿಸುತ್ತೇವೆ ಎಂಬ ಅರ್ಥವನ್ನಷ್ಟೇ ನೀಡದೆ ಹೀಗೆ ಎಲ್ಲರಿಂದಲೂ ಹೇಳಿಸಿಕೊಳ್ಳಲು ಯೋಗ್ಯನಾಗಿರುವವನು ಎಂಬುದಾಗಿ ಎಲ್ಲರಿಂದಲೂ ಧ್ಯೇಯ ಎಂಬ ಅರ್ಥವನ್ನು ನೀಡುವುದು. ಆಚಾರ್ಯರು '**ಧ್ಯೇಯೋಽಖಿಲೈರ್ಜನೈಃ**' ಎಂದರು. 'ಸದಾ' ಎಂಬ ವಿಶೇಷಣ ಇದನ್ನೇ ಸ್ಪಷ್ಟವಾಗಿಯೆ ಸಾರುತ್ತಿದೆ.

ಗಾಯತ್ರಿಯ 'ಧಿಯೋ ಯೋ ನಃ ಪ್ರಚೋದಯಾತ್'' ಎಂಬ ಭಾಗ ಭಗವಂತನು ಎಲ್ಲರ ಬುದ್ಧಿಪ್ರೇರಕ ಎಂಬ ಅರ್ಥವನ್ನು ತಿಳಿಸುವುದು. '**ಪ್ರೇರಕೋಽಶೇಷಬುದ್ಧೀನಾಮ್**'. ಇದನ್ನು 'ಸವಿತೃಮಂಡಲಮಧ್ಯವರ್ತೀ' ಎಂಬ ವಿಶೇಷಣ ಬೆಳಕು ನೀಡಿ ಜ್ಞಾನ ನೀಡುವಂತೆ ಭಗವಂತನೂ ಬುದ್ಧಿಪ್ರೇರಕ ಎಂದು ಸಾಮಾನ್ಯವಾಗಿ ಅನುಸಂಧಾನಕ್ಕೆ ಪುಷ್ಟಿ ನೀಡಿದರೆ, 'ಧೃತಶಂಖಚಕ್ರಃ' ಎಂಬ ಧ್ಯಾನಶ್ಲೋಕದ ವಿಶೇಷಣ ಸ್ಪಷ್ಟವಾಗಿ ಭಗವಂತನ ಬುದ್ಧಿಪ್ರೇರಕತ್ವವನ್ನು ಘೋಷಿಸುವುದು. ಧೃತಶಂಖಚಕ್ರ ಎಂದರೆ, ಶಂಖಚಕ್ರಗಳನ್ನೂ ಧರಿಸಿರುವವನೆಂದು ಇಷ್ಟೇ ಅರ್ಥ ಅಲ್ಲ. ತಮಸ್ಸಿಗೆ ಅಭಿಮಾನಿನಿ ದುರ್ಗಾದೇವಿ ಭಗವಂತನ ಚಕ್ರ '**ಪೂರ್ವಂ ಹರೇಶ್ಚಕ್ರಮಭೂದ್ಧಿ ದುರ್ಗಾ ತಮಃಸ್ಥಿತಾ**' (ಮ.ತಾ.ನಿ. ೩–೭೫) ಈ ದುರ್ಗಾದೇವಿಯೇ ತಮೋಗುಣಕ್ಕೂ ಅಭಿಮಾನಿ. ಆದುದರಿಂದ ಭಗವಂತನು ಚಕ್ರವನ್ನು ಧರಿಸಿರುವನೆಂದರೆ ಮುಖ್ಯವಾಗಿ ದುರ್ಗಾದೇವಿಯನ್ನು ಆಕೆಯ ನಿಯಂತ್ರಣದಲ್ಲಿರುವ ತಮೋಗುಣವನ್ನು ಧರಿಸಿಕೊಂಡಿರುವನೆಂದರ್ಥ. ಅಜ್ಞಾನಕ್ಕೆ ತಮೋಗುಣ ಕಾರಣವಾದುದರಿಂದ ಚಕ್ರಧಾರಕ ಎಂದಾಗ ತಮೋಗುಣಕ್ಕೂ ಆದರಿಂದ ಉಂಟಾಗುವ ಅಜ್ಞಾನಕ್ಕೂ ಧಾರಕನಾಗಿದ್ದು ಅದನ್ನು ಪರಿಹರಿಸುವ

ನೆಂದರ್ಥವಾಗುವುದು. ಹಾಗೆಯೇ ಭಗವಂತನ ಶಂಖ ಎಂದರೆ ಸತ್ವಗುಣಕ್ಕೆ ಅಭಿಮಾನಿನಿಯಾದ ಶ್ರೀ ಎನಿಸುವ ಲಕ್ಷ್ಮೀದೇವಿ. 'ಶ್ರೀರಿತಿ ಯಾಂ ವದಂತಿ । ಸತ್ತ್ವಾತ್ಮಿಕಾ ಶಂಖವಮ್ (ಮ.ಭಾ.ತಾ.ನಿ. ೩. ೭೬). ಆದ್ದರಿಂದ ಶಂಖಧಾರಕ ಎಂದರೆ ಶ್ರೀದೇವಿಗೆ ಆಕೆಯ ನಿಯಂತ್ರಣದಲ್ಲಿರುವ ಸತ್ವಗುಣಕ್ಕೆ ಅದರಿಂದ ಉಂಟಾಗುವ ಜ್ಞಾನಕ್ಕೂ ಧಾರಕನಾಗಿದ್ದು ಅದನ್ನು ನೀಡುವವನೆಂದು ಸಿದ್ಧಿಸುವುದು.

'ಧಿಯೋ ಯೋ ನಃ' ಎನ್ನುವಲ್ಲಿಯ 'ಯಃ' ಎಂಬ ಶಬ್ದ ಯತ್ ಶಬ್ದದ ರೂಪ ಅಲ್ಲ. ಮತ್ತೆ ಈ ಎಂಬ ಲಕ್ಷ್ಮಿಯಿಂದ ಯುಕ್ತವಾದ ಅ ಎನಿಸುವ ಭಗವಂತ (ಈನಾಮಿಕಯಾ ಯುಕ್ತಃ ಅನಾಮಕಃ ಯಃ) ಎಂದರ್ಥ. ಹೀಗೆ ಲಕ್ಷ್ಮೀದೇವಿಯಿಂದ ಯುಕ್ತನಾಗಿದ್ದು ಅವಳ ಮೂಲಕ ಬುದ್ಧಿಶಕ್ತಿಯ ಪ್ರಚೋದನೆ ಮಾಡುವುದನ್ನು 'ಧೃತಶಂಖಚಕ್ರಃ' ಎಂಬ ವಿಶೇಷಣ ಸೂಚಿಸುವುದು.

ಹೀಗೆ ಗಾಯತ್ರೀ ಮಂತ್ರಾರ್ಥಾನುಸಂಧಾನಕ್ಕೆ ಪೋಷಕವಾಗಿ ಧ್ಯಾನಶ್ಲೋಕ ನಿರೂಪಿಸಿದ ಧ್ಯಾನವನ್ನೂ ಧ್ಯಾನಕ್ಕೆ ಪೂರಕವಾಗುವಂತೆ ಮಂತ್ರಾರ್ಥಾನು ಸಂಧಾನವನ್ನೂ ಇದೇ ರೀತಿಯಾಗಿ ಇತರ ಮಂತ್ರಗಳ ಬಗ್ಗೆಯೂ ಪರಿಶೀಲಿಸ ಬಹುದಾಗಿದೆ.

*

## ಭಗವಂತನ ಪ್ರತೀಕ ಸೂರ್ಯದೇವ

ಸೂರ್ಯದೇವನಿಂದ ಅಭಿಮನ್ಯಮಾನವಾದ, ನಿಯಮಿಸಲ್ಪಡುವ ತೇಜೋಮಂಡಲ ವನ್ನು ನಾವು 'ಸೂರ್ಯ' ಎಂದು ಕರೆಯುತ್ತೇವೆ. ಸೂರ್ಯನ ಪ್ರತೀಕವೆನಿಸಿರುವ ಆ ತೇಜೋಮಂಡಲ ಅಮುಖ್ಯವಾಗಿ ಸೂರ್ಯ ಎನಿಸಿದರೂ ಮುಖ್ಯವಾಗಿ ಸೂರ್ಯ ಎನಿಸುವವನು ಸೂರ್ಯದೇವನೇ ಹೇಗೋ ಹಾಗೆಯೇ ಭಗವಂತನ ಪ್ರತೀಕವೆನಿಸಿದ ಸೂರ್ಯದೇವನಲ್ಲಿ ಅಮುಖ್ಯವಾಗಿ ಸವಿತೃ ಶಬ್ದದ ಬಳಕೆ ಇರುವುದಾದರೂ, ಅಂತಹ ಸವಿತೃ ಶಬ್ದದಿಂದ ಮುಖ್ಯ ಪ್ರತಿಪಾದ್ಯ ಶ್ರೀಹರಿಯೇ. ದೇವರ ಸನ್ನಿಧಾನವಿರುವ ಪ್ರತಿಮೆಯನ್ನು ದೇವರು ಎಂದು ಕರೆಯುವೆವಾದರೂ ದೇವರು ಎಂದರೆ ಮುಖ್ಯವಾಗಿ ಆ ಪ್ರತಿಮೆಯಲ್ಲಿ ಸನ್ನಿಹಿತನಾದ ಭಗವಂತನೇ ತಾನೇ?

ಶ್ರೀಮದಾಚಾರ್ಯರು ಬೃಹದಾರಣ್ಯಕ ಉಪನಿಷದ್ಭಾಷ್ಯದಲ್ಲಿ (೩-೧೯-೫) ಹೀಗೆ ಪ್ರತಿಪಾದಿಸಿರುವರು-

"........ಸವಿತಾ ಜನಾರ್ದನಃ ।
ತಸ್ಮಾದ್ಧಿ ಸೂಯತೇ ಸರ್ವಮ್ ।
ಆದಿತ್ಯಸ್ತತ್ ಪ್ರತೀಕತ್ವಾತ್ ಸವಿತೇತಿ ಪ್ರಕೀರ್ತಿತಃ ।
ಪ್ರತಿಮಾಯಾಂ ತು ತಚ್ಛಬ್ದೋ ಪ್ರಯೋಜ್ಯೋ ಹ್ಯುಪಚಾರತಃ ।"

— ಶ್ರೀ ವಿದ್ಯೇಶತೀರ್ಥರು

# 'ತತ್' ಇದರ ಅರ್ಥವ್ಯಾಪ್ತಿ

——————————— ಸಗ್ರಿ ರಾಘವೇಂದ್ರ ಉಪಾಧ್ಯಾಯ

ಬ್ರಹ್ಮಗಾಯತ್ರಿ ಪ್ರಾರಂಭವಾಗುವುದೇ 'ತತ್' ಶಬ್ದದಿಂದ. ಅಲ್ಲದೆ, 'ತ' ವರ್ಣದಿಂದ ಪ್ರಾರಂಭವಾಗುತ್ತಿರುವ ಗಾಯತ್ರಿಯು 'ಪ್ರಚೋದಯಾತ್' ಎಂಬುದಾಗಿ 'ತ್' ವರ್ಣದಿಂದ ಕೊನೆಗೊಳ್ಳುತ್ತಿದ್ದು, 'ತತ್' ಎಂಬ ಶಬ್ದವು ಇಡೀ ಬ್ರಹ್ಮಗಾಯತ್ರಿಯ 'ಅಬ್ರಿವಿಯೇಷನ್' ಸಂಗ್ರಾಹಕರೂಪದಲ್ಲಿ ಇರುವಂತಹದ್ದು.

ಹೀಗೆ ಎರಡು ದೃಷ್ಟಿಗಳಿಂದ ಪ್ರಾಶಸ್ತ್ಯಪಡೆದಿರುವ ಗಾಯತ್ರಿಯ 'ತತ್' ಶಬ್ದ ಎಷ್ಟೆಷ್ಟು ಅರ್ಥಗಳಲ್ಲಿ ತೆರೆದುಕೊಳ್ಳುವುದೆಂಬುದನ್ನು ಪರಿಶೀಲಿಸಬೇಕು.

### ಮೂರು ಬಗೆಯ ವ್ಯಾಪ್ತಿ:

'ಗುಣೈಸ್ತತಃ.....' ಎಂಬುದಾಗಿ ಶ್ರೀಮದಾಚಾರ್ಯರು ಋಗ್ಭಾಷ್ಯದಲ್ಲಿ ಗುಣಗಳಿಂದ ವ್ಯಾಪಿಸಿರುವವನು ಅಂದರೆ ಗುಣಪೂರ್ಣ ಎಂಬುದೇ ಗಾಯತ್ರಿಯ 'ತತ್' ಶಬ್ದದ ಅರ್ಥ ಎಂದು ತಿಳಿಸಿರುವರು. 'ತನೋತೀತಿ' (ತನುವಿಸ್ತಾರೇ) 'ತತ್' ಎಂದು ನಿಷ್ಪನ್ನವಾಗುವ ತತ್ ಶಬ್ದದಿಂದ ಕಾಲತಃ ವ್ಯಾಪ್ತಿ (ಅಂದರೆ ಎಲ್ಲ ಕಾಲದಲ್ಲೂ ಇರುವಿಕೆ) ದೇಶತಃ ವ್ಯಾಪ್ತಿ (ಅಂದರೆ ಎಲ್ಲೆಡೆ ಇರುವಿಕೆ) ಹಾಗೂ ಗುಣತಃ ವ್ಯಾಪ್ತಿ (ಎಲ್ಲ ಗುಣಗಳನ್ನೂ ಹೊಂದಿರುವಿಕೆ) ಈ ಮೂರು ಬಗೆಯ ವ್ಯಾಪ್ತಿ ಎಂಬ ಅರ್ಥವು ಹೊರಡುವುದು. ಆದರೆ ಈ ಮೂರು ಬಗೆಯ ವ್ಯಾಪ್ತಿಗಳಲ್ಲಿ 'ಗುಣತಃ ವ್ಯಾಪ್ತಿ'ಯೇ ಪ್ರಧಾನ, ಸಾಧಕನಿಂದ ಮುಖ್ಯವಾಗಿ ಅನುಸಂಧೇಯ ಹಾಗೂ ಉಳಿದ ಎರಡು ಬಗೆಯ ವ್ಯಾಪ್ತಿಗಳನ್ನೂ ನಿತ್ಯತ್ವ, ಸರ್ವಗತತ್ವಗಳೆಂಬ ಗುಣಗಳನ್ನಾಗಿ ತನ್ನ ಮಡಿಲಲ್ಲೇ ಸೇರಿಸಿಕೊಳ್ಳಬಲ್ಲದೆಂಬ ದೃಷ್ಟಿಯಿಂದ ಆಚಾರ್ಯರು 'ತತ್' ಶಬ್ದದ ಅರ್ಥ 'ಗುಣತಃ ವ್ಯಾಪ್ತಿ' ಎಂಬುದಷ್ಟನ್ನೇ ನಿರೂಪಿಸಿರುವರು. ಆಚಾರ್ಯರು ಹೇಳಿರುವ ಈ ಅರ್ಥದ ಜೊತೆಗೆ ಕಾಲತಃ ವ್ಯಾಪ್ತ ಅಂದರೆ ಎಲ್ಲ ಕಾಲದಲ್ಲೂ, ಸೂರ್ಯಮಂಡಲ, ಸೂರ್ಯ ಮುಂತಾದವುಗಳ ಸೃಷ್ಟಿಗಿಂತ ಮುಂಚೆಯೂ, ಅವುಗಳ ಸಂಹಾರದ ಬಳಿಕವೂ ಇರುವವನು ಎಂಬ ಅರ್ಥವನ್ನೂ ಚಿಂತಿಸಬಹುದು. ಹಾಗೆಯೇ 'ದೇಶತಃ ವ್ಯಾಪ್ತ' ಅಂದರೆ ಎಲ್ಲ ದೇಶದಲ್ಲೂ ಜಪಿಸುವ ನನ್ನಲ್ಲೂ, ಜಪದ ಪ್ರತೀಕವಾದ ಸೂರ್ಯಮಂಡಲದಲ್ಲೂ. ಅದರ ದೇವತೆಯಾದ ಸೂರ್ಯನಲ್ಲೂ, ಗಾಯತ್ರಿಯಲ್ಲಿ ಉಲ್ಲೇಖಗೊಂಡ ಸೃಷ್ಟಿ, ಪಾಲನೆ, ಚಾಲನೆ, ಬುದ್ಧಿಪ್ರೇರಣೆ ಮುಂತಾದ ಚಟುವಟಿಕೆಗಳನ್ನು ಅಮುಖ್ಯವಾಗಿ ನಡೆಸುತ್ತಿರುವ ಚತುರ್ಮುಖ, ತಂದೆ, ತಾಯಿ, ಗುರುಗಳು ಮುಂತಾದವರಲ್ಲೂ ವ್ಯಾಪಿಸಿಕೊಂಡಿರುವನೆಂದು ಚಿಂತಿಸಬಹುದು.

ಭಗವಂತನಲ್ಲಿರುವ 'ಗುಣತಃ ವ್ಯಾಪ್ತಿ'ಯನ್ನು ಚಿಂತಿಸುವಾಗ, ಅವನಲ್ಲಿ ತುಂಬಿ ತುಳುಕುತ್ತಿರುವ ಗುಣಗಳು –ಜ್ಞಾನ, ಆನಂದ, ಕಾರುಣ್ಯ ಮುಂತಾದ ಅನಂತ ಕಲ್ಯಾಣಗುಣಗಳು; ಅವೆಲ್ಲ ಅಪ್ರಾಕೃತಗಳಾಗಿದ್ದು ಅವನಂತೆಯೇ ಜ್ಞಾನಾನಂದಾತ್ಮಕಗಳಾದವು ಎಂಬುದನ್ನು ವಿವೇಚಿಸಿಕೊಳ್ಳಬೇಕು.

ಹಾಗೆಯೇ ಗುಣತಃ ವ್ಯಾಪ್ತಿ ಎಂದರೆ ಅನಂತಗುಣಗಳಿಂದ ಪರಿಪೂರ್ಣ ತೆಯ ಜೊತೆಗೆ ಆ ಅನಂತಗುಣಗಳಲ್ಲಿ ಒಂದೊಂದೂ ಪರಿಪೂರ್ಣತೆಯನ್ನು ಹೊಂದಿದೆ ಎಂದು ಸಿದ್ಧಿಸುವುದು. ಶ್ರೀವಾದಿರಾಜಸ್ವಾಮಿಗಳು ತಮ್ಮ 'ಗುರ್ವರ್ಥ ದೀಪಿಕಾ'ದಲ್ಲಿ ಹೀಗೆ ಸಾಧಿಸಿರುವರು: "ಉದೀರ್ಣಪದಮಹಿಮ್ನೈವ ಗುಣಾನಾ ಮಪಿ ಪೂರ್ಣತ್ವಸಿದ್ಧೇರ್ನ ಗುಣೇಷು ಪೂರ್ಣತಾ ಪೃಥಗುಕ್ತಾ । ಮಣಿಕನಕಾದಿ ಧನಪೂರ್ಣತಾ ಹಿ ಮಣಿಕನಕಾದಿಧನಾನಾಮಪಿ ಪ್ರತ್ಯೇಕಂ ಬಹುತ್ವೇ ಸತ್ಯೇವ ಸ್ಯಾತ್ ॥"

ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯದ ಮಂಗಳಾಚರಣೆಯ ಪದ್ಯದಲ್ಲಿ "ಗುಣೈಃ ಸರ್ವೈರುದೀರ್ಣಮ್" ಎಂಬುದಾಗಿ ಗುಣಪೂರ್ಣತ್ವವನ್ನು ತಿಳಿಸಿದ್ದ ರಿಂದಲೇ ಆ ಗುಣಗಳಲ್ಲಿಯ ಪ್ರತ್ಯೇಕ ಗುಣದಲ್ಲೂ ಪೂರ್ಣತ್ವ ಸಿದ್ಧವಾಗು ವುದರಿಂದ ಅದನ್ನು ಪ್ರತ್ಯೇಕ ಹೇಳಬೇಕಿಲ್ಲ. ಮಣಿಕನಕ ಮುಂತಾದ ಧನದಿಂದ ಪೂರ್ಣತೆ ಎಂದರೆ ಮಣಿಕನಕ ಮುಂತಾದವು ಪ್ರತ್ಯೇಕವಾಗಿಯೂ ಪೂರ್ಣ ವಾಗಿದ್ದಿರಲೇಬೇಕು ತಾನೆ?

ವಾದಿರಾಜಶ್ರೀಗಳು ಗುಣಪೂರ್ಣತ್ವದ ಬಗ್ಗೆ ನೀಡಿರುವ ಈ ಸಮರ್ಥನೆ ಯನ್ನು ಗುಣವ್ಯಾಪ್ತತ್ವದ ವಿಷಯದಲ್ಲೂ ಇಟ್ಟುಕೊಂಡು ಭಗವಂತನು ಗುಣ ಗಳಿಂದ ನಿಬಿಡನಾಗಿರುವಂತೆ, ಆ ಗುಣಗಳಲ್ಲಿ ಒಂದೊಂದೂ ಪರಿಪೂರ್ಣ ವಾಗಿಯೇ ಅವನಲ್ಲಿ ಇದೆ ಎಂಬುದಾಗಿ ಅನುಸಂಧಾನ ಮಾಡಿಕೊಳ್ಳಬೇಕು.

## ಇತರ ಅರ್ಥವನ್ನೂ ಹೇಳಬಹುದು:

ಹೀಗೆ ತತ್ ಶಬ್ದಕ್ಕೆ ವ್ಯಾಪ್ತಿ ಎಂಬ ಅರ್ಥದ ಜೊತೆಗೆ ಭಗವಂತನ ವ್ಯಕ್ತಿತ್ವಕ್ಕೆ ಒಗ್ಗುವ ಇನ್ನೂ ಕೆಲವು ಅರ್ಥಗಳನ್ನು ಅನುಸಂಧಾನ ಮಾಡಬಹುದು. ಒಂದು ಶಬ್ದಕ್ಕೆ ಒಂದು ಅರ್ಥವನ್ನು ತಿಳಿಸಿಕೊಡುವ ಆಚಾರ್ಯರ ಆಂತರ್ಯ ಆ ಒಂದು ಅರ್ಥವನ್ನು ಬಿಡದೆ, ಉಳಿದ ಶಾಸ್ತ್ರೀಯ ಅರ್ಥಗಳನ್ನೂ ಚಿಂತಿಸಬಹುದೆಂಬುದೇ ಹೊರತು ಅದೊಂದೇ ಅರ್ಥವನ್ನು ಇಟ್ಟುಕೊಳ್ಳಬೇಕೆಂದಲ್ಲ.

ಉಪನಿಷತ್ತುಗಳ ಕೆಲವು ಮಾತುಗಳನ್ನು ಬೇರೆಬೇರೆ ಕಡೆ ಬೇರೆಬೇರೆ ಅರ್ಥಗಳಲ್ಲಿ ಉಲ್ಲೇಖಿಸಿರುವ ಆಚಾರ್ಯರಿಂದ ತಮ್ಮ ಈ ಆಂತರ್ಯವು ಸೂಚಿತವಾಗಿದೆ.

ಅಲ್ಲದೆ,

"ಗುಣಾಧಿಕ್ಯಂ ಯೇನ ಭವೇದ್ ವೇದಸ್ಯಾರ್ಥಃ ಸ ಏವ ಹಿ" ಎಂಬುದಾಗಿ ಶ್ರೀಮದಾಚಾರ್ಯರು ಋಗ್ಭಾಷ್ಯದಲ್ಲಿ (೨–೧೧೨) ವೇದವನ್ನು ಹೇಗೆ ಅರ್ಥೈಸಬೇಕೆಂಬುದರ ಬಗ್ಗೆ ನೀಡಿರುವ 'ಶಬ್ದಕ್ಕೆ ಯಾವ ಅರ್ಥವನ್ನು ಇಟ್ಟುಕೊಂಡಾಗ ಭಗವಂತನಲ್ಲಿ ಗುಣಾತಿಶಯವು ಸಿದ್ಧಿಸುವುದೋ ಅದೇ ಆ ಶಬ್ದದ ಅರ್ಥ' ಎಂಬ ಸೂತ್ರದ ವ್ಯಾಪ್ತಿ ಭಗವಂತನ ಗುಣಾಧಿಕ್ಯಕ್ಕೆ ಪೂರಕವಾಗುವಂತೆ ಅರ್ಥಮಾಡಬೇಕೆಂಬಂತೆಯೇ, ಗುಣಾಧಿಕ್ಯಕ್ಕೆ ಪೂರಕವಾಗುವಂತೆ ಆಯಾ ಶಬ್ದದಿಂದ ಬೇರೆ ಬೇರೆ ಅರ್ಥವನ್ನೂ ಹೊರಡಿಸಬಹುದು ಎಂಬ ವಿಚಾರಕ್ಕೂ ಚಾಚುವುದು. ಆದುದರಿಂದ ಆಚಾರ್ಯರ ಪ್ರಕಾರ ವೈದಿಕಶಬ್ದಗಳಿಂದ ಭಗವಂತನ ಗುಣಾನುಸಂಧಾನಕ್ಕೆ ಪೋಷಕವಾಗುವಂತೆ ಅನೇಕಾರ್ಥಗಳನ್ನು ಹೊರಡಿಸಬಹುದು. ಆದುದರಿಂದ ಆಚಾರ್ಯರೇ ಬೇರೆಡೆ ಹೇಳಿರುವ ತತ್ ಶಬ್ದದ ಅರ್ಥವನ್ನು ಚಿಂತಿಸಬಹುದು.

## ವೇದದಿಂದ ಮುಖ್ಯ ಪ್ರತಿಪಾದ್ಯ:

ವೇದದಲ್ಲಿ ಕರ್ಮ, ಧರ್ಮ, ದೇವತೆಗಳು ಇವರೆಲ್ಲ ಪ್ರತಿಪಾದ್ಯರು. ಆದರೆ ಇವರೆಲ್ಲ ಅಮುಖ್ಯವಾಗಿಯಷ್ಟೇ ಪ್ರತಿಪಾದ್ಯರು. ಭಗವಂತನಾದರೂ ವೇದದಿಂದ ಮುಖ್ಯ ಪ್ರತಿಪಾದ್ಯನು. ಆದುದರಿಂದಲೇ ವೇದಪ್ರಸಿದ್ಧನಾದ ಅವನು ಪ್ರಸಿದ್ಧಾರ್ಥ ಸೂಚಕವಾದ 'ತತ್' ಶಬ್ದದಿಂದ ಪ್ರತಿಪಾದ್ಯನಾಗಿರುವನೆಂದು ಋಗ್ವೇದಖಿಲ (ಗೀ. ಭಾ. ೧೭–೨೩) ತಿಳಿಸಿದೆ–

'.........ವೇದೋಕ್ತರೂಪೋಽನುಪಚಾರತಶ್ಚ

..........ಓಂ ತತ್ ಸತ್ ಇತ್ಯೇನಮಥೋ ವದಂತಿ"

ಗಾಯತ್ರಿಯನ್ನು ಜಪಿಸುವಾಗ 'ತತ್' ಶಬ್ದದ ಈ ಅರ್ಥಾನುಸಂಧಾನ ತುಂಬ ಔಚಿತ್ಯಪೂರ್ಣ. ಯಾಕೆಂದರೆ ಭಗವಂತನು ವೇದದ ಗಾಯತ್ರಿಯಿಂದ ಪ್ರತಿಪಾದ್ಯನು. ಹಾಗೆಯೇ ಗಾಯತ್ರಿಯಿಂದ ಅಭಿವ್ಯಕ್ತವಾಗುವ ಪುರುಷಸೂಕ್ತ, ಅದರಿಂದ ಅಭಿವ್ಯಕ್ತವಾಗುವ ವೇದಾದಿ ಸಕಲಶಾಸ್ತ್ರಪ್ರಪಂಚದಿಂದಲೂ ಪ್ರತಿಪಾದ್ಯ ಎಂಬುದಾಗಿ ಗಾಯತ್ರ್ಯರ್ಥದ ವ್ಯಾಪಕತೆಯನ್ನೂ ಚಿಂತಿಸಬಹುದು. ಜೊತೆಗೆ ಸಕಲಶಾಸ್ತ್ರಪ್ರತಿಪಾದ್ಯನಾಗಿರುವುದರಿಂದಲೇ ಅನಂತಗುಣಪರಿಪೂರ್ಣ ಎಂಬುದಾಗಿ ತತ್ ಶಬ್ದದ ಗುಣವ್ಯಾಪ್ತಿ ಅರ್ಥಕ್ಕೆ ಪೂರಕವಾಗಿಯೂ ಚಿಂತಿಸಬಹುದಾಗಿದೆ.

## ಹಿಂದೆ ಇದ್ದಂತೆಯೇ ಈಗಲೂ ಇರುವವನು:

ಶಾಶ್ವತ ಎನಿಸುವ ಭಗವಂತನು ಯಾವಾಗಲೂ ಒಂದೇ ರೀತಿಯಾಗಿ ಇರುವವನು. 'ಅಚ್ಯುತ' ಎನಿಸುವ ಅವನ ಸರ್ವೋತ್ತಮತ್ವ ಪದವಿಗೂ ಎಂದೂ ಚ್ಯುತಿ ಇಲ್ಲ. ಹೀಗೆ ಹಿಂದೆ, ಈಗ, ಮುಂದೆ –ಎಂದೆಂದೂ ಒಂದೇ ರೀತಿಯಾಗಿ ಇರುವವನೆಂಬುದನ್ನು ತತ್ ಶಬ್ದದ ಅರ್ಥವಾಗಿ ಪ್ರಮಾಣವೊಂದು (ಬೃ ಉ. ಭಾ. ೬–೪–೫) ತಿಳಿಸುತ್ತದೆ–

"ಯಥಾಪೂರ್ವಂ ತಥೇದಾನೀಮಿತಿ ವಿಷ್ಣುಸ್ತದುಚ್ಯತೇ"

ಗಾಯತ್ರೀಮಂತ್ರವನ್ನು ಜಪಿಸುವಾಗ ಗಾಯತ್ರಿಯಲ್ಲಿ ಉಲ್ಲೇಖಿಸಿರುವ ಭಗವಂತನ ಜಗತ್ಸ್ರಷ್ಟೃತ್ವ, ಮುಂತಾದ ಮಹಿಮೆಗಳು ಯಾವುದೋ ಒಂದು ಯುಗಕ್ಕೋ, ಕಲ್ಪಕ್ಕೋ ಸೀಮಿತಗಳಾಗಿರದೆ, 'ಪೂರ್ವದಲ್ಲಿ ಇದ್ದಂತೆಯೇ ಇಂದೂ ಇದ್ದಾನೆ' ಎಂದು ಎಂದೆಂದೂ ಅನುಸಂಧಾನಮಾಡಬಹುದಾದಂತೆ ಶಾಶ್ವತವಾದವುಗಳು ಎಂಬ ಅನುಸಂಧಾನವನ್ನು ತಂದುಕೊಳ್ಳಬಹುದಾಗಿದೆ.

"...... ಯತ್ ತತ್ ಪದಮನುತ್ತಮಮ್" –ಎಂಬುದಾಗಿ ವಿಷ್ಣುಸಹಸ್ರನಾಮದಲ್ಲೂ ೭೩೦ನೇ ನಾಮವಾಗಿ ಪಠಿತವಾಗಿರುವ 'ತತ್' ಶಬ್ದವನ್ನು ಇನ್ನೂ ಅನೇಕಾರ್ಥಗಳಲ್ಲಿ ಚಿಂತಿಸಿ, ಜಪಿಸಬಹುದಾಗಿದೆ.

*

## ಹತ್ತವತಾರದ ದೇವ

ಗಾಯತ್ರೀಮಂತ್ರದಲ್ಲಿಯ ಹತ್ತುಪದಗಳು ಮತ್ಸ್ಯಾದಿ ಹತ್ತು ಅವತಾರಗಳನ್ನು ಕ್ರಮವಾಗಿ ತಿಳಿಸುತ್ತವೆ. ಗಾಯತ್ರೀಮಂತ್ರದಲ್ಲಿಯ ದೇವ ಶಬ್ದಕ್ಕೂ ಹತ್ತು ಅರ್ಥವನ್ನು ವೈಯಾಕರಣರು ಗುರುತಿಸಿದ್ದಾರೆ.

**'ದಿವು ಕ್ರೀಡಾವಿಜಿಗೀಷಾ ವ್ಯವಹಾರದ್ಯುತಿಸ್ತುತಿ ಮೋದಮದ ಸ್ವಪ್ನಕಾಂತಿಗತಿಷು'**

ಇದೂ ಹತ್ತವತಾರವನ್ನು ತಿಳಿಸಿದೆ.

೧. ಪ್ರಳಯ ಜಲಧಿಯಲ್ಲಿ ಕ್ರೀಡೆ ಮಾಡಿದವ ಮತ್ಸ್ಯ.
೨. ಆದಿದೈತ್ಯ ಹಿರಣ್ಯಾಕ್ಷನನ್ನು ಗೆದ್ದವ ವರಾಹ.
೩. ಬಲಿಯಲ್ಲಿ ಮೂರು ಹೆಜ್ಜೆಯ ವ್ಯವಹಾರ ಮಾಡಿದವ ವಾಮನ.
೪. ಚರಾಚರ ಪ್ರಪಂಚವನ್ನೆ ಅವತಾರಕಾಲದಲ್ಲಿ ಬೆಳಗಿಸಿದವ ನೃಸಿಂಹ.
೫. ಇಂದಿಗೂ ಸರ್ವರಿಂದ ಸ್ತುತಿಸಲ್ಪಡುವವ ರಾಮ.
೬. ಮಥನ ಕಾಲದಲ್ಲಿ ಆನಂದ ಉಕ್ಕಿ ನಿದ್ದೆಹೋದವ ಕೂರ್ಮ.
೭. ಮದಭರಿತ ಕ್ಷತ್ರಿಯರ ಮದ ಅಡಗಿಸಿದ ರೂಪ ಪರಶುರಾಮ.
೮. ಜಗತ್ತನ್ನೆ ಇಲ್ಲವೆನ್ನುವಂತೆ ಸ್ವಪ್ನಸದೃಶವನ್ನಾಗಿಸಿದವ ಬುದ್ಧ.
೯. ಸುಖದ ಸೆಲೆ ಎಂಬ ಹೆಸರೆತ್ತಿ ಎಲ್ಲರನ್ನೂ ತನ್ನೆಡೆಗೆ ಸೆಳೆವ ಕಾಂತಿಯುಳ್ಳವ ಕೃಷ್ಣ.
೧೦. ಅಖಂಡ ಭೂಮಂಡಲವನ್ನು ಸಂಚರಿಸಿ ಯುಗಾವಸಾನಗೈಯುವ ಕಲ್ಕಿ.

— *ಉಡುಪಿ ರಾಮನಾಥ ಆಚಾರ್ಯ*

# ಸವಿತೃ ಶಬ್ದದ ಅರ್ಥವಿಸ್ತಾರ

ಸಗ್ರಿ ರಾಘವೇಂದ್ರ ಉಪಾಧ್ಯಾಯ

ಗಾಯತ್ರೀಮಂತ್ರದ ಎರಡನೇ ಶಬ್ದ 'ಸವಿತುಃ'. "ಗುಣೈಸ್ತತಃ ಪ್ರಸವಿತಾ...." ಎಂಬುದಾಗಿ ಶ್ರೀಮದಾಚಾರ್ಯರು 'ಪ್ರ' ಎಂಬ ಉಪಸರ್ಗದಿಂದ ಕೂಡಿದ 'ಸವಿತಾ' ಎಂಬ ಶಬ್ದದಿಂದಲೇ ಚೆನ್ನಾಗಿ ಸೃಷ್ಟಿಮಾಡುವವನು ಎಂಬ ಅರ್ಥ ಹೊರಡುವಂತೆ ವ್ಯಾಖ್ಯಾನಿಸಿರುವರು.

ಭಗವಂತನು ನಡೆಸುವ ಸೃಷ್ಟಿಯ ವೈವಿಧ್ಯವನ್ನು ವಿಶ್ಲೇಷಿಸಿಕೊಂಡಾಗಷ್ಟೇ ಅವನಿಂದ ನಡೆಯುವ ಸೃಷ್ಟಿಯ ಪ್ರಕರ್ಷವನ್ನು, ಮೇಲುಗಾರಿಕೆಯನ್ನು ಅನು ಸಂಧಾನ ಮಾಡಬಹುದು.

## ಮೂರು ಬಗೆಯ ಸೃಷ್ಟಿ:

ಭಾಗವತದ ಮಂಗಳಪದ್ಯದಲ್ಲಿ ಉಲ್ಲೇಖಗೊಂಡಿರುವಂತೆ ಭಗವಂತನಿಂದ ನಡೆಯುವ ಸೃಷ್ಟಿ ಮೂರು ಬಗೆಯದು.

ಭಗವಂತನ (ರೂಪಗಳ) ಸೃಷ್ಟಿ –ಮೊದಲನೆಯ ಬಗೆಯದು. ಒಂದು ದೀಪದಿಂದ ಮತ್ತೊಂದು ದೀಪ ಹಚ್ಚಿಕೊಳ್ಳುವಂತೆ ಭಗವಂತನ ಮೂಲರೂಪ ದಿಂದಲೇ ಬೇರೆ ಬೇರೆ ವಸ್ತುಗಳ, ವ್ಯಕ್ತಿಗಳ ಅಂತರ್ಯಾಮಿರೂಪಗಳಾಗಿ, ನಿಯಾಮಕರೂಪಗಳಾಗಿ, ಅವತಾರರೂಪಗಳಾಗಿ ಕಾಣಿಸಿಕೊಳ್ಳುವ ಭಗವಂತನ ಸ್ವಸೃಷ್ಟಿ. ಚೇತನರಾದ ಜೀವರ ಸೃಷ್ಟಿ –ಎರಡನೇ ಬಗೆಯ ಸೃಷ್ಟಿ, ಸ್ವರೂಪತಃ ನಿತ್ಯರಾದ ಜೀವರಿಗೆ ಪಾಂಚಭೌತಿಕಶರೀರದ ಸಂಬಂಧವನ್ನು ಹಚ್ಚುವ ಈ ಸೃಷ್ಟಿ ನೀರಿನಲ್ಲಿ ಪ್ರತಿಬಿಂಬ ಕಾಣಿಸುವಂತೆ ನಡೆಯುವಂತಹದ್ದು.

ಮಡಕೆ ಮುಂತಾದ ಜಡಪದಾರ್ಥಗಳ ಸೃಷ್ಟಿ ಮೂರನೇ ಬಗೆಯ ಸೃಷ್ಟಿ. ಕುಂಬಾರ ಮಡಕೆಯನ್ನು ನಿರ್ಮಿಸುವಂತೆ ಭೂಮಿಯೇ ಮುಂತಾದ ಪಂಚಭೂತಗಳಿಂದ ಬೇರೆ ಬೇರೆ ಜಡಪದಾರ್ಥಗಳನ್ನು ನಿರ್ಮಿಸುವನು.

ಶ್ರೀವಾದಿರಾಜಸ್ವಾಮಿಗಳು ತಮ್ಮ 'ಭಾವ ಪ್ರಕಾಶಿಕಾ'ದಲ್ಲಿ ಈ ಮೂರು ಬಗೆಯ ಸೃಷ್ಟಿಗಳನ್ನೇ ಶುದ್ಧಸೃಷ್ಟಿ, ಮಿಶ್ರಸೃಷ್ಟಿ, ಕೇವಲಸೃಷ್ಟಿ ಎಂದು ಕರೆದಿರುವರು. ಜೊತೆಗೆ 'ಪರಾಧೀನ ವಿಶೇಷವಾಪ್ತಿ'ರೂಪದ ಮತ್ತೊಂದು ಬಗೆಯ ಸೃಷ್ಟಿಯನ್ನು ಉಲ್ಲೇಖಿಸಿರುವರು. ಲಕ್ಷ್ಮೀದೇವಿಯೇ ಮುಂತಾದವರು ಒಳಗಾಗುವ ಸೃಷ್ಟಿ ಈ ಬಗೆಯದೆಂದು ತಿಳಿಸುವ ಶ್ರೀವಾದಿರಾಜರು, ಭಗವಂತನ ಆದೇಶದಿಂದ ಪ್ರಕೃತಿ ಸ್ವಾಮಿತ್ವ ಮುಂತಾದ ಧರ್ಮವಿಶೇಷಾವಾಪ್ತಿಯೇ ಲಕ್ಷ್ಮೀದೇವಿ ಹೊಂದುವ ಸೃಷ್ಟಿ ಎಂದು ತೋರಿಸಿಕೊಟ್ಟಿರುವರು.

**ದೇಹದ ಸೃಷ್ಟಿ:**

ಜೀವರಾದ ನಮ್ಮ ಸೃಷ್ಟಿ ಎಂದರೆ ಪಾಂಚಭೌತಿಕಶರೀರದ ಸಂಬಂಧವನ್ನು ನಮಗೆ ಹಚ್ಚುವುದು. ಪಾಂಚಭೌತಿಕಶರೀರದ ಸೃಷ್ಟಿಯಲ್ಲೂ ಅವನ ಪಾತ್ರವನ್ನು ವಿಶ್ಲೇಷಿಸಿಕೊಳ್ಳಬೇಕು. ನಾವು ತಿಳಿದಂತೆ ನಮ್ಮ ಶರೀರದ ನಿರ್ಮಾಣ ನಮ್ಮ ತಾಯಿಯಿಂದ ನಡೆಯುವಂತಹದ್ದು. ಆದರೆ ನಮ್ಮ ಶರೀರದ ನಿರ್ಮಾಣ ನಮ್ಮ ತಾಯಿಯ ಗರ್ಭದಲ್ಲಿ ನಡೆಯುವಂತಹದ್ದಾದರೂ, ಆ ನಿರ್ಮಾಣವನ್ನು ನಡೆಸುವಂತಹನು ಪರಮಾತ್ಮನೇ. ಪರಮಾತ್ಮನು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ರೂಪಗಳಿಂದ ತಾಯಿಯ ಗರ್ಭದಲ್ಲಿ ಶಿಶುವಿನ ಶರೀರರಚನೆ ಆಗಿ ಹೊರಬರಲು ಬೇಕಾದ ಕಾರ್ಯಗಳನ್ನೆಲ್ಲ ನೆರವೇರಿಸುವನು.

**ಯೋನಿಕ್ಲೃಪ್ತಿರ್ವಾಸುದೇವಾತ್ ರೂಪಂ ಸಂಕರ್ಷಣಾತ್ ಭವೇತ್ ।**
**ಆಸೇಕಕರ್ಮ ಪ್ರದ್ಯುಮ್ನಾದ್ ಅನಿರುದ್ಧಾಚ್ಚ ಧಾರಣಮ್ ॥**

ಎಂಬುದಾಗಿ ಛಾಂದೋಗ್ಯೋಪನಿಷದ್ಭಾಷ್ಯದಲ್ಲಿ (೨-೧-೯) ತಿಳಿಸಿರುವಂತೆ ಭಗವಂತನು ತನ್ನ ವಾಸುದೇವರೂಪದಿಂದ ತಾಯಿಯಲ್ಲಿ ಗರ್ಭವನ್ನು ರಚಿಸಿದರೆ, ಸಂಕರ್ಷಣರೂಪದಿಂದ ಗರ್ಭದಲ್ಲಿ ಮಗುವಿನ ರೂಪದ ನಿರ್ಮಾಣ ವನ್ನು ನಡೆಸುವನು. ಪ್ರದ್ಯುಮ್ನರೂಪದಿಂದ ಗರ್ಭದೊಳಗೆ ಜೀವಬೀಜವನ್ನಿಡುವನು. ಅನಿರುದ್ಧರೂಪದಿಂದ ಗರ್ಭದಲ್ಲಿರುವಾಗ ಮಗುವಿನ ಧಾರಣ-ಪೋಷಣಗಳನ್ನು ನಡೆಸುವನು. ಹೀಗೆ ಜೀವರ ಪಾಂಚ ಭೌತಿಕಶರೀರನಿರ್ಮಾಣ ಭಗವಂತನಿಂದಲೇ ನಡೆಯುವುದು. ಹೀಗೆ 'ಪ್ರಾಣಿ ಪ್ರಸವೇ' 'ಹೆರುವುದು' ಎಂಬ ಅರ್ಥದಲ್ಲಿಯೇ ಇರುವ 'ಷೂಙ್' ಧಾತುವಿ ನಿಂದ ನಿಷ್ಪನ್ನವಾಗಿರುವ ಸವಿತೃ ಶಬ್ದದ ಮೂಲಭೂತವಾದ ಹೆರುವುದು ಎಂಬ ಅರ್ಥವೂ ಪರಮಾತ್ಮನಲ್ಲಿ ಚೆನ್ನಾಗಿ ಹೊಂದಿಕೊಳ್ಳುವುದನ್ನು ಅನುಸಂಧಾನ ಮಾಡಿಕೊಳ್ಳಬೇಕು.

**ಸ್ವಾಪ್ನಪದಾರ್ಥಗಳ ಸೃಷ್ಟಿ:**

ಬ್ರಹ್ಮಸೂತ್ರದ ಸಂಧ್ಯಾಧಿಕರಣದಲ್ಲಿ ಸಿದ್ಧಾಂತಿಸಿರುವಂತೆ ಜೀವರ ಸಂಸ್ಕಾರಗಳನ್ನು ಪರಿಣಾಮಕಾರಣವನ್ನಾಗಿ ಬಳಸಿಕೊಂಡು ಆಯಾ ಜೀವರ ಪ್ರಾರಬ್ಧ ಕರ್ಮಾನುಸಾರವಾಗಿ ಸ್ವೇಚ್ಛೆಯಿಂದ ಬೇರೆಬೇರೆ ಸ್ವಾಪ್ನಪದಾರ್ಥಗಳನ್ನು ನಿರ್ಮಿಸುವವನೂ ಭಗವಂತನು. ಆದುದರಿಂದ ಗಾಯತ್ರಿಯ ಸವಿತೃಶಬ್ದದ ಜಪದ ಅವಧಿಯಲ್ಲಿ ಅವನ ಸ್ವಾಪ್ನಪದಾರ್ಥಗಳ ಸೃಷ್ಟಿಯ ವೈಭವವನ್ನೂ ಅನುಸಂಧಾನ ಮಾಡಬೇಕು.

**ಮುಕ್ತಿಸ್ರಷ್ಟೃತ್ವದ ವರೆಗೆ:**

ಹೀಗೆ ಭಗವಂತನ ಸ್ರಷ್ಟೃತ್ವ ಎಂದರೆ ಸಂಸಾರಾವಸ್ಥೆಯ ಬೇರೆ ಬೇರೆ ಪದಾರ್ಥಗಳ ಸೃಷ್ಟಿಮಾತ್ರವಾಗಿರದೆ, ಮೋಕ್ಷಾವಸ್ಥೆಯ ಹೊಂದಿಸುವಿಕೆಯಲ್ಲಿಯ ವರೆಗೂ ಚಾಚಿದೆ. ಶಾಸ್ತ್ರದಲ್ಲಿ **"ಸೃಷ್ಟಾ ಬ್ರಹ್ಮಾದಯೋ ದೇವಾಃ.........."**

ಎಂಬುದಾಗಿ ಬ್ರಹ್ಮಾದಿಗಳ ಸೃಷ್ಟಿ ಭಗವಂತನಿಂದ ನಡೆದಿದೆ ಎಂಬ ಮಾತು ಹೊರಟಿರುವುದು ಬ್ರಹ್ಮಾದಿಗಳಿಗೆ ಮೋಕ್ಷವನ್ನು ಹೊಂದಿಸಿಕೊಟ್ಟವನು ಎಂಬ ಅಭಿಪ್ರಾಯದಲ್ಲಿ ಎಂದು ಶ್ರೀಮದಾಚಾರ್ಯರು (ಮ.ಭಾ.ತಾ.ನಿ. ೨-೬೪) ವ್ಯಾಖ್ಯಾನಿಸಿರುವರು-

"ಸ್ರಷ್ಟೃತ್ವಂ ದೇವಾನಾಂ ಮುಕ್ತಿಸ್ರಷ್ಟೃತ್ವಮುಚ್ಯತೇ ನಾನ್ಯತ್"

ಗಾಯತ್ರಿಯಲ್ಲಿ ಭಗವಂತನು ಮುಕ್ತಿ ನೀಡುವವನೆಂಬುದನ್ನು ಸ್ಪಷ್ಟವಾಗಿ ತಿಳಿಸುವ ಮತ್ತೊಂದು ಶಬ್ದ ಇಲ್ಲದಿರುವುದರಿಂದ 'ಸವಿತೃ' ಶಬ್ದದಿಂದಲೇ ದೇವತೆಗಳೇ ಮುಂತಾದ ಸಾತ್ವಿಕರಿಗೆ ಮೋಕ್ಷವನ್ನೂ ಸೃಷ್ಟಿಸುವವನು ಎಂಬ ಅರ್ಥವನ್ನೂ ಅನುಸಂಧಾನಮಾಡಬಹುದು.

ಹೀಗೆ ಗಾಯತ್ರಿಯ 'ಸವಿತೃ' ಪದವು ಸೃಷ್ಟಿ ಎಂಬ ಅರ್ಥದಲ್ಲಿಯೇ ತುಂಬ ಗಾಢವಾಗಿಯೂ, ಬಹಳ ವಿಸ್ತಾರವಾಗಿಯೂ ತೆರೆದುಕೊಳ್ಳಬಲ್ಲದು.

*

## 'ಪಿತೇತ್ಯೇವ ಚ ಮಂತ್ರದಮ್'

'ಅಜ್ಞಂ ಚ ಬಾಲಮಿತ್ಯಾಹುಃ ಪಿತೇತ್ಯೇವ ಚ ಮಂತ್ರದಮ್' ಎಂಬುದಾಗಿ ಮನುಸ್ಮೃತಿಕಾರನು ತಂದೆಯಾದವನು ತನ್ನ ಮಗುವಿಗೆ ಮಂತ್ರೋಪದೇಶ ನೀಡಲು ತಿಳಿದರೆ ಮಾತ್ರ 'ಪಿತಾ' ಎಂದು ಕರೆಸಿಕೊಳ್ಳಲು ಅರ್ಹನಾಗುವನು. ಒಂದೊಮ್ಮೆ ಅವನಿಗೆ ಉಪದೇಶನೀಡಲು ತಿಳಿಯದಿದ್ದಲ್ಲಿ ಅವನು 'ಬಾಲ' ಎಂದು ಟೀಕಿಸಲ್ಪಡುತ್ತಾನೆ.

ಆದ್ದರಿಂದ ತಂದೆಯಾದವನು ತಾನು ನಿಜವಾದ ತಂದೆಯೆನಿಸಬೇಕಾದರೆ ತನ್ನ ಮಗನಿಗೆ ಸರಿಯಾಗಿ ಮಂತ್ರೋಪದೇಶ ನೀಡಬೇಕು.

*— ಶ್ರೀ ವಿದ್ಯೇಶತೀರ್ಥರು*

** ** **

## ರಘುನಾಥತೀರ್ಥರ ಆಶಯ

**ಋಷಿಚ್ಛಂದೋದೈವತಾನಿ ಬ್ರಾಹ್ಮಣಾರ್ಥಂ ಸ್ವರಾದ್ಯಪಿ ।**
**ಅವಿದಿತ್ವಾ ಪ್ರಯುಂಜಾನೋ ಮಂತ್ರಕಂಟಕ ಉಚ್ಯತೇ ॥**
**ಸ್ವರೋ ವರ್ಣೋऽಕ್ಷರಂ ಮಂತ್ರೋ ವಿನಿಯೋಗೋऽರ್ಥ ಏವ ಚ ।**
**ಮಂತ್ರಂ ಜಿಜ್ಞಾಸಮಾನೇನ ವೇದಿತವ್ಯಂ ಪದೇಪದೇ ॥**

'ಮಂತ್ರಾರ್ಥ ಅರಿಯದವ ಶತ್ರು, ಮಂತ್ರ ಬಯಸುವವ ಅರ್ಥವನ್ನೂ ಅರಿಯಬೇಕು'.

*— ಸಂಗ್ರಹ: ಗೋವಿಂದದಾಸ*

# 'ವರೇಣ್ಯಂ' 'ಭರ್ಗಃ' ಶಬ್ದಗಳಿಂದ ಉಪಾಸನೆ

— ಸಗ್ರಿ ರಾಘವೇಂದ್ರ ಉಪಾಧ್ಯಾಯ

ಗಾಯತ್ರೀಮಂತ್ರದ ಉಪಾಸನೆಗೆ ಮುಖ್ಯಾಧಿಕಾರಿ ಚತುರ್ಮುಖ. ಆದುದರಿಂದ ಗಾಯತ್ರೀಜಪದ ಮುಖ್ಯಫಲ ಅವನಿಗೆ. ಉಳಿದವರಿಗೆ ಅವರವರ ಯೋಗ್ಯತಾನುಗುಣವಾಗಿ ಗಾಯತ್ರೀಜಪದಿಂದ ಫಲ ದೊರಕುವುದು.

ಸಕಲ ಪಾಪಗಳ ಅಲೇಪ, ವಿಶೇಷವಾಗಿ ಬೇರೆ ಬೇರೆ ದಾನಸ್ವೀಕಾರ ಪ್ರಯುಕ್ತ ಸಂಭವಿಸುವ ಪಾಪಗಳ ಪರಿಹಾರ ಹಾಗೂ ಅವರವರ ಯೋಗ್ಯತಾನುಸಾರ ಮುಕ್ತಿ – ಇವು ಗಾಯತ್ರೀಮಂತ್ರದ ಉಪಾಸನೆಯಿಂದ ಉಳಿದವರು ಹೊಂದಬಹುದಾದ ಫಲಗಳೆಂದು 'ಗಾಯತ್ರೀಸಂಹಿತೆ' (ಬೃ.ಉ.ಭಾಷ್ಯ) ತಿಳಿಸಿದೆ–

**ಅಲೇಪಂ ಸರ್ವಪಾಪೇಭ್ಯೋ ವಿಶೇಷೇಣ ಪ್ರತಿಗ್ರಹಾತ್ ।**
**ತದ್ಯೋಗ್ಯಾಂ ಮುಕ್ತಿಮನ್ಯೇಷಾಂ ಯಥಾಯೋಗ್ಯಮುಪಾಸಿತಃ ॥**

ಗಾಯತ್ರಿಯ ಉಪಾಸನೆಯಿಂದ ಫಲ ದೊರಕುವುದೆಂದರೆ, ಆ ಉಪಾಸನೆಯಿಂದ ಸಂತುಷ್ಟನಾಗುವ ಭಗವಂತನು ನೀಡುವನೆಂದೇ ಅರ್ಥ. ಆದರೆ ಭಗವಂತನು ತನ್ನ ಯಾವ ಗುಣವನ್ನು ಉಲ್ಲೇಖಿಸಿ, ಉಪಾಸನೆ ನಡೆಸಲಾಗಿದೆಯೋ ಅಂತಹ ಉಪಾಸನೆಗನುಗುಣವಾಗಿ ಆಯಾ ಗುಣವನ್ನೇ ಅನುಗ್ರಹಿಸುವ ಸ್ವಭಾವದವನು: "ತಂ ಯಥಾಯಥಾ ಉಪಾಸತೇ ತದೇವ ಭವತಿ".

ಪ್ರಕೃತ ಗಾಯತ್ರಿಯಲ್ಲಿಯೂ 'ಭರ್ಗ' ಹಾಗೂ 'ವರೇಣ್ಯ' ಎಂಬ ಶಬ್ದಗಳ ಅರ್ಥದ ಉಪಾಸನೆಯಿಂದಾಗಿ ಪಾಪಪರಿಹಾರಕತ್ವಾದಿ ಫಲಗಳು ದೊರೆಯಬಲ್ಲವು.

## 'ಭರ್ಗಃ' ಶಬ್ದಾರ್ಥ:

"**ಭಾರತಿಜ್ಞಾನರೂಪತ್ವಾದ್ ಭರ್ಗಃ...**" ಎಂಬುದಾಗಿ ಋಗ್ಭಾಷ್ಯದಲ್ಲಿ ಶ್ರೀಮದಾಚಾರ್ಯರು ಪ್ರಕಾಶರೂಪಿ, ಸುಖರೂಪಿ, ಜ್ಞಾನರೂಪಿ ಎಂಬುದು 'ಭರ್ಗ' ಶಬ್ದಾರ್ಥ ಎಂದು ತಿಳಿಸಿರುವರು.

"**ಸ ಏವ ಭರ್ಗಶಬ್ದಾರ್ಥಃ...**" ಎಂಬ ಅನುವ್ಯಾಖ್ಯಾನದ ಮಾತನ್ನು ವ್ಯಾಖ್ಯಾನಿಸುವಾಗ ಶ್ರೀಮನ್ನ್ಯಾಯಸುಧಾದಲ್ಲಿ "**ಭರಣಗಮನಯೋಗಾದಿತಿ ಶೇಷಃ**" ಎಂಬುದಾಗಿ ಪೋಷಣೆ ಹಾಗೂ ಚಾಲನೆ ನೀಡುವುದರಿಂದ ಭಗವಂತನು ಭರ್ಗ ಎನಿಸುವನೆಂದು ತಿಳಿಸಲಾಗಿದೆ.

**ತಜ್ಜ್ಯೋತಿಃ ಪರಮಂ ಬ್ರಹ್ಮ ಭರ್ಗಸ್ತೇಜೋ ಯತಃ ಸ್ಮೃತಮ್ ।**
**ಭಾ ದೀಪ್ತಾವಿತಿ ರೂಪಂ ಹಿ ಭ್ರಸ್ಜ ಪಾಕೇಽಥ ತತ್ ಸ್ಮೃತಮ್ ॥**

ಎಂಬುದಾಗಿ ಅಗ್ನಿಪುರಾಣದಲ್ಲಿ ತಿಳಿಸಲಾದಂತೆ ತುಂಬ ಬೆಳಗುವಂತಹದ್ದು (ಭಾತೀತಿ–ಭಾದೀಪ್ತೌ) ಒಣಗಿಸುವಂತಹದ್ದು, ಅಥವಾ ಸುಡುವಂತಹದ್ದು (ಭೃಜ್ಜತೀತಿ–ಭ್ರಸ್ಜ ಪಾಕೇ) ಎಂಬ ಅರ್ಥದಲ್ಲಿ ತೇಜಸ್ಸು ಭರ್ಗ ಎನಿಸಿದೆ. ಅಂತಹ ತೇಜಃಸ್ವರೂಪಿ ಪರಮಾತ್ಮ ಭರ್ಗಃ ಎನಿಸುವನು.

ಸುಟ್ಟುಹಾಕುವವನು ಎಂಬ ಅರ್ಥದಲ್ಲಿ ಭರ್ಗ ಶಬ್ದ ವಾಚ್ಯನನ್ನಾಗಿ ಭಗವಂತನನ್ನು ಉಪಾಸಿಸಿದರೆ, ಅವನು ನಮ್ಮ ಬೇರೆ ಬೇರೆ ಬಗೆಯ ಪಾಪಗಳನ್ನು, ಅವುಗಳಿಗೆ ಪ್ರಯೋಜಕಗಳಾದ ಕಾಮ–ಕ್ರೋಧ ಮುಂತಾದ ದೋಷಗಳನ್ನು, ಅವುಗಳನ್ನು ನಿಯಂತ್ರಿಸುತ್ತಿರುವ ಕಾಲನೇಮಿ ಮುಂತಾದ ಆಸುರೀಶಕ್ತಿಗಳನ್ನು ಸುಟ್ಟುಹಾಕುವನು. ಆ ಮೂಲಕ ನಮ್ಮನ್ನು ಪವಿತ್ರರನ್ನಾಗಿ ಮಾಡುವನು. ಭರ್ಗಶಬ್ದದಿಂದ ಭರಣಗಮನಕರ್ತೃ ಎಂದು ಉಪಾಸಿಸಿದಲ್ಲಿ ನಮಗೆ ಪೋಷಣೆ ನೀಡುವನು. ಬರೇ ಐಹಿಕವಾದುದಲ್ಲ, ನಮ್ಮ ಸ್ವರೂಪಾತ್ಮಕ ಗಳಾದ ಜ್ಞಾನಾನಂದಾದಿ ಸದ್ಗುಣಗಳು ಪ್ರಕೃತಿಯ ಆವರಣದಿಂದ ದೂರವಾಗಿ ಪುಷ್ಟಗಳಾಗುವಂತೆ ಅನುಗ್ರಹಿಸುವನು. ಈ ಬಗೆಯ ಪೋಷಣೆಯನ್ನು ಪಡೆದು ಕೊಳ್ಳಲು ಬೇಕಾದ ಶಾಸ್ತ್ರಶ್ರವಣಾದಿ ಚಟುವಟಿಕೆಗಳನ್ನು ನಾವು ನಡೆಸುವಂತೆ ನಮಗೆ ಬೇಕಾದ ಚಟುವಟಿಕೆಗಳನ್ನೂ ನೀಡುವನು. ಇದೇ ಭರ್ಗ ಶಬ್ದದ ಅರ್ಥ. ಭರ್ಗ ಶಬ್ದದಿಂದ ಹೊಳೆಯುತ್ತಿರುವವನು, ಪ್ರಕಾಶಸ್ವರೂಪಿ, ಕ್ರೀಡಾ ಸ್ವರೂಪಿ, ಜ್ಞಾನಸ್ವರೂಪಿ ಎಂದು ಉಪಾಸಿಸಿದಲ್ಲಿ ಉಪಾಸಕನಿಗೆ ಅಂತಹ ಪ್ರಕಾಶಸ್ವರೂಪ ತ್ವಾದಿ ಗುಣಗಳು ಸಿದ್ಧಿಸುವ ಮೋಕ್ಷಾವಸ್ಥೆಯನ್ನೂ, ಅಲ್ಲಿ ಪ್ರಕಾಶಾದಿಗಳನ್ನೂ ಅನುಗ್ರಹಿಸುವನು.

## 'ವರೇಣ್ಯ' ಶಬ್ದದ ಅರ್ಥ:

"........ವರಣೀಯೋ ಗುಣೋನ್ನತೇಃ" –ಎಂಬುದಾಗಿ ಶ್ರೀಮದಾಚಾರ್ಯರು ಋಗ್ಭಾಷ್ಯದಲ್ಲಿ ಗುಣಾಧಿಕ್ಯಪ್ರಯುಕ್ತ ಎಲ್ಲರಿಂದಲೂ ವರಣೀಯ, ಭಜನೀಯ –ಸೇವಿಸಲು ಯೋಗ್ಯನಾದವನು ಎಂಬ ಅರ್ಥವನ್ನು ತಿಳಿಸಿರುವರು.

"ವರೇಣ್ಯಂ ಸರ್ವತೇಜೋಭ್ಯಃ ಶ್ರೇಷ್ಠಂ ವೈ ಪರಮಂ ಪದಮ್"

ಎಂದು ಅಗ್ನಿಪುರಾಣದಲ್ಲಿ ಹೇಳಿರುವಂತೆ ಉಳಿದೆಲ್ಲ ತೇಜಸ್ಸುಗಳಿಗಿಂತಲೂ ಉತ್ತಮವಾದುದು ಎಂಬ ಅರ್ಥದಲ್ಲಿ ವರೇಣ್ಯ ಶಬ್ದವನ್ನು ವ್ಯಾಖ್ಯಾನಿಸಿದ್ದಿದೆ. ಹೀಗೆ ವರೇಣ್ಯ ಶಬ್ದಕ್ಕೆ ಶ್ರೇಷ್ಠನಾದವನು; ಆದುದರಿಂದಲೇ ಪ್ರತಿಯೊಬ್ಬನಿಂದಲೂ ಭಜನೀಯನಾದವನು ಎಂಬ ಅರ್ಥವು ಫಲಿಸುವುದು.

ಈ ಎರಡು ಅರ್ಥಗಳ ಹಿನ್ನೆಲೆಯಲ್ಲಿ 'ವರೇಣ್ಯ' ಶಬ್ದದ ಜಪಾದಿಗಳನ್ನು ನಡೆಸಿದಲ್ಲಿ, ಅದರ ಫಲವಾಗಿ ಜಾಪಕನೂ ತನ್ನ ಬಂಧುಗಳಲ್ಲೆಲ್ಲ ಶ್ರೇಷ್ಠನೆನಿಸು ವನು ಹಾಗೂ ಅಂತಹ ಶ್ರೇಷ್ಠತೆಯಿಂದಲೇ ಎಲ್ಲರಿಂದಲೂ ವರಣೀಯ, ಸೇವಿಸಲ್ಪಡುವವನಾಗುವನು. ಈ ಗುಣಗಳು ವಿಶೇಷವಾಗಿ ಇರುವ ಮೋಕ್ಷ ವನ್ನೂ, ಮೋಕ್ಷದಲ್ಲಿ ಈ ಗುಣಗಳನ್ನೂ ಹೊಂದುವನು. *

## ಸ್ಪಷ್ಟವಾದ ಅರ್ಥ

'ಜಯ' ಎನ್ನುವುದು ಮಹಾಭಾರತದ ಹೆಸರು. ಈ ಹೆಸರನ್ನು ಸಾಂಖ್ಯಿಕವಾಗಿ ಪರಿವರ್ತಿಸಿ ನೋಡಿದರೆ ಗ್ರಂಥದ ಹಲವು ಮುಖಗಳ ಸ್ಪಷ್ಟ ಚಿತ್ರಣ ದೊರೆಯುವುದು. ಜಯ ಎಂದರೆ ಹದಿನೆಂಟು (ಜ=೮, ಯ=೧). ಹದಿನೆಂಟಕ್ಕೆ ಸಂಬಂಧಿಸಿದಂತೆ ಮಹಾಭಾರತವನ್ನು ಬಹಳ ರೀತಿಯಲ್ಲಿ ನೋಡಬಹುದು. ಇದರಂತೆ ಗಾಯತ್ರೀಮಂತ್ರದ ಪದಗಳಲ್ಲೂ ಅರ್ಥಸ್ಪಷ್ಟತೆಯಲ್ಲಿ ಔಚಿತ್ಯವನ್ನು ಕಾಣಬಹುದಾಗಿದೆ.

'ತತ್' ಎಂದರೆ ಗುಣಪೂರ್ಣ ಎಂದರ್ಥ. ಪ್ರಧಾನಗುಣಗಳನ್ನು ಆರು ಎಂಬುದಾಗಿ ಭಗವಚ್ಛಬ್ದದ ನೆಲೆಯಲ್ಲಿ ಪುರಾಣಗಳು ತಿಳಿಸಿವೆ. ತತ್ ಎಂದರೆ ಸಂಖ್ಯೆಯಲ್ಲಿ ೬.

'ಸವಿತೃ' ಶಬ್ದ ಸೃಷ್ಟಿಯನ್ನು ಸೂಚಿಸಿದೆ. ಬರೇ ಸೃಷ್ಟಿಯಷ್ಟೆ ಅಲ್ಲ, ಸೃಷ್ಟ್ಯಾದ್ಯಷ್ಟ ಕರ್ತೃತ್ವ ಭಗವಂತನಲ್ಲಿದೆ ಎಂದು ಇಲ್ಲಿಯ ಸಂಖ್ಯೆಯ ಅರ್ಥ. ಸವಿತೃ ಎಂದರೆ ೭+೪+೬ = ೮.

'ವರೇಣ್ಯ' ಶಬ್ದವು ಶ್ರೇಷ್ಠತೆಯನ್ನು ಸಾರಿದೆ. ಇದು ಸರ್ವಶಾಸ್ತ್ರದ ಆಂತರ್ಯ. ಮುಖ್ಯ ಶಾಸ್ತ್ರಗಳು ಏಳು. ಇದನ್ನಿಲ್ಲಿ ಕಾಣಬಹುದು. ವರೇಣ್ಯಂ ಎಂದರೆ ೪+೨+೧.

'ಭರ್ಗ' ಶಬ್ದವು ಭಗ ಶಬ್ದದಲ್ಲೆ ಪರ್ಯವಸಿತವಾಗುವುದು. ಭರ್ಗ ಶಬ್ದದ ಅರ್ಥ ಬೆಳಗುವಂತಹದು; ಸುಟ್ಟುರಿವ ಶಕ್ತಿ. ಭರ್ಗ ಎಂದರೆ ೪+೩ = ೭. ಏಳು ಲೋಕಗಳಲ್ಲಿ ಬೆಳಗುವವನು, ಏಳು ಲೋಕಗಳನ್ನು ಸುಟ್ಟುರಿವ ಶಕ್ತಿ ಎಂದು ತಿಳಿಯುವುದು. ಅಷ್ಟೆ ಅಲ್ಲದೆ ಭಗ ಶಬ್ದದ ನೆಲೆಯಲ್ಲಿ ೩೪ ಗುಣಗಳು ಇಲ್ಲಿ ಸೂಚಿತ. ಸಾತ್ವತತಂತ್ರ ಇದನ್ನು ತಿಳಿಸಿದೆ. ಭಗ ಶಬ್ದವಾಚ್ಯಗಳಾದ ಆರು ಗುಣಗಳಲ್ಲಿ ಧರ್ಮ -೪, ವೈರಾಗ್ಯ -೪, ಐಶ್ವರ್ಯ-೮, ಶ್ರೀ-೭, ಜ್ಞಾನ-೬, ಯಶಸ್ -೫. ಒಟ್ಟು ೩೪. ಶ್ರೀಗಳು ಹದಿನಾರು ಎಂದಿಟ್ಟುಕೊಂಡಲ್ಲಿ ೪೩ ಆಗುವುದು. ಇದೂ ಭರ್ಗ ಶಬ್ದದ ಸಂಖ್ಯೆಯೆ ಆಗಿದೆ.

'ದೇವ' ಶಬ್ದ ಪ್ರಣವದ ಅರ್ಥವನ್ನೆಲ್ಲ ವಿವರಿಸುವಂತಹದ್ದು. ೮+೪ = ೩. ವೇದತ್ರಯದಿಂದ ಪ್ರತಿಪಾದ್ಯ. ತ್ರಿಕಾಲದಲ್ಲಿಯೂ ಸ್ತುತ. ಸ್ಥಾನತ್ರಯದಲ್ಲಿ ಇರುವವ. ತುತಿಸಿದವಗೆ ನಿತ್ಯ ಜ್ಞಾನದ ಬೆಳಕನ್ನೂ, ಸಂಸಾರದಲ್ಲಿ ಜಯವನ್ನೂ, ಶಾಶ್ವತ ಆನಂದವನ್ನೂ ನೀಡುವವ. ಇವೆಲ್ಲ ಅರ್ಥಗಳು ದೇವ ಶಬ್ದದಿಂದ ಬರುವವುಗಳು ಸಂಖ್ಯೆಯ ಮೂಲಕ ಸ್ಪಷ್ಟತೆಯನ್ನು ಪಡೆದಿವೆ.

(ಇಂತಹವನನ್ನು ಧ್ಯಾನಿಸುವೆವು. ನಮ್ಮ ಧೀವೃತ್ತಿಗಳನ್ನು ಪ್ರಚೋದಿಸಲಿ)

'ಧಿಯಃ' ಶಬ್ದ ಬುದ್ಧಿ ವೃತ್ತಿಗಳನ್ನು ಹೇಳಿದೆ. ೯+೧ = ೧೦ ಇದರ ಸಂಖ್ಯೆ. ಇದರಿಂದ ದಶೇಂದ್ರಿಯಗಳ ಪ್ರಚೋದನೆಯೂ ಸೂಚಿತ.

ಹೀಗೆ ಗಾಯತ್ರಿಯಲ್ಲಿಯ ಪದಗಳು ಸೂಚಿಸಿದ ಸಂಖ್ಯೆಯಿಂದ ಪದದ ಅರ್ಥವನ್ನು ಸ್ಪಷ್ಟ ತಿಳಿಯಬಹುದು.

— *ಉಡುಪಿ ರಾಮನಾಥ ಆಚಾರ್ಯ.*

* * *

**ಕುರ್ಯಾದನ್ಯನ್ನವಾ ಕುರ್ಯಾದನುಷ್ಠಾನಾದಿಕಂ ತಥಾ ।**
**ಗಾಯತ್ರೀಮಾತ್ರನಿಷ್ಠಸ್ತು ಕೃತಕೃತ್ಯೋ ಭವೇದ್ದ್ವಿಜಃ ॥** *ಗಾಯತ್ರೀತಂತ್ರ (೧-೮)*

# 'ದೇವ' ಅರ್ಥವಿಸ್ತಾರ

——————————— ಸಗ್ರಿ ರಾಘವೇಂದ್ರ ಉಪಾಧ್ಯಾಯ

ಶ್ರೀಮದಾಚಾರ್ಯರು ಋಗ್ಭಾಷ್ಯದಲ್ಲಿ ಗಾಯತ್ರಿಯ ಅರ್ಥವನ್ನು ನಿರೂಪಿಸುವಾಗ ದೇವ ಶಬ್ದದ ಅರ್ಥವನ್ನು ಹೇಳುವುದಿಲ್ಲ. ಅದನ್ನು ಮುಂದೆ ಅಗ್ನಿಸೂಕ್ತಕ್ಕೆ ವ್ಯಾಖ್ಯಾನಿಸುವಾಗ ತಿಳಿಸುವರು–

**ದ್ಯೋತನಾದ್ ವಿಜಯಾತ್ ಕಾಂತ್ಯಾ ಸ್ತುತ್ಯಾ ವ್ಯವಹೃತೇರಪಿ ।**

**ಗತ್ಯಾ ರತ್ಯಾ ಚ ದೇವಾಖ್ಯಂ.......** । (ಋ. ಭಾ. ೧–೧೧)

ಇಲ್ಲಿ ಏಳು ಅರ್ಥಗಳನ್ನು ಉಲ್ಲೇಖಿಸಲಾಗಿದೆ. 'ಅಂತರ್ಣೀತ ಣಿಚ್' ಎಂದಿಟ್ಟುಕೊಂಡು; ಪ್ರೇರಣಾರ್ಥಕವಾಗಿ ಇನ್ನೂ ಏಳು ಅರ್ಥಗಳನ್ನು ಹೊರಡಿಸಬಹುದಾಗಿದೆ.

ಆ ಹದಿನಾಲ್ಕು ಅರ್ಥಗಳನ್ನು ಹೀಗೆ ಸಂಗ್ರಹಿಸಬಹುದಾಗಿದೆ–

೧) ಸ್ವತಂತ್ರವಾಗಿ, ಅತಿಶಯವಾಗಿ ಪ್ರಕಾಶಿಸುವವನು. (ದೀವ್ಯತಿ ದ್ಯೋತತೇ ಇತಿ ದೇವಃ–ದಿವು ದ್ಯುತೌ)

೨) ಸೂರ್ಯ, ಚಂದ್ರ, ಮುಂತಾದ ಪ್ರಕಾಶಕ ಪದಾರ್ಥಗಳನ್ನು ಬೆಳಗಿಸುವವನು (ದೇವಯತಿ ದ್ಯೋತಯತೇ ಇತಿ ದೇವಃ)

೩) ಎಲ್ಲವನ್ನೂ ಜಯಿಸಿರುವವನು (ದೀವ್ಯತಿ ಸರ್ವಂ ಜಯತಿ ಇತಿ ದೇವಃ ದಿವು–ವಿಜಯೇ)

೪) ತನ್ನ ಭಕ್ತರು ತಮ್ಮ ಆಂತರಿಕ ಹಾಗೂ ಬಾಹ್ಯ ಶತ್ರುಗಳನ್ನು ಜಯಿಸುವಂತೆ ಮಾಡುವವನು. (ದೇವಯತಿ ಜಾಯಯತಿ ಸ್ವಭಕ್ತಾನ್ ಇತಿ ದೇವಃ)

೫) ತಾನು ಸೂರ್ಯಮಂಡಲದಲ್ಲಿದ್ದುಕೊಂಡು ಭಕ್ತರಿಂದ ಸ್ತುತನಾಗಲು ಇಚ್ಛಿಸುವವನು. (ದೀವ್ಯತಿ ಸೂರ್ಯಮಂಡಲಗತಃ ಸನ್ ಭಕ್ತೈಃ ಸ್ತುತೋ ಭವಿತುಂ ಇಚ್ಛತೀತಿ ದೇವಃ–ದಿವು ಕಾಂತೌ, ಕಾಂತಿರಿಚ್ಛಾ)

೬) ಸೂರ್ಯಮಂಡಲಗತನಾದ ತನ್ನನ್ನು ಒಲಿಸಿಕೊಳ್ಳಲು ಜಪ, ಧ್ಯಾನ ಮುಂತಾದ ಸಾಧನೆಗಳನ್ನು ನಡೆಸಲು ಇಚ್ಛಿಸುವಂತೆ ಪ್ರೇರಿಸುವವನು. (ದೇವಯತಿ ಸ್ವಂ ಅನುಗ್ರಹೋನ್ಮುಖಂ ಕರ್ತುಂ ಭಕ್ತಾಃ ಯಥಾ ಜಪಧ್ಯಾನಾದಿ ಸಾಧನಾನುಷ್ಠಾನಂ ಇಚ್ಛಂತಿ ತಥಾ ಪ್ರೇರಯತೀತಿ ದೇವಃ)

೭) ಗಾಯತ್ರೀ, ಪುರುಷಸೂಕ್ತ, ವೇದ, ಸಕಲ ಸಚ್ಛಾಸ್ತ್ರಗಳಿಂದಲೂ ಸ್ತುತಿಸಲ್ಪಡುವವನು. (ದೀವ್ಯತೇ ಸ್ತೂಯತೇ ಗಾಯತ್ರ್ಯಾದಿಭಿರಿತಿ ದೇವಃ–ದಿವು ಸ್ತುತೌ)

ಸೂರ್ಯಮಂಡಲಗತನಾಗಿ ಲಕ್ಷ್ಮೀ, ಚತುರ್ಮುಖ, ವಾಲಖಿಲ್ಯಾದಿಗಳಿಂದ ಸ್ತುತಿಸಲ್ಪಡುವವನು. (ದೀವ್ಯತೇ ಸ್ತೂಯತೇ ಲಕ್ಷ್ಮ್ಯಾದಿಭಿರಿತಿ ದೇವಃ)

೮) ತನ್ನ ಭಕ್ತರು ಸೂರ್ಯಮಂಡಲಗತನಾದ ತನ್ನನ್ನು ಗಾಯತ್ರಿಯಿಂದ ಸ್ತುತಿಸುವಂತೆ ಪ್ರೇರಿಸುವವನು. (ದೇವಯತಿ ಸ್ವಭಕ್ತಾಃ ಸವಿತೃಮಂಡಲಮಧ್ಯವರ್ತಿನಂ ಗಾಯತ್ರ್ಯಾ ಸ್ವಂ ಯಥಾ ಸ್ತುವಂತಿ ತಥಾ ಪ್ರೇರಯತೀತಿ ದೇವಃ)

೯) ಸೂರ್ಯನ ಮೂಲಕ ಜಗತ್ತಿನ ಸೃಷ್ಟ್ಯಾದಿ ವ್ಯವಹಾರವನ್ನು ನಡೆಸುವವನು. (ದೀವ್ಯತಿ ಸೂರ್ಯದ್ವಾರಾ ಜಗತ್ಸೃಷ್ಟ್ಯಾದೌ ವ್ಯವಹರತೀತಿ ದೇವಃ–ದಿವು ವ್ಯವಹೃತೌ)

೧೦) ಸೂರ್ಯನ ಮೂಲಕ ಬೆಳಕು, ಉಷ್ಣತೆ, ಮಳೆಗಳನ್ನು ನೀಡಿ ಚೇತನರು ಜಗತ್ತಿನ ಸೃಷ್ಟ್ಯಾದಿ ವ್ಯವಹಾರವನ್ನು ನಡೆಸುವಂತೆ ಪ್ರೇರಿಸುವವನು. (ದೇವಯತಿ ಚೇತನಾಃ ಜಗತ್ಸೃಷ್ಟ್ಯಾದೌ ಯಥಾ ವ್ಯವಹರಂತಿ ತಥಾ ಸೂರ್ಯದ್ವಾರಾ ಪ್ರೇರಯತೀತಿ ದೇವಃ–ದಿವು ವ್ಯವಹೃತೌ)

೧೧) ಸೂರ್ಯಮಂಡಲದ ಮೂಲಕ ಗಗನದಲ್ಲಿ ಸಂಚರಿಸುವವನು (ದೀವ್ಯತಿ ಸೂರ್ಯಮಂಡಲದ್ವಾರಾ ಆಕಾಶೇ ಗಚ್ಛತೀತಿ ದೇವಃ –ದಿವು ಗತೌ)

೧೨) ಸೂರ್ಯನ ಮೂಲಕ ಸೂರ್ಯನ ಸುತ್ತ ಎಲ್ಲ ಗ್ರಹಗಳು ಸಂಚರಿಸುತ್ತಿರುವಂತೆ ಪ್ರೇರಿಸುವವನು. (ದೇವಯತಿ ಸೂರ್ಯಂ ಪರಿತಃ ಅನ್ಯೇ ಗ್ರಹಾಃ ಯಥಾ ಗಚ್ಛಂತಿ ತಥಾ ಪ್ರೇರಯತೀತಿ ದೇವಃ)

೧೩ ಸೂರ್ಯನು ನಿಯಮಿಸುವ ಮೂವತ್ತಾರುಸಾವಿರ ಹಗಲುಗಳಲ್ಲೂ ರಾತ್ರಿಗಳಲ್ಲೂ ಇರುವ ತನ್ನ ಮೂವತ್ತಾರು ಸಾವಿರ ಪುರುಷರೂಪಗಳಿಂದಲೂ, ಸ್ತ್ರೀರೂಪಗಳಿಂದಲೂ ಪರಸ್ಪರವಾಗಿ ರಮಿಸುವವನು. (ದೀವ್ಯತಿ ಷಟ್‌ತ್ರಿಂಶತಿ ಸಹಸ್ರಾಖ್ಯೈಃ ಆತ್ಮೀಯೈಃ ಪುಂರೂಪೈಃ ಸ್ತ್ರೀರೂಪೈಶ್ಚ ಅನ್ಯೋನ್ಯಂ ರಮತೇ ಇತಿ ದೇವಃ–ದಿವು ರತೌ)

ಶ್ರೀಹರಿಯ ಮೂವತ್ತಾರು ಸಾವಿರ ಸ್ತ್ರೀರೂಪಗಳೂ, ಅಷ್ಟೇ ಪುರುಷರೂಪಗಳೂ ಕ್ರಮವಾಗಿ ಬೃಹತೀಸಹಸ್ರದ ವ್ಯಂಜನಾಕ್ಷರಗಳಲ್ಲಿಯೂ, ಸ್ವರಾಕ್ಷರಗಳಲ್ಲಿಯೂ ಇವೆ. ಹಾಗೆಯೇ ಮೂವತ್ತಾರು ಸಾವಿರ ಸ್ತ್ರೀರೂಪಗಳೂ ಅಷ್ಟೇ ಪುರುಷರೂಪಗಳೂ ಕ್ರಮವಾಗಿ ನೂರುವರ್ಷಗಳ ಮೂವತ್ತಾರು ಸಾವಿರ ಹಗಲುಗಳಿಗೂ, ಮೂವತ್ತಾರು ಸಾವಿರ ರಾತ್ರಿಗಳಿಗೂ ಅಭಿಮಾನಿಗಳಾದ ಸೂರ್ಯನ ಎಲ್ಲ ರೂಪಗಳಲ್ಲಿ ಇರುವವು. ಕೆಲವೊಮ್ಮೆ ಶ್ರೀವಿಷ್ಣುವು ಜೀವರಲ್ಲಿ ಬೃಹತೀಸಹಸ್ರದ ವ್ಯಂಜನಾಕ್ಷರಗಳಲ್ಲಿರುವ ಸ್ತ್ರೀರೂಪಗಳಿಂದ ಸೂರ್ಯನು ನಿಯಮಿಸುವ ಹಗಲುಗಳ ಪುರುಷರೂಪಗಳ ಜತೆ ಕ್ರೀಡಿಸುತ್ತಾನೆ. ಬೃಹತೀಸಹಸ್ರದ ಸ್ವರಗಳಲ್ಲಿರುವ ಪುರುಷರೂಪಗಳಿಂದ ಸೂರ್ಯನು ನಿಯಮಿಸುವ ರಾತ್ರಿಗಳ ಸ್ತ್ರೀರೂಪಗಳ ಜತೆ ಕ್ರೀಡಿಸುತ್ತಾನೆ. ಕೆಲವೊಮ್ಮೆ ಸೂರ್ಯನು

ನಿಯಮಿಸುವ ರಾತ್ರಿಗಳ ಸ್ತ್ರೀರೂಪಗಳ ಜತೆ ಸೂರ್ಯನು ನಿಯಮಿಸುವ ಹಗಲುಗಳ ಪುರುಷರೂಪಗಳಿಂದ ಕ್ರೀಡಿಸುತ್ತಾನೆ ಮತ್ತು ಬೃಹತೀಸಹಸ್ರದ ವ್ಯಂಜನಗಳಲ್ಲಿರುವ ಸ್ತ್ರೀರೂಪಗಳ ಜತೆ ಬೃಹತೀಸಹಸ್ರದ ಸ್ವರಗಳಲ್ಲಿರುವ ಪುರುಷರೂಪಗಳಿಂದ ಕ್ರೀಡಿಸುತ್ತಾನೆ. ಕೆಲವೊಮ್ಮೆ ಸೂರ್ಯನಲ್ಲಿರುವ ಪುರುಷ ರೂಪಗಳನ್ನು ಸ್ತ್ರೀರೂಪಗಳನ್ನಾಗಿಯೂ, ಸ್ತ್ರೀರೂಪಗಳನ್ನು ಪುರುಷರೂಪಗಳ ನ್ನಾಗಿಯೂ ಮಾಡಿ ಅವುಗಳಿಂದ ಅವುಗಳ ಜತೆ ಕ್ರೀಡಿಸುತ್ತಾನೆ. ಸಮರ್ಥನಾದ ಅವನು ಸ್ವೇಚ್ಛೆಯಿಂದ ಕೆಲವೊಮ್ಮೆ ಒಮ್ಮೆಲೆ ಪುರುಷರೂಪವೂ ಸ್ತ್ರೀರೂಪವೂ ಆದ ರೂಪಗಳಿಂದ ಕ್ರೀಡಿಸುತ್ತಾನೆ. ಎಲ್ಲ ಪುರುಷರೂಪಗಳನ್ನೂ ಒಂದುಮಾಡಿ, ಸ್ತ್ರೀರೂಪಗಳನ್ನೂ ಒಂದುಮಾಡಿ ದ್ವಿರೂಪಿಯಾಗಿಯೂ ಕ್ರೀಡಿಸುತ್ತಾನೆ ಎಂಬು ದಾಗಿ ಅವನ ಕ್ರೀಡೆಯ ವೈಶಿಷ್ಟ್ಯವನ್ನು ಅರ್ಧನಾರೀನಾರಾಯಣತಂತ್ರ (ಐ.ಉ.ಭಾ. ೨-೨-೭-೫) ವಿವರಿಸಿದೆ-

ಷಟ್‌ತ್ರಿಂಶತಿ ಸಹಸ್ರಾಣಿ ಬೃಹತ್ಯುಕ್ತಾರ್ಣಗಾನಿ ತು ।
ಸ್ತ್ರೀರೂಪಾಣಿ ಹರೇಸ್ತಾವದ್ ಅಹ್ನಾಮಪ್ಯಭಿಮಾನಿಷು ॥
ಸೂರ್ಯರೂಪೇಷು ರೂಪಾಣಿ ಪುಮಾಕಾರಾಣಿ ಸರ್ವಶಃ ।
ಏತೈಃ ಪುರುಷಗೈ ರೂಪೈರ್ಬೃಹತ್ಯುಕ್ತವ್ಯವಸ್ಥಿತೈಃ ॥
ಕದಾಚಿದ್ ಭಗವಾನ್ ವಿಷ್ಣುಃ ಪುಮಾಕಾರಾಣಿ ತಾನಿ ಚ ।
ಕೃತ್ವಾ ಸೂರ್ಯಗತಾನ್ಯೇವ ಸ್ತ್ರೀರೂಪಾಣಿ ವಿಧಾಯ ಚ ॥
ತಾನ್ಯಾಪ್ನೋತಿ ಚ ಪುಂರೂಪೈಸ್ತೈರೇವಾಕ್ಷರಗಾನಿ ಚ ।
ಸ್ತ್ರೀರೂಪಾಣಿ ಜಗನ್ನಾಥಃ ಪ್ರಾಪ್ನೋತ್ಯಾತ್ಮೇಚ್ಛಯಾ ಪ್ರಭುಃ ॥
ಪುಂರೂಪಃ ಪ್ರಮದಾರೂಪಸ್ಸ್ವರೂಪೈ ರಮತೇ ಸ್ವಯಮ್ ।
ಏಕೀಕೃತ್ಯ ಚ ತಾನ್ಯೇವ ದ್ವಿರೂಪೋ ರಮತೇ ತಥಾ ॥

ಹೀಗೆ ಭಗವಂತನು ನಡೆಸುವ ಕ್ರೀಡೆಯಲ್ಲಿ ಅವನ ರೂಪಗಳಿಗೆ ಆಧಾರವಾಗಿ ಬೃಹತೀಸಹಸ್ರದ ವರ್ಣಗಳು, ಪುರುಷನ ನೂರು ವರ್ಷಗಳ ರಾತ್ರಿಹಗಲುಗಳು ಹೇಗೋ ಹಾಗೆಯೇ ಅಂತಹ ರಾತ್ರಿಹಗಲುಗಳನ್ನು ನಿಯಮಿ ಸುವ ಸೂರ್ಯನ ರೂಪಗಳೂ ಪಾತ್ರವಹಿಸಿರುವುದರಿಂದ ಗಾಯತ್ರಿಯ ಮಂತ್ರಾರ್ಥಚಿಂತನೆಯ ಸಂದರ್ಭದಲ್ಲಿ ಈ ಪ್ರಮೇಯ ಅವಶ್ಯವಾಗಿ ಅನು ಸಂಧೇಯ.

೧೪) ಭಗವಂತನು ಸೂರ್ಯನ ಮೂಲಕ ಬೆಳಕು, ಬಿಸಿಲು, ಮಳೆಗಳನ್ನು ನೀಡಿ ಎಲ್ಲ ಪ್ರಾಣಿಗಳನ್ನು ಸಂತೋಷಪಡಿಸುವವನು (ದೇವಯತಿ ಸೂರ್ಯ ದ್ವಾರಾ ಆತಪಾದೀನ್ ದತ್ವಾ ಸಕಲಚೇತನಾನ್ ರಮಯತೀತಿ ದೇವಃ)

ಇದಲ್ಲದೆ, ಭೀಮಸೇನನ ಧಾತುಪಾಠದ ಪ್ರಕಾರ 'ದಿವು' ಧಾತುವಿಗೆ ಮೋದ, ಮದ, ಸ್ವಪ್ನ ಎಂಬ ಅರ್ಥಗಳೂ ಇದ್ದು ಆ ಅರ್ಥಗಳಲ್ಲೂ ದೇವ ಶಬ್ದಾರ್ಥವನ್ನು ಚಿಂತಿಸಬಹುದು. *

# ಗಾಯತ್ರಿಯ 'ಯಃ'

ಸಗ್ರಿ ರಾಘವೇಂದ್ರ ಉಪಾಧ್ಯಾಯ

ನಾನರ್ಥಕಃ ಸ್ವರೋ ವಾಽಪಿ ವರ್ಣೋ ವಾ ಕುತ್ರಚಿದ್ ಭವೇತ್ ।
ಪದಂ ವಾಕ್ಯಂ ಕುತಶ್ಚ ಸ್ಯಾನ್ನಾಲ್ಪಾರ್ಥಮಪಿ ಕುತ್ರಚಿತ್ ॥
ಉಚ್ಚಾರಾದ್ಯರ್ಥಮಪಿ ವಾ ನಾಸ್ತಿ ಕಿಂಚಿತ್ ಸ್ವರಾದಿಕಮ್ ।
ಮಹಾರ್ಥವೇವ ಸರ್ವಂ ಹಿ ವೇದೇ ವಾ ವೈದಿಕೇಽಪಿ ವಾ ॥

"ವೇದದಲ್ಲಾಗಲೀ, ವೇದಕ್ಕೆ ಸಂಬಂಧಿಸಿದ ಶಾಸ್ತ್ರದಲ್ಲಾಗಲೀ ಸ್ವರ ಅಥವಾ ವರ್ಣವು ಎಲ್ಲಿಯೂ ಅನರ್ಥಕವಾಗುವುದಿಲ್ಲ. ಪದವೂ, ವಾಕ್ಯವೂ ಅನರ್ಥಕವಾಗಿ ಎಲ್ಲಿ ಇದ್ದೀತು? ಪಾದಪೂರಣದಿಂದ ಶ್ಲೋಕದ ಉಚ್ಚಾರಣಸೌಕರ್ಯ ಮಾತ್ರಕ್ಕಾಗಿಯೂ ಸ್ವರಾದಿಗಳ ಬಳಕೆ ಇರುವುದಿಲ್ಲ. ಎಲ್ಲವೂ ಉತ್ತಮ ಅರ್ಥದಿಂದ ಕೂಡಿಯೇ ಇರುತ್ತದೆ"

ಎಂಬುದಾಗಿ ಶ್ರೀ ವೇದವ್ಯಾಸರ ವಚನವನ್ನು ಉಲ್ಲೇಖಿಸಿರುವ (ಐ.ಉ. ಭಾ. ೨-೧-೨-೧೩) ಶ್ರೀಮದಾಚಾರ್ಯರು ವೇದದ ಮಾತುಗಳನ್ನು ಆದಷ್ಟು ಉತ್ತಮಾರ್ಥಗಳಲ್ಲಿ ತೆರೆದುಕೊಳ್ಳುವಂತೆ ವ್ಯಾಖ್ಯಾನಿಸಬೇಕೆಂದು ಅಭಿಪ್ರಾಯ ಪಟ್ಟಿರುವರು.

ಈ ಹಿನ್ನೆಲೆಯಲ್ಲಿ ಗಾಯತ್ರಿಯ ಮೂರನೇ ಪಾದದಲ್ಲಿಯ 'ಯಃ' ಶಬ್ದಕ್ಕೆ 'ಯಾರು' ಎಂದು ಹಿಂದಿನ ವಾಕ್ಯದಲ್ಲಿ ಪ್ರಸ್ತುತನಾದ ವ್ಯಕ್ತಿಯ ಪರಾಮರ್ಶಕವಾಗಿ ವ್ಯಾಖ್ಯಾನಿಸಿಕೊಳ್ಳುವುದು ಅಷ್ಟೊಂದು ಉಚಿತವಲ್ಲ ಎನಿಸುವುದು.

ಸಾಮಾನ್ಯವಾಗಿ 'ಯಃ ನಃ ಧಿಯಃ ಪ್ರಚೋದಯಾತ್' ಯಾರು ನಮ್ಮ ಬುದ್ಧಿಯನ್ನು ಪ್ರೇರಿಸುವನೋ ಅಂತಹವನ ಎಂದು ಗಾಯತ್ರೀ ಮಂತ್ರದಿಂದ ವಾಕ್ಯಾರ್ಥವನ್ನು ಹೊರಡಿಸಲಾಗುವುದು. ಆಗ 'ಯಃ' ಅನ್ನುವುದು 'ಯಾರು' ಎಂದು ಅಲ್ಪಾರ್ಥಕವಾಗಿ ತೆರೆದುಕೊಳ್ಳುವುದು.

ಇದರ ಬದಲಾಗಿ 'ತತ್ಸವಿತುಃ.......ಧೀಮಹಿ' ಎಂಬುದು ಒಂದು ವಾಕ್ಯ. 'ಧಿಯೋ ಯೋ ನಃ ಪ್ರಚೋದಯಾತ್' ಎಂಬುದು ಮತ್ತೊಂದು ಸ್ವತಂತ್ರವಾದ ಉಪವಾಕ್ಯ ಎಂದಿಟ್ಟುಕೊಂಡಾಗ 'ಯಃ' ಎನ್ನುವ ಶಬ್ದ ಮಹಾರ್ಥಕವಾಗಿ ತೆರೆದುಕೊಳ್ಳುವಂತೆ ವ್ಯಾಖ್ಯಾನಿಸಿಕೊಳ್ಳಬಹುದಾಗಿದೆ.

'ತತ್ಸವಿತುಃ......' ಎಂಬ ವಾಕ್ಯದಲ್ಲಿಯ ಭಗವಂತನ ರೂಪವನ್ನು ಧ್ಯಾನ ಮಾಡುತ್ತೇವೆ ಎಂಬ ಅರ್ಥಕ್ಕೆ ಪೋಷಕವಾಗಿ, ನಮಗೆ ಆ ರೀತಿ ಧ್ಯಾನನಡೆಸಲು ಬೇಕಾದ ಧೀ ಪ್ರಚೋದನೆಯನ್ನು ಅವನೇ ನಡೆಸಲಿ ಎಂಬುದಾಗಿ 'ಧಿಯೋ

ಯೋ ನಃ ಪ್ರಚೋದಯಾತ್' ಎಂಬ ಉಪವಾಕ್ಯ ಅರ್ಥವನ್ನು ತಿಳಿಸಬಲ್ಲದು. ಹೀಗೆ ಎರಡು ವಾಕ್ಯಗಳಿಗೂ ಆರ್ಥಿಕವಾಗಿ ಪರಸ್ಪರ ಸಂಬಂಧವನ್ನು ಹೇಳಬಹುದಾಗಿದೆ.

ಹೀಗೆ ವಾಕ್ಯಗಳನ್ನು ಪ್ರತ್ಯೇಕವಾಗಿಯೇ ಕೊನೆಗೊಳ್ಳುವಂತೆ ವ್ಯಾಖ್ಯಾನಿಸಿಕೊಂಡಾಗ 'ಯಃ' ಎಂಬ ಶಬ್ದವು ಎರಡನೇ ವಾಕ್ಯಾರ್ಥಕ್ಕೆ 'ಕರ್ತೃ'ವನ್ನು ಹೇಳುವುದು. ಆಚಾರ್ಯರು ಅಲ್ಲಲ್ಲಿ ತಿಳಿಸಿದ ಅನೇಕಾರ್ಥಗಳಲ್ಲಿ ಆ 'ಯಃ' ಶಬ್ದವನ್ನು ಚಿಂತಿಸಬಹುದಾಗಿದೆ.

ಶಬ್ದನಿರ್ಣಯ (ಬೃ.ಉ.ಭಾ. ೫–೭–೩) ತಿಳಿಸುವಂತೆ **'...ಪೂರ್ಣತ್ವಾತ್ ಯು ಇತೀರ್ಯತೇ'** ಭಗವಂತನು ಗುಣಪೂರ್ಣನಾಗಿರುವುದರಿಂದ 'ಯಃ' ಎನಿಸುವನು. ಗಾಯತ್ರಿಯ 'ಯಃ' ಶಬ್ದಕ್ಕೆ ಈ ಅರ್ಥವನ್ನು ಇಟ್ಟುಕೊಂಡಲ್ಲಿ ಪರಿಪೂರ್ಣನಾದ ಭಗವಂತನು ಯಾವುದೇ ಪ್ರಯೋಜನಾಪೇಕ್ಷೆಯಿಂದ ಧೀ ಪ್ರಚೋದನೆ ನಡೆಸದೆ, ಕ್ರೀಡಾರೂಪವಾಗಿಯಷ್ಟೇ ನಡೆಸುವನೆಂಬ ಪ್ರಮೇಯ ಸಿದ್ಧವಾಗುವುದು.

**'...ಜ್ಞಾನತ್ವಾತ್ ಯು ಇತೀರ್ಯತೇ'** ಎಂದಿರುವಂತೆ ಜ್ಞಾನಸ್ವರೂಪಿ ಎಂಬ ಅರ್ಥದಲ್ಲಿ 'ಯಃ' ಎಂಬ ಶಬ್ದವನ್ನು ಇಟ್ಟುಕೊಂಡಾಗ ಸ್ವಯಂ ಜ್ಞಾನಸ್ವರೂಪಿಯಾಗಿರುವುದರಿಂದಲೇ ಭಗವಂತನು ಉಳಿದವರಿಗೆ ಜ್ಞಾನವನ್ನು ನೀಡುವನೆಂದು ಸಮರ್ಥನೆ ದೊರಕುವುದು.

**'ಈ ಸಹಿತಃ ಅಃ ಯಃ'** ಎಂದು ಲಕ್ಷ್ಮೀಸಹಿತನಾದವನೆಂದು 'ಯಃ' ಶಬ್ದದ ಅರ್ಥವನ್ನಿಟ್ಟುಕೊಂಡಾಗ ಜ್ಞಾನಾಭಿಮಾನಿನಿಯಾದ ಲಕ್ಷ್ಮಿಯ ಮೂಲಕ ಬುದ್ಧಿ ಪ್ರಚೋದನೆ ನಡೆಸುವನೆಂದು ಸಿದ್ದಿಸುವುದು.

ಹೀಗೆ ಗಾಯತ್ರಿಯ 'ಯಃ' ಎಂಬ ಶಬ್ದ ಭಗವಂತನ ಪೂರ್ಣತ್ವಾದಿ ಗುಣವಾಚಕವಾಗಿದೆ ಎಂದು ಚಿಂತಿಸುವುದೇ ಉತ್ತಮ.

*

**ಜೀವಾಃ ಹರೇರನುಚರಾಃ**

ಸೂರ್ಯನ ಪ್ರಕಾಶವು ಚಂದ್ರಮಂಡಲದಲ್ಲಿ ಬಿದ್ದು ಚಂದ್ರಮಂಡಲದಲ್ಲಿ ಕಾಣಿಸುವುದು. ಅಂತಹ ಸೂರ್ಯನನ್ನು 'ಸವಿತುಃ' ಎಂಬ ಪದದಿಂದ ಉಲ್ಲೇಖಿಸಲಾಗುವ ಗಾಯತ್ರಿಯಲ್ಲಿ ಜೀವರು ಪರಮಾತ್ಮನ ಪ್ರತಿಬಿಂಬರಾಗಿ, ಅನುಚರರೆನಿಸಿರುವರು ಎಂದು ಸಮರ್ಥಿಸಿದಂತಾಗಿದೆ. — ಶ್ರೀ ವಿದ್ಯಾಮಾನ್ಯತೀರ್ಥರು.

# ಬಹುವಚನಪ್ರಯೋಗದ ಸಂದೇಶ

ಶ್ರೀ ವಿದ್ಯಾಧೀಶತೀರ್ಥರು

'ಗಾಯಂತಂ ತ್ರಾಯತೇ' ತನ್ನ ಮೂಲಕ ಭಗವಂತನ ಗಾನ ನಡೆಸುವ ಸಾಧಕರನ್ನು ರಕ್ಷಿಸುವುದೆಂಬ ಅಭಿಪ್ರಾಯದಲ್ಲಿ ಅನ್ವರ್ಥಕವಾಗಿ 'ಗಾಯತ್ರೀ' ಎಂದೆನಿಸುವ ಗಾಯತ್ರೀಮಂತ್ರವು ಭಗವಂತನ ಗುಣತಃ ವ್ಯಾಪ್ತಿ, ಜಗತ್ಸ್ರಷ್ಟೃತ್ವ ಮುಂತಾದ ಕೆಲವು ಪ್ರಮುಖ ಗುಣಗಳನ್ನು ಸ್ಪಷ್ಟವಾಗಿ ಸಾರುತ್ತಿರುವಂತೆ ಸೂಚ್ಯವಾಗಿಯೂ ಕೆಲವು ಗುಣಗಳನ್ನು, ಭಗವದ್ಗುಣಗಳ ಸಾಧನೆಗೆ ಪೋಷಕ ಗಳಾದ ಕೆಲವು ತತ್ವಗಳನ್ನು ತಿಳಿಸುತ್ತಿದೆ.

ಗಾಯತ್ರಿಯನ್ನು ಒಬ್ಬೊಬ್ಬ ವ್ಯಕ್ತಿ ತನ್ನಷ್ಟಕ್ಕೆ ಜಪಿಸುವ ವಿಧಾನವಿದೆಯೇ ಹೊರತು ಸಾಮೂಹಿಕವಾಗಿ ಜಪಿಸುವ ಕ್ರಮ ವಿರಳ. ಹೀಗಿದ್ದರೂ ಅದರಲ್ಲಿ 'ಧೀಮಹಿ' ಧ್ಯಾನಿಸುವೆವು. 'ನಃ ಪ್ರಚೋದಯಾತ್' ನಮ್ಮ ಬುದ್ಧಿಯನ್ನು ಪ್ರಚೋದಿಸಲಿ ಎಂದು ಬಹುವಚನದ ಪ್ರಯೋಗ ಯಾವ ಅಭಿಪ್ರಾಯವನ್ನು ಇಟ್ಟುಕೊಂಡು ಹೊರಟಿರುವಂತಹದ್ದು? 'ಆತ್ಮನಿ ಬಹುವಚನಮ್' ಎಂಬುದಾಗಿ ತನ್ನ ಬಗ್ಗೆ ಹೇಳುವಾಗ ಬಹುವಚನವನ್ನು ಬಳಸಬೇಕೆಂಬ ನಿಯಮವೇನೊ ಇದೆ ನಿಜ. ಆದರೆ ಈ ನಿಯಮವಾದರೂ ಯಾವ ಉದ್ದೇಶದಿಂದ ಹೊರಟಿರು ವಂತಹದ್ದು?

ನಮ್ಮ ಸಂಸ್ಕೃತಿಯ ಪ್ರಕಾರ ನಾವು ಯಾವುದೇ ಕ್ರಮವನ್ನು ನಡೆಸುವಾಗ ಇಂದ್ರಿಯಾಭಿಮಾನಿದೇವತೆಗಳ ಪ್ರೇರಣೆ ಇರುತ್ತದೆ. ಆದ್ದರಿಂದ ನಮ್ಮ ಯಾವುದೇ ಇಂದ್ರಿಯದ ಮೂಲಕ ನಡೆಯುವ ಕ್ರಿಯೆಯನ್ನು ನಾವು ಮಾತ್ರ ನಡೆಸುವುದಲ್ಲದೆ ಇಂದ್ರಿಯಾಭಿಮಾನಿದೇವತೆಗಳೂ ಆ ಕ್ರಿಯೆಯನ್ನು ನಡೆಸುವುದರಲ್ಲಿ ಪಾಲ್ಗೊಳ್ಳು ವರು. ಆದುದರಿಂದ ನಮ್ಮಿಂದ ಕ್ರಿಯೆ ನಡೆದುದನ್ನು ಉಲ್ಲೇಖಿಸುವಾಗ ಬಹು ವಚನದ ಪ್ರಯೋಗವೇ ಶಾಸ್ತ್ರಸಮ್ಮತವಾದುದು. ವಿನಯಪ್ರದರ್ಶನವೆಂದು ಭಾವಿಸಿ ಏಕವಚನವನ್ನು ಬಳಸಿದೆವೆಂದರೆಯೆ ಆ ಕ್ರಿಯೆಯನ್ನು ನಡೆಸುವುದರಲ್ಲಿ ಇತರ ದೇವತೆಗಳ ಪಾತ್ರವನ್ನು ಅಲ್ಲಗಳೆದಂತಾದೀತು! ಆ ಮೂಲಕ ಅಹಂಕಾರ ವನ್ನೇ ಪ್ರದರ್ಶಿಸಿದಂತಾದೀತು!

ಈ ರೀತಿಯ ಅಪಚಾರ ನಮ್ಮಿಂದ ಆಗದಂತೆ ಗಾಯತ್ರಿಯಲ್ಲಿ 'ಧೀಮಹಿ' ಧ್ಯಾನಿಸುವೆವು ಎಂದು ಬಹುವಚನದ ಪ್ರಯೋಗವೇ ಇದೆ. ನಾನು ಹಾಗೂ ನನ್ನ ಇಂದ್ರಿಯಗಳನ್ನು ಪ್ರೇರಿಸುತ್ತಿರುವ ತತ್ತ್ವಾಭಿಮಾನಿದೇವತೆಗಳೂ ಸೇರಿ ಭಗವಂತ ನನ್ನು ಧ್ಯಾನಿಸುತ್ತಿದ್ದೇವೆ. ದೇವತೆಗಳು ವೈಯಕ್ತಿಕವಾಗಿ ಭಗವಂತನ ಧ್ಯಾನವನ್ನು

ನಡೆಸುವುದಲ್ಲದೆ ನನ್ನಂತಹ ಸಾತ್ವಿಕರು ಭಗವದ್ಧ್ಯಾನದಲ್ಲಿ ತೊಡಗುವಂತೆ ಮಾಡುವುದರ ಮೂಲಕವೂ ಅವನ ಧ್ಯಾನವನ್ನು ನಡೆಸುವರು.

ಹಾಗೆಯೇ ಭಗವಂತನು ತನ್ನ ಬುದ್ಧಿಯನ್ನಷ್ಟೆ ಪ್ರಚೋದಿಸುವುದಲ್ಲ, ನನ್ನ ಪ್ರಚೋದನೆಯಲ್ಲಿ ತೊಡಗಿರುವ ತತ್ತ್ವಾಭಿಮಾನಿದೇವತೆಗಳ ಬುದ್ಧಿಯನ್ನು ಅವನೇ ಪ್ರಚೋದಿಸುವವನು. ಆದುದರಿಂದ ತನ್ನ ಬುದ್ಧಿಯನ್ನು ಪ್ರಚೋದಿಸಬೇಕು, ಹಾಗೆಯೇ ನನ್ನ ಬುದ್ಧಿಪ್ರಚೋದನೆಗೆ ಸಹಕಾರಿಗಳಾಗಿರುವ ತತ್ತ್ವಾಭಿಮಾನಿಗಳ ಬುದ್ಧಿಯನ್ನು ಪ್ರಚೋದಿಸಬೇಕು. ಅವರ ಪ್ರಚೋದನೆ ಆ ಮೂಲಕ ನನ್ನ ಪ್ರಚೋದನೆಯನ್ನು ನಡೆಸಬೇಕು. 'ಧಿಯೋ ಯೋ ನಃ ಪ್ರಚೋದಯಾತ್' ಎಂಬ ಹಾರೈಕೆಯಲ್ಲಿ 'ನಃ' ನಮ್ಮ ಎಂಬಲ್ಲಿ ಬಳಸಲಾದ ಬಹುವಚನ ಇಂತಹ ಅಭಿಪ್ರಾಯವಿಶೇಷವನ್ನು ಸೂಚಿಸಿಕೊಡುವುದು.

ಹೀಗೆ ಗಾಯತ್ರಿಯಲ್ಲಿಯ 'ಧೀಮಹಿ' ಎಂಬಲ್ಲಿಯ ಬಹುವಚನ ಭಗವದ್ ಧ್ಯಾನದಲ್ಲಿ ತತ್ತ್ವಾಭಿಮಾನಿಗಳ ಅನುಗ್ರಹದ ಆವಶ್ಯಕತೆಯನ್ನೂ 'ನಃ' ಎಂಬಲ್ಲಿಯ ಬಹುವಚನ ನಮ್ಮ ಅವಾಂತರಪ್ರೇರಕರಾದ ತತ್ತ್ವಾಭಿಮಾನಿಗಳ ಪ್ರೇರಣೆಯೂ ಭಗವಂತನಿಂದಲೇ ನಡೆಯುವುದೆಂಬುದನ್ನು ಸೂಚ್ಯವಾಗಿ ಸಂದೇಶಿಸಿರುವುದನ್ನು ವಿಶ್ಲೇಷಿಸಿಕೊಳ್ಳದಿರಬಾರದು.

*

## ಚಿಕ್ಕದಾದರೂ ಮಹತ್ತ್ವಪೂರ್ಣ

ಗಾಯತ್ರೀಮಂತ್ರ ಬಹಳ ಚಿಕ್ಕದು. ಆದರೂ ಇದರಲ್ಲಿ ತುಂಬ ಮಹತ್ತ್ವ ಅಡಗಿದೆ. ಶಬ್ದ ಚಿಕ್ಕದಾದರೂ ಅರ್ಥ ದೊಡ್ಡದಾಗಿದ್ದಿರಬಹುದು. 'ಮದುವೆ' ಎಂಬ ಶಬ್ದದಲ್ಲಿ ಕೇವಲ ಮೂರು ಅಕ್ಷರಗಳು. ಆದರೆ ಅದರಲ್ಲಿ ಅಡಗಿರುವ ಅರ್ಥ, ಅದಕ್ಕೆ ಬೇಕಾದ ಸಿದ್ಧತೆಗಳು, ವೈಭವ ಇವೆಲ್ಲ ತುಂಬ ವಿಸ್ತಾರವಾದುದು. ಇದರಂತೆಯೇ ಗಾಯತ್ರೀ ಮಂತ್ರ.

ಗಾಯತ್ರೀಮಂತ್ರ ತುಂಬ ಪ್ರಭಾವಕಾರಿಯಾಗಿರುವುದರಿಂದ, ಅದರ ಉಪದೇಶಕ್ಕೆ, ಉಪನಯನಕ್ಕೆ ಆದಷ್ಟು ಉತ್ತಮವಾದ ಕಾಲವನ್ನು ಆಯ್ಕೆ ಮಾಡಬೇಕು. ಒಂದೊಮ್ಮೆ ವ್ಯಕ್ತಿಯ ಜನ್ಮದ ಕಾಲ ಅಷ್ಟೊಂದು ಒಳ್ಳೆಯದಲ್ಲದಿದ್ದರೂ, ಅವನಿಗೆ ಒಳ್ಳೆಯ ಕಾಲದಲ್ಲಿ ಉಪನಯನ ನಡೆಸುವ ಪ್ರಯುಕ್ತ ಅವನ ಮುಂದಿನ ಜೀವನ ಉಜ್ವಲವೆನಿಸಬಹುದಾಗಿದೆ.

— ಶ್ರೀ ವಿದ್ಯಾಮಾನ್ಯತೀರ್ಥರು.

# ಧೀ ಪ್ರೇರಣೆಯ ವೈಖರಿ

ಸಗ್ರಿ ರಾಘವೇಂದ್ರ ಉಪಾಧ್ಯಾಯ

ಬ್ರಹ್ಮಸೂತ್ರದ ತದನನ್ಯತ್ವಾಧಿಕರಣದಲ್ಲಿ ಸಿದ್ಧಾಂತಿಸಿರುವಂತೆ ಭಗವಂತ ಸ್ವಸಾಮರ್ಥ್ಯದಿಂದಲೇ ಜಗತ್ಸೃಷ್ಟಿಯನ್ನು ನಡೆಸಲು ಸಮರ್ಥನಾಗಿರುವನಾದರೂ, ತನಗೆ ಅಧೀನಗಳಾದ ಬೇರೆ ಬೇರೆ ಸಾಧನೆಗಳನ್ನು ಬಳಸಿಕೊಂಡೇ ಸೃಷ್ಟಿಯನ್ನು ನಡೆಸುವನು.

ಸಾಧನಾನಾಂ ಸಾಧನತ್ವಂ ಯದಾಽಽತ್ಮಾಧೀನಮಿಷ್ಯತೇ ।
ತದಾ ಸಾಧನಸಂಪತ್ತಿರೈಶ್ವರ್ಯದ್ಯೋತಿಕಾ ಭವೇತ್ ॥

ಎಂಬ ಪ್ರಮಾಣ ತಿಳಿಸುವಂತೆ ಸಾಧನಗಳ ಕಾರ್ಯಸಾಧನೆಯ ಸಮಗ್ರ ವ್ಯಕ್ತಿತ್ವ ವನ್ನು ನಿಯಂತ್ರಿಸುವವನು ತನ್ನ ಕಾರ್ಯಸಾಧನೆಗೆ ಅಂತಹ ನಾಧನಗಳನ್ನು ಬಳಸಿಕೊಂಡನೆಂದರೆ ಅದು ಅವನ ಸಾಮರ್ಥ್ಯದ ವೈಭವೀಕರಣವೆನಿಸಬಲ್ಲದೇ ಹೊರತು ಆ ನಾಧನಗಳಿಲ್ಲದೆ ಕಾರ್ಯಸಾಧನ ಅವನಿಂದ ಆಗದೆಂದು ಅವನ ಅಸಾಮರ್ಥ್ಯಕ್ಕೆ ದ್ಯೋತಕವೆನಿಸದು.

ಪಂಚಭೂತಗಳೇ ಮುಂತಾದ ಜಡ ಸಾಧನಗಳ ಜೊತೆಗೆ ಚತುರ್ಮುಖನೇ ಮುಂತಾದ ದೇವತೆಗಳನ್ನೂ ಸೃಷ್ಟ್ಯಾದಿಕಾರ್ಯಗಳಲ್ಲಿ ಪ್ರಯೋಜಕರನ್ನಾಗಿ ಬಳಸಿ ಕೊಳ್ಳುವ ಉದ್ದೇಶ ತನ್ನ ಐಶ್ವರ್ಯಪ್ರದರ್ಶನದ ಜೊತೆಗೆ ಆಯಾ ವ್ಯಕ್ತಿಗಳಿಗೆ ಪುಣ್ಯ, ಕೀರ್ತಿ ಮುಂತಾದವುಗಳನ್ನು ಅನುಗ್ರಹಿಸುವುದು.

ಸೃಷ್ಟಿಯ ವಿಷಯದಲ್ಲಿ ಕೈಗೊಳ್ಳಲಾದ ಈ ಸಿದ್ಧಾಂತ ಭಗವಂತನ ಪ್ರತಿ ಯೊಂದು ಚಟುವಟಿಕೆಗೂ ಸಂಬಂಧಪಡುವಂತೆ ಧೀ ಪ್ರಚೋದನೆಗೂ ಅನ್ವಯಿ ಸುತ್ತದೆ.

ಚೇತನರ ಧೀ ಪ್ರಚೋದನೆಯನ್ನು ಭಗವಂತನು ಇಂದ್ರಿಯಗಳೇ ಮುಂತಾದ ಜಡವಸ್ತುಗಳನ್ನೂ, ಇಂದ್ರಿಯಾಭಿಮಾನಿಗಳೇ ಮುಂತಾದ ವ್ಯಕ್ತಿಗಳನ್ನೂ ಮಾಧ್ಯಮ ರನ್ನಾಗಿಟ್ಟುಕೊಂಡು ನಡೆಸುವನು.

ಬುದ್ಧಿಗೆ ಅಭಿಮಾನಿನಿಯರು ಸರಸ್ವತೀ ಮತ್ತು ಭಾರತೀದೇವಿಯರು. ಅವರ ನಿಯಂತ್ರಣದಲ್ಲಿರುವ ಬುದ್ಧಿ ಉಂಟಾಗಲು ಪ್ರಯೋಜಕವಾದವು ಮನಸ್ಸು ಮತ್ತು ಐದು ಜ್ಞಾನೇಂದ್ರಿಯಗಳು–ಕಣ್ಣು (ಚಕ್ಷುರಿಂದ್ರಿಯ), ಮೂಗು (ಘ್ರಾಣೇಂದ್ರಿಯ), ಕಿವಿ (ಶ್ರೋತ್ರೇಂದ್ರಿಯ), ನಾಲಗೆ (ರಸನೇಂದ್ರಿಯ), ಚರ್ಮ (ತ್ವಗಿಂದ್ರಿಯ).

ಜಡಗಳಾದ ಈ ಇಂದ್ರಿಯಗಳನ್ನು ನಿಯಂತ್ರಿಸುವವರು ತತ್ತ್ವಾಭಿಮಾನಿ ದೇವತೆಗಳು. ಚಕ್ಷುರಿಂದ್ರಿಯವನ್ನು ಸೂರ್ಯನೂ, ಘ್ರಾಣೇಂದ್ರಿಯವನ್ನು ಅಶ್ವಿನೀ

ದೇವತೆಗಳೂ, ಶ್ರೋತ್ರೇಂದ್ರಿಯವನ್ನು ಚಂದ್ರ ಹಾಗೂ ದಿಗಭಿಮಾನಿಗಳೂ, ತ್ವಗಿಂದ್ರಿಯವನ್ನು ವಾಯುಪುತ್ರನೂ, ರಸನೇಂದ್ರಿಯವನ್ನು ಕುಬೇರನೂ ನಿಯಂತ್ರಿಸುವನು.

ಶ್ರೋತ್ರೇಂದ್ರಿಯವನ್ನು ಕೆಲವು ದಿಗಭಿಮಾನಿಗಳಷ್ಟೇ ನಿಯಂತ್ರಿಸುತ್ತಿದ್ದು, ಯಾರು ಯಾರು ಶ್ರೋತ್ರೇಂದ್ರಿಯವನ್ನು ಯಾವ ಯಾವ ವಿಷಯದಲ್ಲಿ ನಿಯಂತ್ರಿಸುತ್ತಾರೆ ಎಂಬ ವಿವರಣೆಯನ್ನೂ ಶಾಸ್ತ್ರ (ಐ.ಉ.ಭಾ. ೧–೪–೧೧) ನೀಡಿದೆ–

**ಮಿತ್ರೋ ಯಮಶ್ಚ ವರುಣಃ ಕುಬೇರಶ್ಚ ದಿಗೀಶ್ವರಾಃ ।**
**ಶ್ರೋತ್ರಾಭಿಮಾನಿನಃ ಸರ್ವೇ ವೈದಿಕಶ್ರವಣೋಚಿತಮ್ ॥**
**ಶ್ರೋತ್ರಂ ಚಂದ್ರಸ್ತಥಾ ಸ್ಮಾರ್ತತಾಂತ್ರಿಕಶ್ರವಣೋಚಿತಮ್ ।**
**ಯಮ ಏವ ಷಡಂಗಾನಾಂ ವಿಷಯಶ್ರವಣೋಚಿತಮ್ ॥**
**ಶ್ರೋತ್ರಂ ತು ವರುಣಃ ಕಾಮ್ಯಶಾಸ್ತ್ರಾರ್ಥಂ ಮಿತ್ರ ಏವ ಚ ।**
**ಶ್ರೋತ್ರಂ ಯನ್ನೀತಿಶಾಸ್ತ್ರಾರ್ಥಂ ಕುಬೇರಸ್ತತ್ ಪ್ರಕೀರ್ತಿತಃ ॥**

ಮಿತ್ರ, ಯಮ, ವರುಣ, ಕುಬೇರ –ಈ ದಿಕ್ಪಾಲಕರು ಶ್ರೋತ್ರೇಂದ್ರಿಯಕ್ಕೆ ಅಭಿಮಾನಿಗಳು. ಇದರಲ್ಲಿ ವೇದವಿದ್ಯಾಶ್ರವಣಕ್ಕೆ ಬೇಕಾಗುವ ಶ್ರೋತ್ರಸಾಮರ್ಥ್ಯವನ್ನು ಚಂದ್ರನು ನೀಡುವನು. ಸ್ಮೃತಿ ಮತ್ತು ಪಂಚರಾತ್ರಗಳ ಶ್ರವಣಕ್ಕೆ ಬೇಕಾಗುವ ಶಕ್ತಿಗೆ ಯಮ ನಿಯಾಮಕ. ವೇದದ ಆರು ಅಂಗಗಳ ಶ್ರವಣಕ್ಕೆ ಬೇಕಾಗುವ ಸಾಮರ್ಥ್ಯ ವರುಣನ ಅಧೀನ. ಕಾಮ್ಯಶಾಸ್ತ್ರಶ್ರವಣ ಮಾಡಿಸುವವನು ಮಿತ್ರ. ನೀತಿಶಾಸ್ತ್ರಶ್ರವಣಕ್ಕೆ ಬೇಕಾಗುವ ಸಾಮರ್ಥ್ಯ ಕುಬೇರನಿಂದ ಅನುಗ್ರಹೀತ.

ಈ ಐದೂ ಜ್ಞಾನೇಂದ್ರಿಯಗಳು ಮನಸ್ಸಿನ ಅಧೀನವಾದವುಗಳು. ಅಂತಹ ಮನಸ್ಸು ಅಂದರೆ ಅಂತಃಕರಣ ಐದು ಪ್ರಭೇದಗಳನ್ನೊಳಗೊಂಡಿದೆ– ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ ಹಾಗೂ ಚೇತನಾ.

ಇವುಗಳಲ್ಲಿ ಅದೃಢ ಬುದ್ಧಿಗೆ ಪ್ರಯೋಜಕವಾದ ಅಂತಃಕರಣದ ಭಾಗವು ಮನಸ್ಸು ಎನಿಸಿದರೆ, ದೃಢ ಬುದ್ಧಿಗೆ ಪ್ರಯೋಜಕವಾದ ಅಂತಃಕರಣದ ಭಾಗವು ಬುದ್ಧಿ ಎಂದೇ ವ್ಯವಹರಿಸಲ್ಪಡುವುದು. ಹೊರ ಪ್ರಪಂಚದ ಜೊತೆಗೆ ಆತ್ಮೀಯ ಸಂಬಂಧವನ್ನು ತಂದುಕೊಡುವ ಅಂತಃಕರಣಪ್ರಭೇದ ಅಹಂಕಾರ ಎನಿಸುವುದು. ಸ್ಮರಣೆಗೆ ಕಾರಣವಾದ ಅಂತಃಕರಣಪ್ರಭೇದ ಚಿತ್ತ ಎನಿಸಿದರೆ, ಬಹಳ ಸ್ಮರಣೆಗೆ–ಜನ್ಮಜನ್ಮಾಂತರದ ಸ್ಮರಣೆಗೆ ಕಾರಣವಾದ ಅಂತಃಕರಣದ ಭಾಗ ಚೇತನಾ ಎನಿಸುವುದು. ಇದಕ್ಕೆ ಚತುರ್ಮುಖನು ಅಭಿಮಾನಿ.

ಮತ್ತೊಂದು ಪ್ರಮಾಣ (ಭಾಗ.ತಾ.ನಿ. ೩–೨೭–೩೨) ಮನಸ್ಸಿನ, ಬುದ್ಧಿಯ ಹಾಗೂ ಚಿತ್ತದ ಕಾರ್ಯವೈಚಿತ್ರ್ಯವನ್ನು ಹೀಗೆ ಪರಿಚಯಿಸುತ್ತಿದೆ–

**ಸಾಮಾನ್ಯಂ ಮನಸಾ ಜ್ಞಾನಂ ವಿಶೇಷಾದ್ ಬುದ್ಧಿಜಂ ಭವೇತ್ ।**
**ಅಚಲಃ ಸಂಶಯೋ ಬುದ್ಧೇಶ್ಚಲೋ ಮಾನಸ ಉಚ್ಯತೇ ।**

**ಚಂಚಲಾ ತು ಸ್ಮೃತಿರ್ಬುದ್ಧಿಶ್ಚಿತ್ತಜೈವ ಸ್ಥಿರಾ ಸ್ಮೃತಿಃ ॥**

ಮನಸ್ಸಿನಿಂದ ಸಾಮಾನ್ಯಜ್ಞಾನ ಬರುವುದಾದರೆ, ಬುದ್ಧಿಯಿಂದ ವಿಶೇಷಜ್ಞಾನ ಉಂಟಾಗುವುದು. ಮನಸ್ಸಿನಿಂದ ಚಂಚಲ ಸಂಶಯ ಉಂಟಾಗುವುದಾದರೆ, ಬುದ್ಧಿಯಿಂದ ಉಂಟಾಗುವ ಸಂಶಯ ದೃಢವಾದುದು. ಬುದ್ಧಿಯಿಂದ ಉಂಟಾಗುವ ಸ್ಮರಣೆ ಚಂಚಲ, ಚಿತ್ತದಿಂದ ಸ್ಥಿರವಾದ ಸ್ಮರಣೆ ಉಂಟಾಗುವುದು.

ಹೀಗೆ ವೈಚಿತ್ರ್ಯಪೂರ್ಣವಾದ ಮನಸ್ಸನ್ನು ನಿಯಂತ್ರಿಸುವವರು ಶೇಷ, ಗರುಡ ಹಾಗೂ ರುದ್ರ. ಇವರು ಮನಸ್ಸಿನ ಒಂದೊಂದು ಅಂಶವನ್ನು ಪ್ರತ್ಯೇಕವಾಗಿ ನಿಯಂತ್ರಿಸುವವರು–

**ಶೇಷಃ ಸುಪರ್ಣಃ ಇಂದ್ರಶ್ಚ ಮನಾಂಸ್ಯೇವ ಪೃಥಕ್ ಪೃಥಕ್ ।**
**ಅಹಂಭಾವಮನೋ ರುದ್ರಃ ಶೇಷೋಽಸೌ ಪಾಂಚರಾತ್ರಕಮ್ ।**
**ವೈದಿಕಂ ಗರುಡಶ್ಚೇಂದ್ರೋ ಯಜ್ಞಾದಿವಿಷಯಂ ಮನಃ ॥**

ಎಂಬುದಾಗಿ (ಐ.ಉ.ಭಾ. ೧–೩–೭) ಬಾಹ್ಯಪ್ರಪಂಚದ ಜೊತೆಗೆ ಆತ್ಮೀಯತೆಯ ಸಂಬಂಧದ ಅರಿವಿಗೆ ಪೋಷಕವಾಗುವ ಮನಸ್ಸಿನ ಭಾಗವನ್ನು ರುದ್ರನೂ, ಪಂಚರಾತ್ರಜ್ಞಾನಕ್ಕೆ ಪೋಷಕವಾಗುವ ಮನಸ್ಸಿನ ಭಾಗವನ್ನು ಶೇಷನೂ, ವೇದಜ್ಞಾನಕ್ಕೆ ಪೋಷಕವಾಗುವ ಮನಸ್ಸನ್ನು ಗರುಡನೂ, ಯಜ್ಞಾದಿ ವಿಷಯಕಜ್ಞಾನಕ್ಕೆ ಪೋಷಕವಾಗುವ ಮನಸ್ಸನ್ನು ಇಂದ್ರನೂ ನಿಯಂತ್ರಿಸುವನು.

ಮುಂದೆ (ಐ.ಉ.ಭಾ. ೧–೪–೧೧) ಯಜ್ಞಾದಿಸಾಧನೆಗೆ ಪೋಷಕವಾಗುವ ಮನಸ್ಸಿನ ನಿಯಾಮಕ ಚಂದ್ರ ಎಂದು ತಿಳಿಸಲಾಗಿದೆ–

**ಯಜ್ಞಾದಿಸಾಧನೇ ಯತ್ತು ಮನಶ್ಚಂದ್ರಃ ಪ್ರಕೀರ್ತಿತಃ ॥**

ವರುಣನು ಭಗವಂತನ ಮನಸ್ಸಿನಿಂದ ಹುಟ್ಟಿದ್ದು, ಚೇತನರಿಗೆ ಜಲಾಶಯ ನಿರ್ಮಾಣ ಮುಂತಾದ ಪುಣ್ಯಕರ್ಮಗಳಲ್ಲಿ ಶ್ರದ್ಧಾರೂಪದಿಂದ ಪರಿಣಮಿಸುವ ಮನಸ್ಸಿಗೆ ಅಭಿಮಾನಿ ಎಂದು (ಐ.ಉ.ಭಾ. ೧–೫–೬) ತಿಳಿಸಲಾಗಿದೆ–

**......ವರುಣಶ್ಚ ಮನೋಭವಃ ।**
**ಪ್ರಾಣಿನಾಂ ಪೂರ್ತಪುಣ್ಯೇಷು ಶ್ರದ್ಧಾರೂಪಮನೋಽಧಿಪಃ ॥**

ಹೀಗೆ ಭಗವಂತನು ಬುದ್ಧಿಯನ್ನು ಪ್ರೇರಿಸುವಾಗ ಅದಕ್ಕೆ ಬೇಕಾಗುವಂತೆ ಇಂದ್ರಿಯಗಳನ್ನೂ, ಅವುಗಳ ಅಭಿಮಾನಿಗಳನ್ನೂ, ಮನಸ್ಸನ್ನೂ, ಅದರ ಅಭಿಮಾನಿಯನ್ನೂ, ಬುದ್ಧಿಯ ಅಭಿಮಾನಿನಿಯರನ್ನೂ ಪ್ರೇರಿಸಿ ಆಯಾ ವ್ಯಕ್ತಿಯ ಸ್ವಭಾವಕ್ಕನುಗುಣವಾಗಿ ಬುದ್ಧಿ ಹುಟ್ಟಿಕೊಳ್ಳುವಂತೆ ಮಾಡುವನು.

ಆದುದರಿಂದ ಅವನ ಬುದ್ಧಿಪ್ರೇರಣೆಯ ಹಿನ್ನೆಲೆಯ ಬೇರೆ ಬೇರೆ ಬಗೆಯ ಪ್ರೇರಣೆಯ ಚಟುವಟಿಕೆಗಳನ್ನು ವಿಶ್ಲೇಷಿಸಿಕೊಂಡು ಅವನಿಂದ ನಡೆಯುವ ಬುದ್ಧಿಪ್ರೇರಣೆಯ ವೈಖರಿಯನ್ನು ಅನುಸಂಧಾನಕ್ಕೆ ತಂದುಕೊಂಡಲ್ಲಿ ಅದರಿಂದ ಅವನ ಮಹಿಮಾತಿಶಯವು ಮನವರಿಕೆಯಾಗಬಲ್ಲದು. *

# ಗಾಯತ್ರಿಯ ಅಂಗನ್ಯಾಸಾದಿಗಳು

ಬನ್ನಂಜೆ ಗೋವಿಂದಾಚಾರ್ಯ

**ಋಷಿ–ಛಂದಸ್ಸು–ದೇವತೆ.**

ಯಾವುದೇ ಮಂತ್ರವನ್ನು ಪಠಿಸುವಾಗ, ಜಪಿಸುವಾಗ, ಅಧ್ಯಾಪಿಸುವಾಗ ಅದರ ಋಷಿ–ಛಂದಸ್ಸು–ದೇವತೆಗಳನ್ನೂ ಅದರ ಅರ್ಥವನ್ನೂ ತಿಳಿದುಕೊಂಡಿರಬೇಕು ಎಂದು ಶಾಸ್ತ್ರಕಾರರ ವಚನವಿದೆ. ಋಗ್ಭಾಷ್ಯದಲ್ಲಿ ಆಚಾರ್ಯರು ಉದಾಹರಿಸಿದ ಸ್ಮೃತಿಯೂ ಇದೇ ಅರ್ಥವನ್ನು ಪ್ರತಿಪಾದಿಸುತ್ತದೆ–

**ಋಷಿಚ್ಛಂದೋದೈವತಾನಿ ಜ್ಞಾತ್ವಾರ್ಥಂ ಚೈವ ಭಕ್ತಿತಃ ।**
**ಸ್ವಾಧ್ಯಾಯೇನೈವ ಮೋಕ್ಷಃ ಸ್ಯಾದ್ವಿರಕ್ತಸ್ಯ ಹರಿಸ್ಮೃತೇಃ ॥**

ಛಂದಸ್ಸನ್ನು ತಿಳಿದುಕೊಳ್ಳುವುದು ಎಂದಾಗ ಪದ್ಯದ ಅಕ್ಷರಗಣನೆಯನ್ನು ಮಾಡಿ ಯಾವ ವೃತ್ತ ಎಂದು ತಿಳಿದುಕೊಳ್ಳುವುದಷ್ಟೇ ಅಲ್ಲ. ಆ ಛಂದಸ್ಸಿನ ದೇವತೆಯನ್ನೂ ತಿಳಿದುಕೊಳ್ಳಬೇಕು. ಈ ಮಾತನ್ನು ಆಚಾರ್ಯರು ಋಗ್ಭಾಷ್ಯದಲ್ಲಿ ಸ್ಫುಟಗೊಳಿಸಿದ್ದಾರೆ–

**ಛಂದಸ್ತ್ವೇನ ಮುನಿತ್ವೇನ ತಾಸಾಂ ಸ್ಮೃತಿರುದಾಹೃತಾ ।**

ರಾಘವೇಂದ್ರಯತಿಗಳೂ ಈ ಮಾತನ್ನು ಬರೆದಿದ್ದಾರೆ–

**ಛಂದಪದಸ್ಯ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್ ಇತ್ಯತ್ರೋಕ್ತದಿಶಾ ಮುಖ್ಯಾಮುಖ್ಯವೃತ್ತಿಭ್ಯಾಮಭಿಮಾನ್ಯಭಿಮನ್ಯಮಾನೋಭಯಪರತ್ವಾತ್**

*(ಮಂತ್ರಾರ್ಥಮಂಜರೀ)*

ಆದುದರಿಂದ ಗಾಯತ್ರೀಮಂತ್ರವನ್ನು ಜಪಿಸುವ ಮೊದಲು ಗಾಯತ್ರಿಯ ಋಷಿ, ಛಂದಸ್ಸು, ದೇವತೆಗಳನ್ನು ಸ್ಮರಿಸಿಕೊಳ್ಳಬೇಕು.

ತಲೆಯನ್ನು ಸ್ಪರ್ಶಿಸಿಕೊಂಡು ಋಷಿಯನ್ನೂ, ಬಾಯಿಯನ್ನು ಸ್ಪರ್ಶಿಸಿಕೊಂಡು ಛಂದಸ್ಸನ್ನೂ, ಹೃದಯವನ್ನು ಸ್ಪರ್ಶಿಸಿಕೊಂಡು ದೇವತೆಯನ್ನೂ ಸ್ಮರಿಸಿಕೊಳ್ಳುವ ಪದ್ಧತಿ.

ಋಷಿಗೆ ತಲೆಬಾಗಿ ಮಣಿಯುತ್ತೇನೆ ಎಂಬ ಅನುಸಂಧಾನ ಋಷಿನಾಮವನ್ನು ಪಠಿಸಿ ತಲೆಯನ್ನು ಸ್ಪರ್ಶಿಸುವಾಗ ಇರಬೇಕಾದದ್ದು. ಛಂದೋಭಿಮಾನಿ ದೇವತೆಗಳು ವಾಗಿಂದ್ರಿಯದಲ್ಲೂ, ನಾಲಗೆ ಮುಂತಾದವುಗಳಲ್ಲೂ ಸನ್ನಿಹಿತರಾಗಿದ್ದುಕೊಂಡು ಮಂತ್ರದ ಉಚ್ಚಾರಣೆ ಸರಿಯಾಗಿ ನಡೆಯುವಂತೆ ಅನುಗ್ರಹಿಸಲಿ ಎಂಬ ಅನುಸಂಧಾನ ಛಂದಸ್ಸಿನ ನಾಮವನ್ನು ಪಠಿಸಿ ತುಟಿಗಳನ್ನು ಸ್ಪರ್ಶಿಸುವಾಗ ಇರಬೇಕಾದದ್ದು. ಮಂತ್ರಪ್ರತಿಪಾದ್ಯದೇವತೆ ಹೃದಯದಲ್ಲಿದ್ದುಕೊಂಡು ಜಪಾನು

ಷ್ಠಾನದ ಅವಧಿಯಲ್ಲಿ ಬೇಕಾದ ಪ್ರಜ್ಞೆಯನ್ನೂ, ಭಕ್ತಿಯನ್ನೂ ಅಭಿವೃದ್ಧಿ ಪಡಿಸುತ್ತಿರಲಿ ಎಂಬ ಅನುಸಂಧಾನ ದೇವತೆಯ ನಾಮಪಠಿಸಿ ಹೃದಯವನ್ನು ಸ್ಪರ್ಶಿಸಿಕೊಳ್ಳುವಾಗ ಇರಬೇಕಾದದ್ದು.

ಗಾಯತ್ರೀಮಂತ್ರವನ್ನು ಜಪಿಸುವಾಗ ಈ ಮಂತ್ರಕ್ಕೆ ಋಷಿಗಳಾದ ವಿಶ್ವಾಮಿತ್ರರನ್ನು ಸ್ಮರಿಸಿಕೊಳ್ಳುತ್ತ, ತಲೆಬಾಗಿ ಗೌರವಿಸುವ ಕ್ರಿಯೆಯನ್ನು ತಲೆಮುಟ್ಟಿ ನೆನಪಿಸಿಕೊಳ್ಳಲಾಗುವುದು.

ಗಾಯತ್ರೀಮಂತ್ರಕ್ಕೆ ಛಂದಸ್ಸು ಗಾಯತ್ರೀ. ಇಪ್ಪತ್ತನಾಲ್ಕು ಅಕ್ಷರಗಳ ಮೂರು ಪಾದದ ಈ ಛಂದಸ್ಸಿನ ಅಭಿಮಾನಿದೇವತೆಗಳು–

"ಗಾಯತ್ರೀ ಬೃಹತೀ ಚೈವ ತಾಃ ಸರ್ವಾ ಗರುಡಸ್ತಥಾ"

(ಋಗ್ಭಾಷ್ಯ)

ಎಂದಿರುವಂತೆ ಶ್ರೀ ಸರಸ್ವತೀ, ಭಾರತೀ, ಗರುಡ ಹಾಗೂ ಸ್ವಾಹಾದೇವಿ. 'ಗಾಯತ್ರೀ ಛಂದಃ' ಎಂದು ಹೇಳುತ್ತ ತುಟಿಗಳನ್ನು ಸ್ಪರ್ಶಿಸುವಾಗ ಗಾಯತ್ರೀ ಛಂದಸ್ಸಿನ ಲಕ್ಷ್ಮಿಯೇ ಮುಂತಾದ ಐದು ದೇವತೆಗಳು ನನ್ನ ವಾಗಿಂದ್ರಿಯದಲ್ಲೂ, ನಾಲಗೆ–ತುಟಿ–ಹಲ್ಲು ಮುಂತಾದವುಗಳಲ್ಲೂ ಇದ್ದುಕೊಂಡು ಗಾಯತ್ರೀಮಂತ್ರದ ಉಚ್ಚಾರಣೆ ಸರಿಯಾಗಿ ನಡೆಯುವಂತೆ ಅನುಗ್ರಹಿಸಲಿ ಎಂದು ಪ್ರಾರ್ಥಿಸಿಕೊಳ್ಳಬೇಕು.

ಗಾಯತ್ರೀಮಂತ್ರದ ದೇವತೆ ಸವಿತೃನಾಮಕ ನಾರಾಯಣ. 'ಸವಿತಾ ದೇವತಾ' ಎಂದು ಹೇಳುತ್ತ ಎದೆಯನ್ನು ಸ್ಪರ್ಶಿಸಿಕೊಳ್ಳುವಾಗ ಸವಿತಾ ಎನಿಸುವ ನಾರಾಯಣನು ನನ್ನ ಹೃದಯದಲ್ಲಿದ್ದುಕೊಂಡು ಗಾಯತ್ರೀಮಂತ್ರದ ಅರ್ಥಾನುಸಂಧಾನಕ್ಕೆ ಬೇಕಾದ ಜ್ಞಾನಭಕ್ತಿಗಳನ್ನು ಪ್ರೇರಿಸುತ್ತಿರಲಿ ಎಂದು ಪ್ರಾರ್ಥಿಸಿಕೊಳ್ಳಬೇಕು.

## ಕರನ್ಯಾಸ–ಅಂಗನ್ಯಾಸ:

'ನ್ಯಾಸ' ಎಂಬ ಶಬ್ದಕ್ಕೆ ಸಂಸ್ಕೃತದಲ್ಲಿ ನಿಕ್ಷೇಪ, ಇಡುವುದು (ನಿ+ಅಸ, 'ಅಸು ಕ್ಷೇಪಣೇ') ಎಂದರ್ಥ. ಕರೇ ನ್ಯಾಸಃ - ಕರನ್ಯಾಸಃ. ನಮ್ಮ ಕರದ ಐದು ಬೆರಳುಗಳಲ್ಲೂ ಹಾಗೂ ಅಂಗೈಯ ಎದುರುಭಾಗ ಮತ್ತು ಹಿಂಭಾಗಗಳಲ್ಲೂ ಮಂತ್ರಪೂತವಾದ ಬೆರಳನ್ನು ಇಡುವುದು. ಹಾಗೆಯೇ 'ಅಂಗೇಷು ನ್ಯಾಸಃ–ಅಂಗನ್ಯಾಸಃ' ನಮ್ಮ ಅಂಗಗಳಲ್ಲಿ ಮಂತ್ರಪೂತವಾದ ಕರವನ್ನು ಇಡುವುದು ಎಂದು ಈ ಪದದ ಅರ್ಥ. ಅಥವಾ ಕರದಲ್ಲಿ, ಅಂಗಗಳಲ್ಲಿ ಭಗವದ್ರೂಪಗಳ ನ್ಯಾಸ ಅಂದರೆ ವಿಶೇಷವಾಗಿ ಸನ್ನಿಧಾನಹೊಂದುವಂತೆ ಮಾಡುವಿಕೆ ಎಂಬುದು ಕರನ್ಯಾಸ, ಅಂಗನ್ಯಾಸದ ಆಶಯ.

## ನಮ ಆದಿ ಪದಗಳ ಅರ್ಥ:

'ಕರನ್ಯಾಸ' 'ಅಂಗನ್ಯಾಸ'ಗಳಲ್ಲಿ ಇರುವ 'ನಮಃ' ಎಂದರೆ ನಮಸ್ಕಾರವೆಂದೇ ಅರ್ಥ. 'ಹುಂ' 'ಫಟ್' ಎಂದರೆ ಏನೋ ಶತ್ರುಗಳನ್ನು ಬೆದರಿಸುವ ಅನುಕರಣೆಯ ಧ್ವನಿಗಳಷ್ಟೇ ಎಂದು ಹೆಚ್ಚು ಮಂದಿ ತಿಳಿದುಕೊಂಡಿರುತ್ತಾರೆ. ಅದೂ ಹೌದು. ಆದರೆ ಅಷ್ಟೇ ಅಲ್ಲ.

ಇಲ್ಲಿ ಚತುರ್ಥ್ಯಂತಪದಗಳೊಟ್ಟಿಗೆ ಉಕ್ತಗಳಾದ 'ನಮಃ' 'ಸ್ವಾಹಾ' 'ವಷಟ್' 'ಹುಂ' 'ಫಟ್' ಎಂಬ ಎಲ್ಲ ಪದಗಳೂ ತ್ಯಾಗ ಅಥವಾ ದಾನ ಎಂಬ ಅರ್ಥವನ್ನು ಹೇಳುತ್ತವೆ.

ಷಡಂಗನ್ಯಾಸದಲ್ಲಿ ಬರುವ 'ವೌಷಟ್' ಎಂಬ ಪದವೂ ಇದೇ ಅರ್ಥವನ್ನು ಹೇಳುತ್ತದೆ–

ನಮಸ್ ತ್ಯಾಗೇ, ಸ್ವಸ್ವತ್ವಧ್ವಂಸಾನುಕೂಲವ್ಯಾಪರಭೇದೇ (ವಾಚ.). 'ಪುಷ್ಪಮಿದಂ ವಿಷ್ಣವೇ ನಮಃ' ಇತ್ಯಸ್ಯ ವಿಷ್ಣೂದ್ದೇಶ್ಯಕಮಂತ್ರಕರಣತ್ಯಾಗಸ್ಯ ಕರ್ಮೇದಂ ಪುಷ್ಪಮಿತ್ಯರ್ಥಃ (ಶಬ್ದಶಕ್ತಿಪ್ರಕಾಶಿಕಾ) "ಸ್ವಾಹಾ ದೇವಹವಿರ್ದಾನೇ ಶ್ರೌಷಡ್ವೌಷಡ್ವಷಟ್ ಸ್ವಧಾ" (ಅಮರ.). ಹುಮ್ ನಿವಾರಣೇ (ವಾಚ.).

ನಿವಾರಣೆಯಷ್ಟೇ ಏನು ದಾನ ಕೂಡ. ಅವ್ಯಯಗಳಿಗೆ ನಿರ್ದಿಷ್ಟವಾದ ಅರ್ಥವನ್ನು ಸಂದರ್ಭಬಲದಿಂದ ತಾನೆ ತಿಳಿದುಕೊಳ್ಳಬೇಕು.

ಫಟ್ ಅನುಕರಣಶಬ್ದೇ, ನಮ ಆದಿವದ್ದ್ರವ್ಯವಿಶೇಷಸ್ಯ ತ್ಯಾಗಾರ್ಥತಾಽಪಿ (ವಾಚ.).

## ಕರನ್ಯಾಸದ ಮಂತ್ರಾರ್ಥ:

ಗಾಯತ್ರಿಯ ಕರನ್ಯಾಸದ ಹಾಗೂ ಅಂಗನ್ಯಾಸದ ಪ್ರತಿಯೊಂದು ಪದವೂ ಪ್ರಾತಿಸ್ವಿಕವಾಗಿ ಭಗವದ್ವಾಚಕವಾಗಿದೆ ಎಂತಲೇ ಚತುರ್ಥ್ಯಂತಗಳಾದ ಅಂಗುಷ್ಠಾದಿ ಪದಗಳಿಂದ ಅನ್ವಿತವಾಗಬಲ್ಲವು.

**'ತತ್ಸವಿತುಃ ಅಂಗುಷ್ಠಾಭ್ಯಾಂ ನಮಃ'** ನನ್ನ ಅಂಗುಷ್ಠಗಳಲ್ಲಿದ್ದು ಅಂಗುಷ್ಠ ಶಬ್ದವಾಚ್ಯನಾದ ಗುಣಪೂರ್ಣನಾದ, ಸೃಷ್ಟಿಕರ್ತನಾದ ಭಗವಂತನಿಗೆ ಈ ದೇಹ ಅರ್ಪಿತ.

**'ವರೇಣ್ಯಂ ತರ್ಜನೀಭ್ಯಾಂ ನಮಃ'** ನನ್ನ ತೋರ್ಬೆರಳುಗಳಲ್ಲಿ ತರ್ಜನೀ ಶಬ್ದವಾಚ್ಯನಾಗಿದ್ದು, ಎಲ್ಲರಿಂದ ಆಶ್ರಯಣೀಯನಾದ ಭಗವಂತನಿಗೆ ಈ ದೇಹ ಅರ್ಪಿತ.

**'ಭರ್ಗೋ ದೇವಸ್ಯ ಮಧ್ಯಮಾಭ್ಯಾಂ ನಮಃ'** ನನ್ನ ನಡುಬೆರಳುಗಳಲ್ಲಿ ಮಧ್ಯಮ ಹೆಸರಿನಿಂದ ಇರುವ ಜ್ಞಾನಾನಂದಾತ್ಮಕಜ್ಯೋತಿಃಸ್ವರೂಪಿಯಾದ, ಸತ್ಯಸಂಕಲ್ಪನಾದ ಭಗವಂತನಿಗೆ ಈ ದೇಹ ಅರ್ಪಿತ.

'ಧೀಮಹಿ ಅನಾಮಿಕಾಭ್ಯಾಂ ನಮಃ' ನನ್ನ ಉಂಗುರ ಬೆರಳುಗಳಲ್ಲಿ ಅನಾಮಿಕಾ ಹೆಸರಿನಿಂದ ಇದ್ದು ಭೂಮಿಯನ್ನು ಪೋಷಿಸುವ ಭಗವಂತನಿಗೆ ಈ ದೇಹ ಅರ್ಪಿತ.

'ಧಿಯೋ ಯೋ ನಃ ಕನಿಷ್ಠಿಕಾಭ್ಯಾಂ ನಮಃ' ನನ್ನ ಕಿರುಬೆರಳುಗಳಲ್ಲಿ ಕನಿಷ್ಠಿಕಾ ಹೆಸರಿನಿಂದ ಇರುವ ಜ್ಞಾನಸ್ವರೂಪಿಯಾದ, ಪೂರ್ಣನಾದ, ಚೇಷ್ಟಕನಾದ ಭಗವಂತನಿಗೆ ಈ ದೇಹ ಅರ್ಪಿತ.

'ಪ್ರಚೋದಯಾತ್ ಕರತಲಕರಪೃಷ್ಠಾಭ್ಯಾಂ ನಮಃ' ನನ್ನ ಅಂಗೈ ಮುಂಗೈಗಳಲ್ಲಿ ಕರತಲಕರಪೃಷ್ಠ ಹೆಸರುಗಳಿಂದ ಇರುವ ಪ್ರೇರಕನಾದ ಭಗವಂತನಿಗೆ ಈ ದೇಹ ಅರ್ಪಿತ.

## ಅಂಗನ್ಯಾಸದ ಮಂತ್ರಾರ್ಥ:

'ತತ್ಸವಿತುಃ ಹೃದಯಾಯ ನಮಃ' ನನ್ನ ಹೃದಯದಲ್ಲಿದ್ದು ಹೃದಯ ಎನಿಸುವ ಗುಣಪೂರ್ಣನಾದ ಸರ್ವಸ್ರಷ್ಟಾರನಾದ ಭಗವಂತನಿಗೆ ಈ ದೇಹ ಸಮರ್ಪಿತ.

'ವರೇಣ್ಯಂ ಶಿರಸೇ ಸ್ವಾಹಾ' ನನ್ನ ಶಿರಸ್ಸಿನಲ್ಲಿ 'ಶಿರಃ' ಪದವಾಚ್ಯನಾಗಿದ್ದು ಆಶ್ರಯಣೀಯನಾಗಿರುವ ಭಗವಂತನಿಗೆ ಈ ದೇಹ ಸಮರ್ಪಿತ.

'ಭರ್ಗೋ ದೇವಸ್ಯ ಶಿಖಾಯೈ ವಷಟ್' ನನ್ನ ಶಿಖೆಯಲ್ಲಿ ಶಿಖಾನಾಮಕನಾಗಿರುವ ಪೋಷಕನಾದ, ಚಾಲಕನಾದ, ಬೆಳಗುವ ಭಗವಂತನಿಗೆ ಈ ಶರೀರ ಸಮರ್ಪಿತ.

'ಧೀಮಹಿ ಕವಚಾಯ ಹುಮ್' ಭೂಮಿಯನ್ನು ಪೋಷಿಸುವ ಶತ್ರುಗಳಿಂದ ಭಕ್ತರಿಗೆ ರಕ್ಷಕನಾಗಿ 'ಕವಚ' ಶಬ್ದವಾಚ್ಯನಾಗಿ ನನ್ನ ಕವಚಮುದ್ರೆಯಲ್ಲಿ ಸನ್ನಿಹಿತನಾಗಿ 'ಹುಂ'ಕಾರಮಾತ್ರದಿಂದ ನನ್ನ ಅರಿಷಡ್ವರ್ಗವನ್ನು ನಿಗ್ರಹಿಸಲಿ ಎಂದು ಅವನಿಗೆ ಈ ದೇಹ ಸಮರ್ಪಿತ.

'ಧಿಯೋ ಯೋ ನಃ ನೇತ್ರಾಭ್ಯಾಂ ವೌಷಟ್' ನನ್ನ ಕಣ್ಣುಗಳಲ್ಲಿ ನೇತ್ರನಾಮಕನಾಗಿ ಇರುವ ಜ್ಞಾನರೂಪಿಯಾದ, ಪೂರ್ಣನಾದ, ಚೇಷ್ಟಕನಾದ ಭಗವಂತನಿಗೆ ಈ ಶರೀರ ಅರ್ಪಿತ.

'ಪ್ರಚೋದಯಾತ್ ಅಸ್ತ್ರಾಯ ಫಟ್' ಪ್ರೇರಿಸುವ, ಶತ್ರುಗಳನ್ನು ಸದೆಬಡಿಯುವ ನನ್ನ ಅಸ್ತ್ರಮುದ್ರೆಯಲ್ಲಿ ಸನ್ನಿಹಿತನಾಗಿರುವ ಭಕ್ತಬಂಧುವಿಗೆ ಈ ಮೂರ್ತಿ ಅರ್ಪಿತ.

ಹೀಗೆ ಈ ಮಂತ್ರಗಳಿಂದ ಭಗವಂತನ ನಾನಾ ವಿಭೂತಿರೂಪಗಳ ರಕ್ಷೆಯನ್ನು ಕೋರಿ ಆ ರೂಪಗಳಿಂದ ಸುರಕ್ಷಿತವೂ, ಪವಿತ್ರವೂ ಆದ ಮನಸ್ಸಿನಿಂದ ಜಪವನ್ನು ಮಾಡುವುದೇ ಈ ನ್ಯಾಸದ ಉದ್ದೇಶ ಎಂಬುದು ಸ್ಫುಟವಾಗಿದೆ.

*

# ಪರಶುರಾಮನ ಸ್ತುತಿ

ಸಗ್ರಿ ರಾಘವೇಂದ್ರ ಉಪಾಧ್ಯಾಯ

ಬೃಹದಾರಣ್ಯಕೋಪನಿಷತ್ತು (೭-೧೯-೯) '.....ತಸ್ಯಾ ಅಗ್ನಿರೇವ ಮುಖಂ.....' -ಎಂಬುದಾಗಿ ಗಾಯತ್ರಿಯ ಮೊದಲ ವರ್ಣದಲ್ಲಿ ಅಗ್ನ್ಯಂತರ್ಗತ ಪರಶುರಾಮನ ಚಿಂತನೆ ನಡೆಸಬೇಕೆಂದು ತಿಳಿಸಿ, ಮುಂದಿನ ಬ್ರಾಹ್ಮಣದಲ್ಲಿ 'ಹಿರಣ್ಮಯೇನ ಪಾತ್ರೇಣ......' ಎಂದು ಪ್ರಾರಂಭವಾಗುವ ಐದು ಮಂತ್ರಗಳ ಒಂದು ಸ್ತುತಿಯನ್ನು ಪ್ರಸ್ತುತಪಡಿಸುತ್ತದೆ. ಈಶಾವಸ್ಯೋಪನಿಷತ್ತಿನ ಕೊನೆಯಲ್ಲೂ ಉಲ್ಲೇಖಗೊಂಡಿರುವ ಈ ಐದು ಮಂತ್ರಗಳ ಸ್ತುತಿ ಯಾವ ಭಗವದ್ರೂಪದ ಬಗ್ಗೆ ಹೊರಟಿರುವಂತಹದ್ದೆಂದು ಅಲ್ಲಿ ಸುಳುಹು ದೊರಕುವುದಿಲ್ಲ.

ಆದರೆ ಬೃಹದಾರಣ್ಯಕೋಪನಿಷತ್ತಿನ ಏಳನೇ ಅಧ್ಯಾಯದ ಇಪ್ಪತ್ತನೇ ಬ್ರಾಹ್ಮಣವಾಗಿ ಪಠಿತವಾಗುವಾಗ, ಏಳನೇ ಅಧ್ಯಾಯದ ಹತ್ತೊಂಭತ್ತನೇ ಬ್ರಾಹ್ಮಣದ ಉಪಸಂಹಾರದಲ್ಲಿ ಗಾಯತ್ರೀಪ್ರತಿಪಾದ್ಯನಾಗಿ, ಅಗ್ನಿನಾಮಕನಾಗಿ ಪ್ರಸ್ತುತನಾದ ಪರಶುರಾಮನ ಸ್ತುತಿಯ ರೂಪದಲ್ಲಿ ಅದು ಇದೆ ಎಂದು ತಿಳಿದು ಬರುವುದು.

ಆ ಐದು ಮಂತ್ರಗಳ ಸ್ತುತಿಯ ಮೂರು ಮಂತ್ರಗಳಲ್ಲಿ ಸೂರ್ಯ ಮಂಡಲದ ಪ್ರತೀಕದಲ್ಲಿರುವ ಭಗವಂತನ ಪ್ರತಿಪಾದನೆ ನಡೆದರೆ, ಕೊನೆಯ ಮಂತ್ರದಲ್ಲಿ ಅಗ್ನಿಪ್ರತೀಕದಲ್ಲಿರುವ ಭಗವಂತನ ಪ್ರತಿಪಾದನೆ ನಡೆದಿದೆ. ಭಗವಂತನ ಪರಶುರಾಮರೂಪ ಗಾಯತ್ರೀಪ್ರತಿಪಾದ್ಯವಾಗಿ ಸೂರ್ಯಮಂಡಲ ದಲ್ಲಿರುವಂತಹದ್ದಾಗಿಯೂ ಉಲ್ಲೇಖಿಸಲ್ಪಡಬಹುದು; ಅಗ್ನಿಪ್ರತೀಕದಲ್ಲಿರುವುದ ರಿಂದ ಅಗ್ನಿ ಶಬ್ದವನ್ನೊಳಗೊಂಡ ಪದ್ಯದಿಂದಲೂ ಪ್ರತಿಪಾದಿಸಲ್ಪಡಬಹುದು.

ಪರಶುರಾಮ ಸಪ್ತರ್ಷಿಗಳಲ್ಲಿ ಒಬ್ಬನಾಗಿ ಪರಿಗಣಿಸಲ್ಪಡುವುದರಿಂದ 'ಏಕರ್ಷೇ' ಎಂಬ ಸಂಬೋಧನೆಯಿಂದ, ದುಷ್ಟ ಕ್ಷತ್ರಿಯರನ್ನೆಲ್ಲ ನಿಗ್ರಹಿಸಿರುವುದರಿಂದ 'ಯಮ' ಎಂಬ ಸಂಬೋಧನೆಯಿಂದ ಪ್ರತಿಪಾದ್ಯನಾಗುವುದರಲ್ಲಿ ಔಚಿತ್ಯವಿದೆ.

ಪರಶುರಾಮನನ್ನೂ ಗಾಯತ್ರೀಪ್ರತಿಪಾದ್ಯನನ್ನಾಗಿ ತಿಳಿದಲ್ಲಿ "**......ಏವಂ ವಿದ್ ಯದ್ಯಪಿ ಬಹ್ವಿವ ಪಾಪಂ ಕುರುತೇ ಸರ್ವಮೇವ ತತ್ ಸಂಪ್ಸಾಯ ಶುದ್ಧಃ ಪೂತೋಽಜರೋಽಮೃತಃ ಸಂಭವತಿ**" ಎಂಬ ಬೃಹದಾರಣ್ಯಕೋಪನಿಷತ್ತಿನಲ್ಲಿ ಅಗ್ನಿನಾಮಕ ಪರಶುರಾಮನನ್ನು ತಿಳಿದವನಿಗೆ ದೊರಕುವ ಫಲವನ್ನು ತಿಳಿಸುವ ಫಲಶ್ರುತಿಯಲ್ಲಿ ಅಗ್ನಿನಾಮಕ ಪರಶುರಾಮನನ್ನು ತಿಳಿದಲ್ಲಿ ಎಲ್ಲ ಪಾಪ ಪರಿಹಾರವಾಗಿ, ಶುದ್ಧನಾಗಿ ಮೋಕ್ಷಾವಸ್ಥೆಗೆ ಅರ್ಹನಾಗುವನೆಂದು ಬಂದಿರುವ ನಿರೂಪಣೆಗನುಗುಣವಾಗಿ 'ಅಗ್ನೇ ನಯ ಸುಪಥಾ ರಾಯೇ......' ಎಂದು

ಅಗ್ನಿವಾಚ್ಯನಲ್ಲಿ ನಡೆಸುವ ಪ್ರಾರ್ಥನೆ ಪಾಪಪರಿಹಾರ ನಡೆಸಿ, ಮೋಕ್ಷದೆಡೆಗೆ ಸಾಗಿಸು –ಎಂದು ಗಾಯತ್ರೀ ವಾಚ್ಯನಾದ ಪರಶುರಾಮನಲ್ಲೇ ಸಲ್ಲಿಸಲ್ಪಡುವಂತಹದ್ದೆಂಬುದನ್ನು ದೃಢಗೊಳಿಸಬಲ್ಲದು.

ಆದ್ದರಿಂದ 'ಹಿರಣ್ಮಯೇನ ಪಾತ್ರೇಣ......' ಎಂದು ಪ್ರಾರಂಭವಾಗುವ ಐದು ಪದ್ಯಗಳನ್ನೊಳಗೊಂಡ ಸುಂದರವಾದ ಸ್ತುತಿ ಗಾಯತ್ರೀಪ್ರತಿಪಾದ್ಯನಾಗಿದ್ದು ಸೂರ್ಯಮಂಡಲದಲ್ಲಿರುವ, ಅಗ್ನಿನಿಯಾಮಕನಾಗಿ ಅಗ್ನಿಯಲ್ಲಿರುವ ಪರಶುರಾಮನದ್ದೆಂದೂ ಭಾವಿಸಬಹುದಾಗಿದೆ.

*

## ವಿಶ್ವಾಮಿತ್ರರ ಅನುಸಂಧಾನದಲ್ಲಿ ಗಾಯತ್ರೀ

ಮಂತ್ರವನ್ನು ಜಪಿಸುವಾಗ ಆಯಾ ಮಂತ್ರದ ಅರ್ಥವನ್ನು ತನ್ನ ಅನುಭವದ ಮೂಸೆಯಲ್ಲಿ ಶೋಧಿಸುವುದು ಸಾಧಕನ ಸಹಜ ಪ್ರವೃತ್ತಿ.

ಈ ಹಿನ್ನೆಲೆಯಲ್ಲಿ ಗಾಯತ್ರಿಯ ದ್ರಷ್ಟಾರರಾದ ವಿಶ್ವಾಮಿತ್ರರು ಗಾಯತ್ರೀಮಂತ್ರದ ಅರ್ಥಾನುಸಂಧಾನವನ್ನು ಹೀಗೆ ನಡೆಸಿರುವ ಸಾಧ್ಯತೆ ಇದೆ.

ಕ್ಷತ್ರಿಯರಾಗಿದ್ದ ವಿಶ್ವಾಮಿತ್ರರು ಬ್ರಾಹ್ಮಣರಾಗಿ, ಬ್ರಹ್ಮರ್ಷಿಯಾಗಿ ಮಾರ್ಪಾಟು ಹೊಂದುವಲ್ಲಿ ಅವರ ಬದುಕು ಹಂತಹಂತದಲ್ಲಿ ಬೇರೆಬೇರೆ ಬಗೆಯ ಪಾಕಕ್ಕೊಳಗಾಗಿದೆ. ಅಂತಹ ಪಾಕಗಳಿಂದಾಗಿ ಅವರ ಕ್ಷತ್ರಿಯತ್ವವು ನಾಶವಾಗಿ, ಅವರಲ್ಲಿ ಬ್ರಾಹ್ಮಣ್ಯವು ಹುಟ್ಟಿಕೊಂಡಿದೆ. ಇಂತಹ ಸ್ಥಿತಿಗೆ ತಲುಪಲು ಬೇರೆ ಬೇರೆ ಬಗೆಯ ಧೀ ಪ್ರಚೋದನೆಗೆ ಅವರು ಒಳಗಾಗಿರುವರು.

ಹೀಗೆ ಅವರ ಬದುಕಿನಲ್ಲಿ ನಡೆದ ವಿಸ್ಮಯಕಾರಿ ಚಮತ್ಕಾರಗಳಿಗೆಲ್ಲ ಮುಖ್ಯ ಕಾರಣ ಭಗವಂತನೆಂದು ನಂಬಿರುವ ಅವರು ಗಾಯತ್ರಿಯ 'ಭರ್ಗಃ' 'ಸವಿತುಃ' 'ಧಿಯೋ ಯೋ ನಃ ಪ್ರಚೋದಯಾತ್' ಎಂಬ ಘಟಕಗಳಿಂದ ಆಯಾ ಚಮತ್ಕಾರಗಳ ನಿರ್ವಾಹಕನಾಗಿ ಸೂರ್ಯನಾರಾಯಣನನ್ನು ಧ್ಯಾನಿಸದಿರಲಾರರು. — *ಸಗ್ರಿ*

* * *

## ತಿಳಿದಾಗ ಹೆಚ್ಚು ಫಲ

ಮಂತ್ರದ ಅರ್ಥವನ್ನು ತಿಳಿದು ಜಪಿಸಿದಾಗ ಸಫಲವೆಂಬ ಮಾತನ್ನು ಕಾತ್ಯಾಯನ ಹೀಗೆ ತಿಳಿಸಿದ್ದಾನೆ–

**ಏತಾನ್ಯವಿದಿತ್ವಾ ಯೋಽಧೀತೇಽನುಬ್ರೂತೇ ಜಪತಿ ಯಜತೇ**
**ಯಾಜಯತೇ ತಸ್ಯ ಬ್ರಹ್ಮ ನಿರ್ವೀರ್ಯಂ ಯಾತಯಾಮಂ ಭವತಿ ।**
**ಅಥ ವಿಜ್ಞಾಯೈತಾನಿ ಯೋಽಧೀತೇ ತಸ್ಯ ವೀರ್ಯವತ್ ॥**
**ಅಥ ಯೋಽರ್ಥವಿತ್ ತಸ್ಯ ವೀರ್ಯವತ್ತರಂ ಭವತಿ ॥**
**ಜಪಿತ್ವಾ ಹುತ್ವಾ ಇಷ್ಟ್ವಾ ತತ್ಫಲೇನ ಯುಜ್ಯತೇ ॥**

— *ಗೋವಿಂದದಾಸ*

# ಗಾಯತ್ರ್ಯರ್ಥ – ವಿಶ್ವರೂಪ

ಸಗ್ರಿ ರಾಘವೇಂದ್ರ ಉಪಾಧ್ಯಾಯ

"ಸಮಸ್ತಶಾಸ್ತ್ರಾರ್ಥನಿದರ್ಶನಾತ್ಮಕಂ ಚಕ್ರೇ ಮಹಾಭಾರತನಾಮಧೇಯಮ್" (ಮ.ಭಾ.ತಾ.ನಿ. ೧೦–೫೯) ಎಂದಿರುವಂತೆ ಸಮಸ್ತಶಾಸ್ತ್ರಾರ್ಥವನ್ನು ದೃಷ್ಟಾಂತಕೊಟ್ಟು ಸಮರ್ಥಿಸಲು ಹೊರಟಿರುವಂತಹದ್ದು ಮಹಾಭಾರತ. ಅಂತಹ ಮಹಾಭಾರತಪಾರಿಜಾತದ ಮಕರಂದದಂತಿರುವ ಭಗವದ್ಗೀತೆಯಲ್ಲಿ 'ವೇದ ಮಾತೆ'ಯಾದ ಗಾಯತ್ರಿಯ ವಿಚಾರಗಳ ಸಮರ್ಥನೆ, ಸ್ಪಷ್ಟೀಕರಣ ಮುಂತಾದವು ನಡೆದಿದ್ದಿರಲೇಬೇಕು ತಾನೇ?

**ಓಂ, ತತ್‌ಗಳ ನಿರ್ದೇಶ:** ಗಾಯತ್ರಿಯ ಮೊದಲ ಘಟಕವಾದ ಓಂಕಾರ ವನ್ನೂ ಅನಂತರದ ಶಬ್ದವಾದ 'ತತ್' ಪದವನ್ನೂ ಭಗವಂತನ ಮೂರು ನಾಮಗಳಲ್ಲಿ ಎರಡನ್ನಾಗಿ ಭಗವದ್ಗೀತೆಯಲ್ಲಿ ಪರಿಗಣಿಸಲಾಗಿದೆ–

'ಓಂ ತತ್ ಸದಿತಿ ನಿರ್ದೇಶಃ ಬ್ರಹ್ಮಣಸ್ತ್ರಿವಿಧಃ ಸ್ಮೃತಃ' *(೧೭–೨೩)*

'ತತ್' ಗಾಯತ್ರಿಯ ಮೊದಲ ಶಬ್ದವಷ್ಟೇ ಅಲ್ಲ; ಆದ್ಯಂತಾಕ್ಷರಗಳ ಸಂಗ್ರಾಹಕವಾದ 'ಅಬ್ರಿವಿಯೇಷನ್' ಕೂಡ ಆಗಿದೆ. ಹೀಗೆ ಸಮಗ್ರ ಗಾಯತ್ರೀ ಮಂತ್ರವನ್ನು ಪ್ರತಿನಿಧಿಸುವ 'ತತ್' ಶಬ್ದವನ್ನೂ, ಗಾಯತ್ರಿಗೆ ಮೂಲವಾಗಿರುವ ಓಂಕಾರವನ್ನೂ ಭಗವಂತನ ನಾಮವನ್ನಾಗಿ ತಿಳಿಸುವ ಮೂಲಕ ಗೀತೆಯಿಂದ ಭಗವಂತನಿಗೆ ಗಾಯತ್ರೀಪ್ರತಿಪಾದ್ಯತ್ವವನ್ನು ಸಮರ್ಥಿಸಿದಂತಾಗುವುದು.

ಗಾಯತ್ರಿಯು ಪ್ರತಿಪಾದಿಸುವ ಭಗವಂತನ ವ್ಯಾಪ್ತಿ, ಸೃಷ್ಟಿಕರ್ತೃತ್ವ ಮುಂತಾದ ಗುಣಗಳ ಉಪಪಾದನೆ, ವಿವರಣೆ, ಸ್ಪಷ್ಟೀಕರಣ ಮುಂತಾದವು ಭಗವದ್ಗೀತೆಯಲ್ಲಿ ಅಲ್ಲಲ್ಲಿ ನಡೆದಿವೆ.

## ದೃಷ್ಟಾಂತದ ಮೂಲಕ ಸಮರ್ಥನೆ

ಇದಕ್ಕಿಂತಲೂ ಮುಖ್ಯವಾಗಿ ಶಾಸ್ತ್ರಾರ್ಥವನ್ನು ನಿದರ್ಶನಗಳಿಂದ ಸಮರ್ಥಿ ಸಲು ಹೊರಟಿರುವ ಮಹಾಭಾರತದ ಸಾರಸ್ವರೂಪವಾದ ಭಗವದ್ಗೀತೆಯಿಂದ ಗಾಯತ್ರಿಯ ಅರ್ಥವು ದೃಷ್ಟಾಂತಪೂರ್ವಕವಾಗಿ ಸಮರ್ಥಿತವಾಗಿದೆ. ಭಗವದ್ಗೀ ತೆಯ ಪ್ರಮುಖ ಅಧ್ಯಾಯ ಭಗವಂತನ 'ವಿಶ್ವರೂಪ'ದ ವರ್ಣನೆಯುಳ್ಳ ಹನ್ನೊಂದನೆಯದು.

ಅದರಲ್ಲಿ ಭಗವಂತನ ವಿಶ್ವರೂಪವನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸುವ ಮೂಲಕ ಗಾಯತ್ರಿಯ 'ಓಂ' ಮತ್ತು 'ತತ್' ಶಬ್ದಗಳ ಅರ್ಥವಾದ ಗುಣ

ಪೂರ್ಣತ್ವವನ್ನು ದೇಶಕಾಲವ್ಯಾಪ್ತತ್ವವನ್ನು ದೃಷ್ಟಾಂತಪೂರ್ವಕವಾಗಿ ಸಮರ್ಥಿಸಿದಂತಾಗಿದೆ–

**ದೇಶತಃ ಕಾಲತಶ್ಚೈವ ಪೂರ್ಣಂ ಸರ್ವಗುಣೈಸ್ಸದಾ ।**

**ದರ್ಶಯಾಮಾಸ ಭಗವಾನ್ ಯಾವತ್ಯರ್ಜುನಯೋಗ್ಯತಾ**

–ಎಂದಿರುವಂತೆ (ಮ.ಭಾ.ತಾ.ನಿ. ೨೫–೧೫) ಭಗವಂತನ 'ವಿಶ್ವರೂಪ' ಎಂದರೆ ಮೂರೂ ಬಗೆಯ ವ್ಯಾಪ್ತಿ ರೂಪವಾದ ಪೂರ್ಣತೆಯನ್ನು ಹೊಂದಿರುವ ರೂಪ ಎಂದೇ ಅರ್ಥ.

'**ಅಮೀ ಹಿ ತ್ವಾಂ ಸುರಸಂಘಾ ವಿಶಂತಿ......**' (೧೧–೨೧) ಮುಂತಾದ ಮಾತುಗಳು ತಿಳಿಸುವಂತೆ ಮುಕ್ತದೇವತೆಗಳೇ ಮುಂತಾದವರು ಭಗವಂತನನ್ನು ಆಶ್ರಯಿಸಿರುವುದನ್ನು, ಭಜಿಸುತ್ತಿರುವುದನ್ನು ಕಂಡಿರುವ ಅರ್ಜುನನ ಮೂಲಕ ಗಾಯತ್ರಿಯ 'ವರೇಣ್ಯ' ಶಬ್ದದ ಅರ್ಥಕ್ಕೆ ದೃಷ್ಟಾಂತ ತೋರಿಸಿದಂತಾಗುವುದು.

'**ದಂಷ್ಟ್ರಾಕರಾಳಾನಿ ಚ ತೇ ಮುಖಾನಿ......** (೨೫)

**ಕೇಚಿದ್ವಿಲಗ್ನಾ ದಶನಾಂತರೇಷು......** (೨೭)

**ಯಥಾ ಪ್ರದೀಪ್ತಂ ಜ್ವಲನಂ ಪತಂಗಾಃ......** (೨೯)

**ಲೇಲಿಹ್ಯಸೇ ಗ್ರಸಮಾನಃ.........** (೩೦)

ಮುಂತಾದ ಮಾತುಗಳಲ್ಲಿ ಪ್ರಸ್ತಾವಿಸಲ್ಪಟ್ಟಿರುವಂತೆ ಗಾಯತ್ರಿಯ 'ಭರ್ಗ' (ಭ್ರಸ್ಜ ಪಾಕೇ) ಶಬ್ದಾರ್ಥವಾದ ಭರ್ಜನಕರ್ತೃತ್ವಧರ್ಮವನ್ನು ದೃಷ್ಟಾಂತಪೂರ್ವಕ ವಾಗಿ ಉಪಪಾದಿಸಿದಂತಾಗಿದೆ.

'ಭರ್ಗಃ' ಶಬ್ದಕ್ಕೆ ಜ್ಯೋತಿಸ್ವರೂಪ ಮುಂತಾದ ಅರ್ಥವನ್ನಿಟ್ಟುಕೊಂಡಾಗ ಹಾಗೂ 'ದೇವಸ್ಯ' ಶಬ್ದಕ್ಕೆ ಬೆಳಗುವವನು, ಬೆಳಗಿಸುವವನು ಎಂಬ ಅರ್ಥವನ್ನಿಟ್ಟುಕೊಂಡಾಗ, ಇದಕ್ಕೆ '**ಯದಿ ಸೂರ್ಯಸಹಸ್ರಸ್ಯ......**' (೧೨) ಎಂಬ ಮಾತು ತಿಳಿಸುವಂತೆ ಸಾವಿರಾರು ಸೂರ್ಯರು ಒಮ್ಮೆಲೇ ಉದಯಿಸಿದಾಗ ಎಷ್ಟೋ ಅಷ್ಟು ಪ್ರಮಾಣದ ಜ್ಯೋತಿ ನಿನ್ನದೆಂದು ಅರ್ಜುನನ ಸಾಕ್ಷಾತ್ಕಾರವು ಸಾಧಕವೆನಿಸಬಲ್ಲದು.

'ಧೀಮಹಿ' ಎಂಬ ಗಾಯತ್ರಿಯ ಶಬ್ದವು ಪ್ರತಿಯೊಬ್ಬರಿಂದಲೂ 'ಧೀಮಹಿ' ಎನ್ನಲು ಯೋಗ್ಯವಾಗಿದ್ದು, ಧ್ಯಾನಾರ್ಹ ಎನಿಸುವಂತಹದ್ದು ಪರಮಾತ್ಮನ ಸ್ವರೂಪ ಎಂದು ತಿಳಿಸುತ್ತಿದ್ದು, ಅರ್ಜುನ ವಿಶ್ವರೂಪಿ ಪರಮಾತ್ಮನ ಎದುರು "**ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ ಜಗತ್ಪ್ರಹೃಷ್ಯತ್ಯನುರಜ್ಯತೇ ಚ.........**" (೩೬) ನಿನ್ನ ಗುಣಗಾನದಿಂದ ಜನರು ಆನಂದಪಡುತ್ತಾರೆ, ಅನುರಕ್ತರಾಗುವ ರೆಂಬುದು ಅತ್ಯಂತ ಸಮುಚಿತ ಎಂದು ಸಮರ್ಥಿಸಿದುದ್ದೂ, "**ಕಸ್ಮಾಚ್ಚ ತೇ ನ ನಮೇರನ್ ಮಹಾತ್ಮನ್ ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ**" (೩೭) ಎಲ್ಲರಿಗಿಂತಲೂ ಹಿರಿಯನಾದ ಬ್ರಹ್ಮನಿಗೂ ಕಾರಣನಾದ ನಿನ್ನನ್ನು ಯಾಕೆ ನಮಸ್ಕರಿಸದಿರಲಾರರು?

ಎಂದು ಸಾಧಿಸಿದುದೂ 'ಧೀಮಹಿ' ಪದದಿಂದ ಉಕ್ತವಾದ ಭಗವಂತನ ಧ್ಯಾನಾರ್ಹತೆಗೆ ಪರಂಪರಯಾ ಪುಷ್ಟಿನೀಡಿದಂತಾಗಿದೆ.

**ನ ತು ಮಾಂ ಶಕ್ಯಸೇ ದ್ರಷ್ಟುಂ ಅನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ॥** (೮)

ಎಂದಿರುವಂತೆ ಅರ್ಜುನನಿಗೆ 'ದಿವ್ಯದೃಷ್ಟಿ'ಯನ್ನು ಅನುಗ್ರಹಿಸಿ ತನ್ನ ಅಚಿಂತ್ಯ ಸಾಮರ್ಥ್ಯೋಪೇತವಾದ ವೈಭವವನ್ನು ತೋರಿಸಿಕೊಟ್ಟ ಭಗವಂತನಿಂದ ಗಾಯತ್ರಿಯ 'ಧಿಯೋ ಯೋ ನಃ ಪ್ರಚೋದಯಾತ್' ಎಂಬ ಭಾಗ ತಿಳಿಸುತ್ತಿರುವಂತೆ ಭಗವಂತನ ಮೂಲಕ ನಡೆಯುವ 'ಬುದ್ಧಿಪ್ರಚೋದನೆ'ಗೆ ದೃಷ್ಟಾಂತವನ್ನು ತೋರಿಸಿಕೊಟ್ಟಂತಾಗಿದೆ.

ವಾಸ್ತವವಾಗಿ 'ಧಿಯೋ ಯೋ ನಃ ಪ್ರಚೋದಯಾತ್' ಎಂಬ ಗಾಯತ್ರಿಯ ಭಾಗಕ್ಕೆ ಸಮಗ್ರ ಭಗವದ್ಗೀತೆಯೇ ಉತ್ತಮ ನಿದರ್ಶನ. "**ಕಾರ್ಪಣ್ಯ ದೋಷೋಪಹತಸ್ವಭಾವಃ ಪೃಚ್ಛಾಮಿ ತ್ವಾಂ ಧರ್ಮಸಮ್ಮೂಢಚೇತಾಃ.......**" (೨-೭) ಎಂದಿರುವಂತೆ ವಿವೇಕವನ್ನು ಕಳಕೊಂಡ ಅರ್ಜುನ, ಗೀತಾಚಾರ್ಯನ ಉಪದೇಶವನ್ನು ಕೇಳಿ–

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥**

ಎಂದು ಉದ್ಘೋಷಿಸುವಷ್ಟು ಮಾನಸಿಕವಾಗಿ ಪರಿವರ್ತಿತನಾದುದು ಭಗವಂತನ ಬುದ್ಧಿಪ್ರೇರಕತ್ವ ಎಷ್ಟು ಪ್ರಭಾವಕಾರಿಯಾದುದು; ಎಷ್ಟು ಚಮತ್ಕಾರಿಯಾದುದು ಎಂಬುದನ್ನು ಮನವರಿಕೆಮಾಡಬಲ್ಲದು.

ಗಾಯತ್ರಿಯಲ್ಲಿಯ ಸವಿತೃಪದ ತಿಳಿಸುವ ಸೃಷ್ಟಿಕರ್ತೃತ್ವವು ಗೀತೆಯ ಹನ್ನೊಂದನೇ ಅಧ್ಯಾಯದಲ್ಲಿ ಅಷ್ಟೊಂದು ಸ್ಪಷ್ಟವಾಗಿ ಮೂಡಿಬಂದಿಲ್ಲ. ಆದರೆ ಭಗವಂತನು ನಡೆಸುವ ತನ್ನ ರೂಪಗಳ ಸೃಷ್ಟಿಯೂ, ಸವಿತೃ ಪದದಿಂದ ಸೂಚಿತವಾಗಿದ್ದು, 'ಶುದ್ಧ ಸೃಷ್ಟಿ' ಎನಿಸುವ ಅಂತಹ ಭಗವಂತನ ಸೃಷ್ಟಿ ಎಂದರೆ 'ಪ್ರತ್ಯಕ್ಷತ್ವಂ ಹರೇರ್ಜನ್ಮ ನ ವಿಕಾರಃ ಕಥಂಚನ' ಎಂದಿರುವಂತೆ ಇದ್ದಕ್ಕಿದ್ದಂತೆ ಕಾಣಿಸಿಕೊಳ್ಳುವುದಷ್ಟೇ ಎಂಬ ಭಗವತ್ಸೃಷ್ಟಿಗೆ ಸಂಬಂಧಪಟ್ಟ ಪ್ರಮೇಯವು ಇದ್ದಕ್ಕಿದ್ದಂತೆ ವಿಶ್ವರೂಪದ ದರ್ಶನವನ್ನು ಅರ್ಜುನನಿಗೆ ನೀಡುವ ಮೂಲಕ ಸ್ಪಷ್ಟಪಡಿಸಲ್ಪಟ್ಟಂತಾಗಿದೆ.

ಹೀಗೆ ಭಗವದ್ಗೀತೆಯ ವಿಶ್ವರೂಪಾಧ್ಯಾಯ ಗಾಯತ್ರಿ ಪ್ರತಿಪಾದಿಸುವ ಭಗವಂತನ ಗುಣಧರ್ಮಗಳನ್ನು ನಿದರ್ಶನಪೂರ್ವಕವಾಗಿ ಸಮರ್ಥಿಸಿದೆ.

*

# ಲಿಂಗ ಮತ್ತು ವಿಭಕ್ತಿಯ ಸಂದೇಶ

ಸಗ್ರಿ ರಾಘವೇಂದ್ರ ಉಪಾಧ್ಯಾಯ

ವಾಸ್ತವವಾಗಿ ಸಂಸ್ಕೃತದಲ್ಲಿ ಶಬ್ದಗಳ ಲಿಂಗ ಆಯಾ ಶಬ್ದದ ಸ್ವಭಾವ, ಹೊರತು ಶಬ್ದವಾಚ್ಯವಾದ ಪದಾರ್ಥದ ಆಧಾರದಲ್ಲಿ ರೂಪುಗೊಳ್ಳುವಂತಹದ್ದಲ್ಲ.

ಆದರೆ "ನಾನರ್ಥಕಃ ಸ್ವರೋ ವಾಽಪಿ......." (ಐ.ಉ.ಭಾ. ೨-೧-೨-೧೩) ಎಂಬ ಮಾತು ತಿಳಿಸುವಂತೆ ವೇದದ ಯಾವ ಘಟಕವೂ ನಿರರ್ಥಕವಾದುದಿಲ್ಲ. "ಮಹಾರ್ಥಮೇವ ಸರ್ವಂ ಹಿ ವೇದೇ ವಾ ವೈದಿಕೇಽಪಿ ವಾ" ಎಂದಿರುವಂತೆ ಶ್ರೇಷ್ಠಾರ್ಥಕ್ಕೆ ಸೂಚಕವಾಗಿಯೇ ಇರುವುದು. ಈ ಮಾತಿನಿಂದ ವೇದದ ಶಬ್ದಗಳ ಲಿಂಗಗಳಿಂದಲೂ, ವಿಭಕ್ತಿಗಳಿಂದಲೂ ಭಗವಂತನ ಉತ್ಕರ್ಷಕ್ಕೆ ಪೋಷಕವಾಗುವ ಅರ್ಥವು ಸೂಚಿತವಾಗುವುದೆಂದು ಸಿದ್ಧವಾಗು ವುದು.

ಈ ಹಿನ್ನೆಲೆಯಲ್ಲಿ ಗಾಯತ್ರಿಯ 'ತತ್' 'ವರೇಣ್ಯಂ' 'ಭರ್ಗಃ' ಎಂಬಲ್ಲಿಯ ನಪುಂಸಕಲಿಂಗ, 'ಸವಿತುಃ' 'ದೇವಸ್ಯ' ಎಂಬಲ್ಲಿಯ ಪುಲ್ಲಿಂಗ ಏನು ಸಂದೇಶವನ್ನು ನೀಡುತ್ತಿದೆ? ಎಂದು ಪರಿಶೀಲಿಸಬಹುದು. ಹಾಗೆಯೇ 'ಸವಿತುಃ' 'ದೇವಸ್ಯ' ಎಂಬಲ್ಲಿಯ ಷಷ್ಠೀ ವಿಭಕ್ತಿಯಿಂದ ಹೊರಡಬಲ್ಲ ಸಂದೇಶವನ್ನೂ ವಿವೇಚಿಸಿಕೊಳ್ಳ ಬೇಕು.

ಗಾಯತ್ರಿಯಲ್ಲಿ ಪ್ರತಿಪಾದ್ಯ ಹಯಶೀರ್ಷದ ಸ್ತ್ರೀರೂಪ. ಹೀಗಿದ್ದರೂ 'ಸವಿತುಃ' 'ದೇವಸ್ಯ' ಎಂಬ ಪುಲ್ಲಿಂಗವು ಗಾಯತ್ರೀಪ್ರತಿಪಾದ್ಯ ಭಗವಂತನಲ್ಲಿ ಪುರುಷರ ಗುಣಗಳನ್ನು ಸಾರಿ ಹೇಳಬಲ್ಲದು.

"ವ್ಯವಧಾನೇನ ಸೂತಿಸ್ತು ಪುಂಸ್ತ್ವಂ ವಿದ್ವದ್ಭಿರುಚ್ಯತೇ" ಎಂದು ಬ್ರಹ್ಮಾಂಡ ಪುರಾಣ ತಿಳಿಸುವಂತೆ ಮತ್ತೊಬ್ಬರ ಮೂಲಕ ಸೃಷ್ಟಿಮಾಡುವಿಕೆ 'ಪುರುಷತ್ವ' ಎನಿಸಿದ್ದು. ಇಂತಹ ಪುರುಷತ್ವವನ್ನು 'ಸವಿತೃ' ಪದ ವಾಚ್ಯನಲ್ಲಿ ತಿಳಿಸಿದಂತಾಗು ವುದು. ಅಂದರೆ ಭಗವಂತನು ಮತ್ತೊಬ್ಬರ ಮೂಲಕ ಜಗತ್ಸೃಷ್ಟಿಯನ್ನು ನಡೆಸು ವನು ಎಂಬುದಾಗಿ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ.......' ಇತ್ಯಾದಿ ಮಾತುಗಳು ಸಾರುತ್ತಿರುವಂತೆ ಅಸ್ವಾತಂತ್ರ್ಯ ಸ್ತ್ರೀಯರ ಅಸಾಧಾರಣ ಧರ್ಮವೆನಿಸಿದ್ದು, ಅದರ ವಿರುದ್ಧ ಧರ್ಮವಾದ ಸ್ವಾತಂತ್ರ್ಯವನ್ನು ಪುರುಷರ ಧರ್ಮವಾಗಿ ಪರಿಗಣಿಸಿ, ಗಾಯತ್ರಿಯ 'ಸವಿತುಃ' ಎಂಬಲ್ಲಿಯ ಪುಲ್ಲಿಂಗವು ಸೂಚಿಸುವ ಮೂಲಕ ಭಗವಂತನು ಲಕ್ಷ್ಮ್ಯಾದಿಗಳ ಅಪೇಕ್ಷೆ ಇಲ್ಲದೆ ಸ್ವತಂತ್ರನಾಗಿಯೂ ಸೃಷ್ಟಿಮಾಡಬಲ್ಲ ಎಂಬುದನ್ನೂ ಘೋಷಿಸುವುದು.

'ದೇವಸ್ಯ' ಎಂಬಲ್ಲಿಯ ಪುಲ್ಲಿಂಗವೂ ಕ್ರೀಡೆ, ಪ್ರಕಾಶಕತ್ವ ಮುಂತಾದ ಚಟುವಟಿಕೆಗಳಲ್ಲಿ ಭಗವಂತನ ಸ್ವಾತಂತ್ರ್ಯವನ್ನು ಸೂಚಿಸಿಕೊಡಬಲ್ಲದು.

"ಸ್ತ್ರೀಪುಂದೋಷವಿಹೀನತ್ವಾದಪಿ ತಚ್ಛಬ್ದಗೋಚರಃ" (ಋಗ್ಭಾಷ್ಯ ೩-೧೦) ಎಂಬ ಪ್ರಮಾಣ ತಿಳಿಸುವಂತೆ ಭಗವಂತನು ಸ್ತ್ರೀಯರ ಹಾಗೂ ಪುರುಷರ ದೋಷರಹಿತನಾಗಿದ್ದು ಅವರಿಗಿಂತ ವಿಲಕ್ಷಣನಾಗಿರುವನೆಂಬ ಅಭಿಪ್ರಾಯದಲ್ಲಿ ನಪುಂಸಕಲಿಂಗದ ಶಬ್ದದಿಂದ ವಾಚ್ಯನಾಗುವನು. ಆದುದರಿಂದ ಗಾಯತ್ರಿಯ 'ತತ್' ಶಬ್ದ ಅವನಲ್ಲಿ ಗುಣಪೂರ್ಣತ್ವವನ್ನು ತಿಳಿಸಿದರೆ, ಅಲ್ಲಿಯ ನಪುಂಸಕಲಿಂಗ ಅವನಲ್ಲಿ ಇತರ ಸ್ತ್ರೀ ಪುರುಷರಲ್ಲಿರುವ ಅಜ್ಞಾನ, ಪಾರತಂತ್ರ್ಯಾದಿ ದೋಷಗಳಿಲ್ಲ ಎಂದು ಸೂಚಿಸುವುದು.

"ತಥಾಪ್ಯರಾಗಾಕೃಷ್ಟತ್ವಾತ್ ತಚ್ಛಬ್ದೈರಪಿ ಕಥ್ಯತೇ" ಎಂದು ಗಾರುಡ (ಐ.ಉ.ಭಾ. ೨-೨-೭-೬) ಭಗವಂತನು ಸಾಮಾನ್ಯ ಸ್ತ್ರೀಪುರುಷರಂತೆ ಸ್ತ್ರೀಯರ ಆಕರ್ಷಣೆಗೆ, ಪುರುಷರ ಆಕರ್ಷಣೆಗೆ ಒಳಗಾಗದ ಪ್ರಯುಕ್ತ ನಪುಂಸಕಲಿಂಗದ ಶಬ್ದಗಳಿಂದ ವಾಚ್ಯನಾಗುವನು ಎಂದು ಹೇಳಿದೆ. ಗಾಯತ್ರಿಯ 'ವರೇಣ್ಯಂ' ಶಬ್ದವು ಭಗವಂತನು ಎಲ್ಲರಿಂದಲೂ ಆಶ್ರಯಣೀಯ ಎಂದು ತಿಳಿಸುತ್ತಿದ್ದರೆ, ಅಲ್ಲಿಯ ನಪುಂಸಕಲಿಂಗವು ಅವನು ಸ್ತ್ರೀಯರ ಆಕರ್ಷಣೆಗೆ ಒಳಗಾಗದವನಾಗಿರುವುದರಿಂದ ರಮಣದ ವಿಷಯದಲ್ಲೂ ಲಕ್ಷ್ಮಿಯನ್ನೂ ಆಶ್ರಯಿಸದಷ್ಟೂ ಯಾವುದೇ ವಿಷಯದಲ್ಲಿ ಬೇರೆ ಯಾರನ್ನೂ ಆಶ್ರಯಿಸದವನು ಎಂದು ಸೂಚಿಸುವುದು.

ಭಗವಂತನು ಬೇರೆ ಅಲ್ಲ; ಅವನ ಸ್ವರೂಪ ಬೇರೆ ಅಲ್ಲ. ಆದರೂ ಗಾಯತ್ರಿಯಲ್ಲಿ 'ಸವಿತುಃ ವರೇಣ್ಯಂ' ಎಂಬುದಾಗಿ ಸಂಬಂಧವನ್ನು ಸೂಚಿಸುವ ಷಷ್ಠೀ ವಿಭಕ್ತಿಯನ್ನು ಪ್ರಯೋಗಿಸುವ ಮೂಲಕ ಭಗವಂತನಿಗೂ ಅವನ ಸ್ವರೂಪ, ಗುಣ, ಕರ್ಮ, ದೇಹ, ಅವಯವಾದಿಗಳಿಗೂ ಅತ್ಯಂತಾಭೇದವಿರುವುದಾದರೂ 'ವಿಶೇಷ' ಎಂಬ ಅವನ ಸಾಮರ್ಥ್ಯವಿಶೇಷವು ಭೇದದ ವ್ಯವಹಾರಗಳನ್ನೆಲ್ಲ ಹೊಂದಿಸುವುದು ಎಂಬುದಾಗಿ ಭಗವಂತನ ಸ್ವಭಾವಕ್ಕೆ ಸಂಬಂಧಪಡುವ ಮಹತ್ತ್ವದ ವಿಚಾರವು ಸೂಚಿಸಲ್ಪಡುವುದು.

ಹೀಗೆ ಶಾಸ್ತ್ರೀಯ ಸಂದೇಶಗಳ, ಸೂಚನೆಗಳ ಹಿನ್ನೆಲೆಯಲ್ಲಿ ಗಾಯತ್ರಿಯಲ್ಲಿರುವ ಶಬ್ದಗಳ ಲಿಂಗಗಳಿಂದ, ವಿಭಕ್ತಿಗಳಿಂದ ಅರ್ಥವಿಶೇಷಗಳನ್ನು ಹೊರಡಿಸಬಹುದಾಗಿದೆ.

*

**'ಬೃಹದ್ಯಮ'ನ ಹೇಳಿಕೆ**

**ನ ತಥಾ ವೇದಜಪತಃ ಪಾಪಂ ನಿರ್ದಹತಿ ದ್ವಿಜಃ ।**
**ಯಥಾ ಗಾಯತ್ರೀಜಪತಃ ಸರ್ವಪಾಪೈಃ ಪ್ರಮುಚ್ಯತೇ ॥**

ಗಾಯತ್ರೀಮಂತ್ರದ ಜಪದಿಂದ ಹೇಗೆ ಸರ್ವಪಾಪಗಳ ಪರಿಹಾರವನ್ನು ಪಡೆಯುವನೋ, ಅಷ್ಟು ಪಾಪಪರಿಹಾರ ಸಮಗ್ರ ವೇದದ ಜಪದಿಂದ ದೊರಕದು.

## ಕೈಗಳಲ್ಲಿ ವರಾಭಯ ಮುದ್ರೆಗಳು

ತಂತ್ರಸಾರಸಂಗ್ರಹದಲ್ಲಿ ಶ್ರೀಮದಾಚಾರ್ಯರು ಗಾಯತ್ರೀಪ್ರತಿಪಾದ್ಯ ಭಗವಂತನ ರೂಪವನ್ನು 'ಪ್ರೋದ್ಯದಾದಿತ್ಯವರ್ಣಶ್ಚ ......' ಎನ್ನುವ ಪದ್ಯದಲ್ಲಿ ತಿಳಿಸುತ್ತ ಅವನಿಗೆ ನಾಲ್ಕು ಕೈಗಳು; ಅವುಗಳಲ್ಲಿ ಎರಡು ಚಕ್ರಶಂಖಗಳನ್ನು ಧರಿಸಿದ್ದರೆ ಮತ್ತೆರಡು ತೊಡೆಯಮೇಲೆ ಇಡಲ್ಪಟ್ಟಿವೆ -ಎಂದು ನಿರೂಪಿಸಿರುವರು:

**ಚಕ್ರಶಂಖಧರೋಽಂಕಸ್ಥದೋರ್ದ್ವಯಃ**

ಭಗವಂತನ ಭಂಗಿ, ಆಯುಧಧಾರಣೆ, ಆಭರಣಧಾರಣೆ ಇವೆಲ್ಲ ಸಾಧಕರ ಚಿಂತನೆಗೆ ಪೋಷಕವಾಗಿರುವಂತಹದ್ದು. ಈ ಹಿನ್ನೆಲೆಯಲ್ಲಿ ತೊಡೆಯಮೇಲೆ ಇರಿಸಲಾದ ಸೂರ್ಯನಾರಾಯಣನ ಕರಗಳ ಸಂದೇಶ ಏನು? ಈ ಬಗ್ಗೆ ಶಾಸ್ತ್ರೀಯವಾಗಿ ಹೀಗೆ ಭಾವಿಸಬಹುದಾಗಿದೆ-

'ಆಜಾನುಬಾಹು' ಆಗಿರುವ ಸೂರ್ಯನಾರಾಯಣನ ಬಾಹುಗಳು ತೊಡೆಯ ಮೇಲೆ ಇಡಲ್ಪಟ್ಟಿವೆ ಎಂದರೆ ಅಲ್ಲಿಗೇ ಕೊನೆಗೊಳ್ಳುವಂತೆ ಇಡಲಾಗಿದೆ ಎಂಬ ಅಭಿಪ್ರಾಯವಲ್ಲ. ಮತ್ತೆ, ಮಡಚಿ ಕುಳಿತಿರುವ ಮೊಣಗಂಟಿನ ಹೊರಗೆ ಚಾಚುವಂತೆ ತೊಡೆಗಳ ಮೇಲೆ ಕೈಗಳನ್ನಿಡಲಾಗಿದೆ ಎಂಬ ಆಶಯ. ಆ ಎರಡು ಕೈಗಳಾದರೂ ತಮ್ಮ ಅಂಗೈಯಿಂದ ಭಗವಂತನ ಅಸಾಧಾರಣಗಳಾದ ವರ ಮತ್ತು ಅಭಯಚಿಹ್ನೆಗಳನ್ನು ಧರಿಸಿಕೊಂಡಿವೆ. ಆ ಮೂಲಕ ತನ್ನ ಭಕ್ತರಿಗೆ ವರವನ್ನೂ, ಅಭಯವನ್ನೂ ಸೂಚಿಸು ತ್ತಿರುವನು ಎಂಬುದು ಆಂತರ್ಯ.

ಅಥವಾ ತೊಡೆಯ ಮೇಲೆ ಮೇಲ್ಮುಖವಾಗಿ ಇಡಲ್ಪಟ್ಟ ಅಂಗೈಗಳೆರಡು ಪ್ರಸಾದ ಮುದ್ರೆಯನ್ನು ಸೂಚಿಸಿದ್ದು ಭಕ್ತರ ಅಭೀಷ್ಟವನ್ನು ನೀಡುವಲ್ಲಿ ಯಶಸ್ವಿಯಾಗಿವೆ ಎನ್ನಬಹುದು.

ಹಾಗೆಯೇ ನರಸಿಂಹನ ಎರಡು ಕೈಗಳು ಕುಳಿತಿರುವ ಅವನ ಮೊಣಕಾಲ ಮೇಲೆ ಚಾಚಿವೆ –**'ಜಾನುಪ್ರಸಕ್ತಕರಯುಗ್ಮಂ.....'**

ಭದ್ರಾವತಿಯ ರಾಘವೇಂದ್ರಸ್ವಾಮಿಮಠದಲ್ಲಿ ಸುಮಾರು ಇನ್ನೂರು, ಮುನ್ನೂರು ವರ್ಷ ಹಿನ್ನೆಲೆ ಉಳ್ಳ ಶ್ರೀನರಸಿಂಹನ ಪ್ರತಿಮೆಯೊಂದಿದ್ದು, ಅದರ ಜಾನುಪ್ರಸಕ್ತ ಕೈಗಳು 'ವರ' 'ಅಭಯ' ಮುದ್ರಾಯುತಗಳಾಗಿಯೇ ಇವೆ.

ಈ ಕೃತಿಯ ಮುಖಪುಟದಲ್ಲಿ ಸೂರ್ಯನಾರಾಯಣನಾಗಿ ವಿರಾಜಿಸುತ್ತಿರುವ ಉಡುಪಿ ಶ್ರೀಕೃಷ್ಣನ ಎರಡು ಕೈಗಳಲ್ಲೂ 'ವರ' ಮತ್ತು 'ಅಭಯ' ಮುದ್ರೆಗಳು ವಿರಾಜಿಸುತ್ತಿರುವುದನ್ನು ಗಮನಿಸಬಹುದು. — *ಉಡುಪಿ ರಾಮನಾಥ ಆಚಾರ್ಯ*

* * *

## ಗಾಯತ್ರೀತಂತ್ರದಲ್ಲಿಯ ಪ್ರಾಯಶ್ಚಿತ್ತಗಳು

ಜೇನು – ಪ್ರಮೇಹಶಾಂತಿ
ಆರಳು – ಕನ್ಯಾ/ವರಪ್ರಾಪ್ತಿ
ಅನ್ನವ್ರೀಹ್ಯಾದಿ – ಅನ್ನವ್ರೀಹ್ಯಾದಿಪ್ರಾಪ್ತಿ
ಮಾವಿನ ಎಲೆ – ಜ್ವರಶಾಂತಿ
ಶಂಖಹೂ – ಕುಷ್ಠನಾಶ
ಕೆಂಪುಪದ್ಮ – ಸಂಪತ್ತಿನಲಾಭ

## ಗಾಯತ್ರಿಯಲ್ಲಿ ಪಂಚಭೇದಗಳು

ಮಧ್ವಸಿದ್ಧಾಂತ ಪ್ರತಿಪಾದಿಸಿದ ಪಂಚಭೇದಗಳು ಗಾಯತ್ರಿಯಲ್ಲಿ ಸೂಚಿತವಾಗಿವೆ. 'ಧಿಯೋ ಯೋ ನಃ ಪ್ರಚೋದಯಾತ್' ಎಂಬ ಭಾಗದಿಂದ ನಮ್ಮ ಬುದ್ಧಿಗಳನ್ನು ಪರಮಾತ್ಮನು ಪ್ರೇರಿಸುವವನೆಂದು ಹೇಳಿದೆ. ನಮ್ಮ ಬುದ್ಧಿಗಳು ಪ್ರೇರ್ಯ. ಪರಮಾತ್ಮನು ಪ್ರೇರಕ. ಆದುದರಿಂದ ಜೀವೇಶ್ವರಭೇದ ಇದರಿಂದ ಸೂಚಿತ. 'ನಃ' ನಮ್ಮ ಎಂಬಲ್ಲಿಯ ಬಹುವಚನದಿಂದ ಜೀವ-ಜೀವಭೇದ ಸೂಚಿತ. 'ಧಿಯಃ' ಬುದ್ಧಿಗಳನ್ನು ಎಂಬಲ್ಲಿಯ ಬಹುವಚನದಿಂದ ಜಡ-ಜಡ ಭೇದ ಸೂಚಿತ. ಜಡವಾದ ಮನಸ್ಸಿನ ವಿಕಾರವೇ ಬುದ್ಧಿ. ಅಂತಹ ಬುದ್ಧಿಯನ್ನು ಪ್ರೇರಿಸುವವನು ಪರಮಾತ್ಮನಾದುದರಿಂದ ಜಡೇಶ್ವರಭೇದ ಸೂಚಿತ. 'ನಃ ಧಿಯಃ' ನಮ್ಮ ಬುದ್ಧಿಯನ್ನು ಎಂದು ಹೇಳಬೇಕಾದರೆ ನಮಗೂ ಬುದ್ಧಿಗೂ ಭೇದವಿರಬೇಕು. ಹೀಗೆ ಜೀವಜಡಭೇದ ಸೂಚಿತ.

ಈ ರೀತಿಯಾಗಿ ಪಂಚಭೇದಗಳನ್ನು ಸೂಚಿಸುತ್ತಿರುವ ಗಾಯತ್ರಿಯ ವ್ಯಾಖ್ಯಾನ ರೂಪದಲ್ಲಿ ಸಕಲವೇದವೂ ಇರುವುದರಿಂದ ಅಂತಹ ವೇದದಲ್ಲೂ ಪಂಚಭೇದಗಳು ಪ್ರತಿಪಾದಿತಗಳಾಗಿವೆ ಎಂಬುದು ಸ್ಪಷ್ಟ.

— *-ಶ್ರೀ ವಿದ್ಯಾಮಾನ್ಯತೀರ್ಥರು.*

* * *

## ಮೈನ್‌ಸ್ವಿಚ್ ಆಫ್

ಅರ್ಥವನ್ನು ತಿಳಿಯದೆ ಸಾವಿರ ಬಾರಿ ಗಾಯತ್ರೀಮಂತ್ರವನ್ನು ಜಪಿಸಿದರೂ ಫಲವಿಲ್ಲ. ಮೈನ್ ಸ್ವಿಚ್ಚನ್ನು ಆಫ್‌ಮಾಡಿ ಉಳಿದ ಎಲ್ಲ ಸ್ವಿಚ್‌ಗಳನ್ನು ಸಾವಿರ ಬಾರಿ ಆನ್ ಮಾಡಿದರೂ ಬಲ್ಬಿನಲ್ಲಿ ಪ್ರಕಾಶ ಕಾಣಸಿಗದು.

ಗಾಯತ್ರೀಮಂತ್ರಾರ್ಥವಾದ ಹರಿಯ ಗುಣದ ಬಗ್ಗೆ ನಮ್ಮ ಮೈಂಡ್ ಎಂಬ ಮೈನ್ ಸ್ವಿಚ್ಚನ್ನು ಆಫ್‌ಮಾಡಿ ನಮ್ಮ ನಾಲಿಗೆ ಎಂಬ ಸ್ವಿಚ್ಚನ್ನು ಸಾವಿರಾರು ಬಾರಿ ಆನ್ ಮಾಡಿದರೂ ನಾವು ನಮ್ಮಲ್ಲಿ ಆಧ್ಯಾತ್ಮಿಕ ಪ್ರಕಾಶವನ್ನು ಕಾಣಲಾರೆವು.

ಆದುದರಿಂದ ಗಾಯತ್ರಿಯನ್ನು ಜಪಿಸುವಾಗ ಅರ್ಥಜ್ಞಾನ ಹಾಗೂ ದೇವತಾ ಧ್ಯಾನ ಇವೆರಡೂ ಆವಶ್ಯಕಗಳು. ಅವುಗಳಿದ್ದಾಗಲೇ ಗಾಯತ್ರೀಜಪವು ವೀರ್ಯವತ್ತರವಾಗುವುದು. — *ಶ್ರೀ ವಿದ್ಯೇಶತೀರ್ಥರು*

* * *

## ಯಜುರ್ವೇದದಲ್ಲಿ ಗಾಯತ್ರೀಮಂತ್ರ

ಕಾಣ್ವಸಂಹಿತಾ (೩-೪೩, ೨೪-೧೩, ೩೪-೨); ವಾಜಸನೇಯಸಂಹಿತಾ (೩-೩೫, ೨೨-೯, ೩೦-೨); ತೈತ್ತಿರೀಯಸಂಹಿತಾ (೧-೫-೬-೧೨, ೪-೧-೧೧-೭); ಮೈತ್ರಾಯಣೀಯಸಂಹಿತಾ (೪-೧೦-೭೭); ತೈತ್ತಿರೀಯಾರಣ್ಯಕ (೧-೧೧-೨)

## ಗಾಯತ್ರೀಮಂತ್ರವರ್ಣಾರ್ಥ

ಮಾಧವಾರಣ್ಯರ ಶಿಷ್ಯ ವಿದ್ಯಾರಣ್ಯರು ರಾಮಾಯಣರಹಸ್ಯ ಎಂಬ ತಮ್ಮ ಕಿರು ಕೃತಿಯಲ್ಲಿ ೨೪ ಶ್ಲೋಕಗಳಲ್ಲಿ ಗಾಯತ್ರೀಮಂತ್ರದ ಪ್ರತ್ಯಕ್ಷರದ ಅರ್ಥವನ್ನು ಏಕಾಕ್ಷರ ಕೋಶದ ಆಧಾರವನ್ನು ನೀಡುತ್ತಾ ವಿವರಿಸಿದ್ದಾರೆ. ವಿಷ್ಣುವಿನ ಗುಣಗಳನ್ನು ಪ್ರತಿಪಾದಿಸಿ ರುವರು. ಮುಖ್ಯವಾದ ಒಂದು ಅರ್ಥವನ್ನಿಲ್ಲಿ ಸಂಗ್ರಹಿಸಲಾಗಿದೆ.

**ತತ್** – ಸತ್ಯಜ್ಞಾನಾದಿಗುಣಪೂರ್ಣ
**ಸ** – ಸತ್ಯಪ್ರತಿಜ್ಞ
**ವಿ** – ಶತ್ರುನಿಗ್ರಹಸಮರ್ಥ
**ತುಃ** – ಆಯುಧಧರ
**ವ** – ಅಭಯಪ್ರದ
**ರೇ** – ಭಕ್ತನಿಷೇವ್ಯ
**ಣಿ** – ದೀನನಾಥಶರಣ್ಯ
**ಯಂ** – ಮಿತ್ರವಿಶ್ವಾಸಿ
**ಭಃ** – ಬಲವನ್ನು ವ್ಯಕ್ತಮಾಡಿದವ
**ಗಃ** – ಆಶ್ರಿತಾನಂದಕರ
**ದೇ** – ಸರ್ವಪೂಜ್ಯ
**ವ** – ಭಯನಿವಾರಕ
**ಸ್ಯ** – ದೀನದುಃಖಾಪನೋದಕ
**ಧೀ** – ಧರ್ಮಸ್ಥಾಪಕ
**ಮ** – ಆಧಿಹರ
**ಹಿ** – ವ್ಯಾಧಿಹರ
**ಧಿ** – ಶುಭಸದ್ವೃತ್ತಿಹೇತು
**ಯಃ** – ಸರ್ವಾಶ್ರಯ
**ಯಃ** – ನಾನಾಭೀತ್ಯಪಹಾರಿ
**ನಃ** – ಅಖಿಲೈಶ್ವರ್ಯಪ್ರದ
**ಪ್ರ** – ಸ್ಥಾನಪ್ರದ
**ಚೋ** – ಸರ್ವಲೋಕನಿಯಂತೃ
**ದ** – ಸರ್ವಲೋಕಾಧಿಪತಿ
**ಯಾತ್** – ಸಮಸ್ತಫಲದಾತೃ

— *ಉಡುಪಿ ರಾಮನಾಥ ಆಚಾರ್ಯ.*

ಓಂ

## ಭಾಗ – ೩

*

# ಗಾಯತ್ರಿ ಮತ್ತು ಇತರ ಕೃತಿಗಳು

*

**ವೇದಮಾತಾ ತು ಗಾಯತ್ರೀ**

(ತಂತ್ರಸಾರಸಂಗ್ರಹ)

ಗಾಯತ್ರೀಮಂತ್ರವು ವೇದದ ಮಾತೃಸ್ಥಾನದಲ್ಲಿದೆ.

ಪ್ರಣವಾರ್ಥಾಃ ವ್ಯಾಹೃತಯೋ
ವ್ಯಾಹೃತ್ಯರ್ಥಾ ಋಗಾದಯಃ ।
ಇತಿಹಾಸಪುರಾಣಂ ಚ
ಪಂಚರಾತ್ರಂ ಚ ಸರ್ವಶಃ ॥

# ಶ್ರೀಮಧ್ವಾಚಾರ್ಯರು ಮತ್ತು ಗಾಯತ್ರೀಮಂತ್ರ

ಸಗ್ರಿ ರಾಘವೇಂದ್ರ ಉಪಾಧ್ಯಾಯ

'ಋಗ್ಭಾಷ್ಯ'ದ ಮೂಲಕ ಋಗ್ವೇದದ ನಲ್ವತ್ತು ಸೂಕ್ತಗಳ ಕುರಿತು ತಂತ್ರಸಾರಸಂಗ್ರಹದ ಮೂಲಕ ಅನೇಕ ಮಂತ್ರಗಳ ಕುರಿತು, ಸದಾಚಾರಸ್ಮೃತಿಯ ಮೂಲಕ ನಿತ್ಯಾಹ್ನಿಕಗಳ ಕುರಿತು, ಉಪನಿಷದ್ಭಾಷ್ಯಗಳ ಮೂಲಕ ಬೇರೆ ಬೇರೆ ವಿದ್ಯೆಗಳ ಅನುಸಂಧಾನದ ಬೆಳಕುಚೆಲ್ಲಿರುವ ಶ್ರೀಮಧ್ವಾಚಾರ್ಯರಿಂದ ಗಾಯತ್ರೀ ಮಂತ್ರದ ವಿಷಯದಲ್ಲೂ ಸಾಕಷ್ಟು ಬೆಳಕುಚೆಲ್ಲಲ್ಪಟ್ಟಿದೆ. ಅವರ ಋಗ್ಭಾಷ್ಯ, ತಂತ್ರಸಾರಸಂಗ್ರಹ, ಸದಾಚಾರಸ್ಮೃತಿ, ಉಪನಿದ್ಭಾಷ್ಯಗಳು –ಇವುಗಳಲ್ಲಿ ಗಾಯತ್ರೀ ಮಂತ್ರದ ಪ್ರತಿಪಾದ್ಯ, ಅರ್ಥ, ಜಪವಿಧಾನ, ಅಭಿಮಾನಿ, ಭಗವದ್ರೂಪಗಳ ಅನುಸಂಧಾನ –ಮುಂತಾದ ಅಂಶಗಳಿಗೆ ಸಂಬಂಧಪಟ್ಟು ಅನೇಕ ಮಾಹಿತಿಗಳು ದೊರಕುವವು. ಅವನ್ನೆಲ್ಲ ಕ್ರೋಢೀಕರಿಸಿ ಗಾಯತ್ರಿಯ ಬಗ್ಗೆ ಆಚಾರ್ಯರಿಂದ ಸಂದ ಕೊಡುಗೆಯನ್ನು ಹೀಗೆ ಉಲ್ಲೇಖಿಸಬಹುದು.

೧) ಗಾಯತ್ರೀಮಂತ್ರದಿಂದ ಪ್ರತಿಪಾದ್ಯನಾಗಿರುವವನು ಸೂರ್ಯಮಂಡಲದಲ್ಲಿರುವ ನಾರಾಯಣನು ಎಂದು ಸ್ಪಷ್ಟಪಡಿಸಿ, ಅವನನ್ನು ಹೇಗೆ ಧ್ಯಾನಿಸಬೇಕೆಂದು ತಿಳಿಸಿಕೊಡಲಾಗಿದೆ. (ಸದಾಚಾರಸ್ಮೃತಿ ೭, ೯, ತಂತ್ರಸಾರಸಂಗ್ರಹ ೧–೩೯, ಐ.ಉ.ಭಾ. ೨–೧–೧–೧)

೨) ಗಾಯತ್ರಿಯಿಂದ ಮುಖ್ಯಪ್ರತಿಪಾದ್ಯನಾದ ನಾರಾಯಣಪರವಾಗಿ ಗಾಯತ್ರೀ ಮಂತ್ರದ ಅರ್ಥವನ್ನು ಹೇಗೆ ಚಿಂತಿಸಬೇಕೆಂದು ತೋರಿಸಿಕೊಡಲಾಗಿದೆ. (ಋಗ್ಭಾಷ್ಯ ೧–೧, ೨, ೩)

೩) ಗಾಯತ್ರೀಮಂತ್ರಕ್ಕೂ ಪ್ರಣವ, ವ್ಯಾಹೃತಿ, ಪುರುಷಸೂಕ್ತ, ಸಕಲ ವೇದಗಳು, ಸಕಲ ಶಾಸ್ತ್ರಗಳು –ಇವುಗಳಿಗೆ ಇರುವ ಗಾಢವಾದ ನಂಟನ್ನು ಪರಿಚಯಿಸಿಕೊಡಲಾಗಿದೆ. "ವೇದಮಾತಾ ತು ಗಾಯತ್ರೀ......" ಎಂದೇ ಘೋಷಿಸಲಾಗಿದೆ. (ಋಗ್ಭಾಷ್ಯ ೧–೪, ತಂತ್ರಸಾರಸಂಗ್ರಹ ೧–೧೪)

೪) ಭಾಗವತವು ಗಾಯತ್ರಿಯ ಭಾಷ್ಯರೂಪದಲ್ಲಿದೆ ಎಂದು ತಿಳಿಸಲಾಗಿದೆ. (ಭಾಗ. ತಾ. ನಿ. ೧–೧–೧)

೫) ಗಾಯತ್ರೀಮಂತ್ರದಲ್ಲಿ ವಿಶ್ವಾಮಿತ್ರಗಾಯತ್ರೀ, ಬ್ರಹ್ಮಗಾಯತ್ರೀ ಎಂಬ ಪ್ರಭೇದಗಳನ್ನು ತಿಳಿಸಿ ಸಂಧ್ಯಾವಂದನೆಯಲ್ಲಿ .ವಿಶ್ವಾಮಿತ್ರಗಾಯತ್ರಿಯನ್ನು ಬಳಸಿಕೊಂಡರೆ ಪ್ರಾಯಶ್ಚಿತ್ತಾದಿ ಕರ್ಮಗಳಲ್ಲಿ ಬ್ರಹ್ಮಗಾಯತ್ರಿಯನ್ನೇ ವಿನಿಯೋಗಿಸಿಕೊಳ್ಳಬೇಕೆಂದು ಪರಿಚಯಿಸಲಾಗಿದೆ. (ತಂ.ಸಾ.ಸಂ. ೧–೩೭)

೬) ಸಂಧ್ಯಾವಂದನೆಯ ಅಂಗವಾಗಿ ಗಾಯತ್ರಿಯನ್ನು ಎಷ್ಟು ಸಂಖ್ಯೆಯಲ್ಲಿ ಜಪಿಸಬೇಕೆಂಬುದನ್ನು, ಸೂರ್ಯದರ್ಶನದವರೆಗೆ ನಿಂತುಕೊಂಡು ಬಳಿಕ ನಿಂತು ಅಥವಾ ಕುಳಿತು ಜಪಿಸಬೇಕೆಂಬುದನ್ನು ತಿಳಿಸಿರುವುದಲ್ಲದೆ ಗಾಯತ್ರಿಯ ಮೂರು ಪಟ್ಟು ನಾರಾಯಣಾಷ್ಟಾಕ್ಷರ ಮಂತ್ರವನ್ನು ಜಪಿಸ ಬೇಕೆಂಬುದನ್ನು ಸೂಚಿಸಲಾಗಿದೆ. (ಸದಾಚಾರಸ್ಮೃತಿ ೮)

೭) ಗಾಯತ್ರೀಮಂತ್ರಕ್ಕು ನಾರಾಯಣಾಷ್ಟಾಕ್ಷರಮಂತ್ರ, ವಾಸುದೇವದ್ವಾದಶಾಕ್ಷರ ಮಂತ್ರ ಇವುಗಳಿಗು ಇರುವ ನಂಟನ್ನು ತಿಳಿಸಿರುವುದಲ್ಲದೆ, ಗಾಯತ್ರಿಯ ೨೪ ಅಕ್ಷರಗಳಿಂದ ಪ್ರತಿಪಾದ್ಯ ಭಗವದ್ರೂಪಗಳನ್ನೂ ತಿಳಿಸಲಾಗಿದೆ. (ತಂ. ಸಾ. ಸಂ. ೧–೧೨, ೧೩)

೮) "ಕುರ್ಯಾದನ್ಯನ್ನ ವಾ ಕುರ್ಯಾತ್ ಮೈತ್ರೋ ಬ್ರಾಹ್ಮಣ ಉಚ್ಯತೇ" ಎಂಬ ಶ್ಲೋಕವನ್ನು ಉಲ್ಲೇಖಿಸಿ ಬ್ರಾಹ್ಮಣ್ಯದ ರಕ್ಷಣೆಯಲ್ಲಿ ಗಾಯತ್ರೀ ಜಪದ ಅನಿವಾರ್ಯತೆಯನ್ನು ಸೂಚಿಸಲಾಗಿದೆ. (ತೈ.ಉ.ಭಾ. ೧–೧೫)

೯) ಬ್ರಹ್ಮಾಸ್ತ್ರಕ್ಕೆ ಗಾಯತ್ರಿಯೇ ಮಂತ್ರ ಎಂದು ತಿಳಿಸಿಕೊಡುವ ಮೂಲಕ ಗಾಯತ್ರಿಯ ಹಿರಿಮೆಯನ್ನು ಎತ್ತಿತೋರಿಸಲಾಗಿದೆ. (ಮ.ಭಾ.ತಾ.ನಿ. ೨೮–೧೬೩)

೧೦) ಗಾಯತ್ರೀಛಂದಸ್ಸಿನ ಅಭಿಮಾನಿದೇವತೆಗಳನ್ನು ಗಾಯತ್ರೀಮಂತ್ರದ ಅಭಿ ಮಾನಿದೇವತೆಗಳನ್ನು ಪರಿಚಯಿಸಿಕೊಟ್ಟು ಗಾಯತ್ರೀಜಪಕ್ಕೆ ಅನುಕೂಲತೆ ಯನ್ನು ಒದಗಿಸಲಾಗಿದೆ. (ಋಗ್ಭಾಷ್ಯ ೧–೪೨, ಬೃ.ಉ.ಭಾ. ೭–೧೯–೫)

೧೧) ಸಮಗ್ರ ವೇದವನ್ನು ಆಯಾ ದೇವತಾ ಪರವಾಗಿ, ಪ್ರಾಣದೇವರ ಪರವಾಗಿ ಹಾಗೂ ಭಗವಂತನ ಪರವಾಗಿ –ಹೀಗೆ ಮೂರು ಸ್ತರಗಳಲ್ಲಿ ಅರ್ಥೈಸಿ ಕೊಳ್ಳಬೇಕೆಂಬ ಸಂದೇಶಕ್ಕನುಗುಣವಾಗಿ ಗಾಯತ್ರೀಮಂತ್ರಕ್ಕು ಮೂರು ಸ್ತರ ಗಳಲ್ಲಿ ಅರ್ಥಚಿಂತನೆ ನಡೆಸಲು ಮಾರ್ಗದರ್ಶನ ನೀಡಿದಂತಾಗಿದೆ. (ಋಗ್ಭಾಷ್ಯ ೧–೭೬)

೧೨) ವೇದದ ಉದಾತ್ತಾದಿ ಸ್ವರಗಳ ಅರ್ಥಚಿಂತನೆ ಹೇಗೆ ನಡೆಸಬೇಕೆಂದು ಮಾರ್ಗದರ್ಶನ ನೀಡುವ ಮೂಲಕ ಗಾಯತ್ರೀಮಂತ್ರದ ಸ್ವರಗಳ ಅರ್ಥಚಿಂತನೆಗೂ ಸೌಕರ್ಯವನ್ನು ಒದಗಿಸಿದಂತಾಗಿದೆ. (ಋಗ್ಭಾಷ್ಯ ೧–೯೭)

೧೩) ಬೃಹದಾರಣ್ಯಕೋಪನಿಷತ್ತಿನ (೭–೧೯) ಸಂದೇಶವಾಗಿ ಗಾಯತ್ರೀಮಂತ್ರದ ನಾಲ್ಕು ಪಾದಗಳಲ್ಲಿ (ಪ್ರಣವವನ್ನು ನಾಲ್ಕನೇ ಪಾದ ಎಂದು ಪರಿಗಣಿಸಿ) ಯಾವ ಯಾವ ಭಗವದ್ರೂಪದ ಉಪಾಸನೆಯನ್ನು ನಡೆಸಬೇಕು? ಅದರ ಫಲ ಏನು? ಗಾಯತ್ರಿಯ ಮೊದಲ ಅಕ್ಷರದಲ್ಲಿ ಯಾರನ್ನು ಉಪಾಸಿಸ ಬೇಕು? ಎಂಬುದರ ಬಗ್ಗೆ ಸ್ಪಷ್ಟೀಕರಣ ನೀಡಿದ್ದರೆ, ಛಾಂದೋಗ್ಯೋಪನಿಷತ್ತಿನ

(೩–೨–೧) ಸಂದೇಶವಾಗಿ ಗಾಯತ್ರೀಪ್ರತಿಪಾದ್ಯಗಳಾದ ಆರು ಭಗವದ್ರೂಪಗಳ ಗಾಯತ್ರೀಪ್ರತಿಪಾದ್ಯನ ನಾಲ್ಕು ಪಾದಗಳ ಬಗ್ಗೆ ಸ್ಪಷ್ಟೀಕರಣ ನೀಡಿ ಉಪಾಸನೆಗೆ ಮೆರುಗನ್ನು ಕಲ್ಪಿಸಿಕೊಡಲಾಗಿದೆ.

ಹೀಗೆ ಗಾಯತ್ರಿಯ ಹಿರಿಮೆ–ಗರಿಮೆಗಳನ್ನು ಗುರುತಿಸಿಕೊಳ್ಳುವಲ್ಲಿ, ಅರ್ಥಾನುಸಂಧಾನ ನಡೆಸುವಲ್ಲಿ ಜಪಾನುಷ್ಠಾನ ನಡೆಸುವಲ್ಲಿ ಶ್ರೀಮದಾಚಾರ್ಯರಿಂದ ಬಹಳಷ್ಟು ಕೊಡುಗೆ ಸಂದಿದೆ.

*

## ನಾರಾಯಣನ ಶಕ್ತಿ; ಸೂರ್ಯನದ್ದಲ್ಲ

ಸಾಮಾನ್ಯವಾಗಿ ಬೆಳಕುನೀಡಿ, ಬುದ್ಧಿಪ್ರೇರಣೆ ನಡೆಸುವವನು ಸೂರ್ಯನೆಂದು ಭಾವಿಸಲಾಗುವುದು.

ಆದರೆ ಗಾಯತ್ರೀಮಾತೆ 'ದೇವಸ್ಯ' ಎಂಬ ಪದದಿಂದ ಮುಖ್ಯವಾಗಿ ಬೆಳಕು ನೀಡುವವನು ನಾರಾಯಣನೆಂದು ತಿಳಿಸಿ, ಹೀಗೆ ಬೆಳಕು ನೀಡಿ ಬುದ್ಧಿಪ್ರೇರಣೆ ನಡೆಸುವವನೂ ಅವನೇ ಎಂಬುದಾಗಿ 'ಧಿಯೋ ಯೋ ನಃ ಪ್ರಚೋದಯಾತ್' ಎಂಬ ಭಾಗದಿಂದ ತಿಳಿಸಿಕೊಡುವಳು.

ಹಾಗೆಯೇ ಬಿಸಿಮಾಡುವುದು, ಮಾಗಿಸುವುದು ಹಾಗೂ ಒಣಗಿಸುವುದು ಸೂರ್ಯನಿಂದ ನಡೆಯುವುದೆಂದು ಭಾವಿಸಲಾಗುವುದು.

ಇದನ್ನು ಗಾಯತ್ರೀಮಾತೆ 'ಭರ್ಗಃ' ಎಂಬ ಪದದಿಂದ ಒಣಗಿಸುವ ಹಾಗೂ ಮಾಗಿಸುವ 'ಭರ್ಜನ' ನಾರಾಯಣನಿಂದಲೇ ನಡೆಯುವುದು ಎಂದು ತಿಳಿಸಿಕೊಡುವಳು. ಒಣಗಿಸುವವನು, ಮಾಗಿಸುವವನು ಅವನೇ ಎಂದ ಮೇಲೆ ಅದಕ್ಕೆ ಬೇಕಾದ ಬಿಸಿಮಾಡುವಿಕೆಯೂ ಅವನದ್ದೇ ಎಂದು ಸೂಚಿತವಾಗುವುದು.

ಹೀಗೆ ಗಾಯತ್ರಿಯಿಂದ ನಾರಾಯಣನ ಶಕ್ತಿ ಎಂದು ಸಿದ್ಧವಾಗುವ ಸೂರ್ಯನ ಮೂಲಕ ಹೊರಹೊಮ್ಮುವ ನಾಲ್ಕು ಶಕ್ತಿಗಳನ್ನು ಉಲ್ಲೇಖಿಸಿ, ಆ ಶಕ್ತಿ ನಾರಾಯಣನದ್ದೇ ಹೊರತು ಸೂರ್ಯನದ್ದಲ್ಲ ಎಂದು 'ಪಾದ್ಮ' (ಐ.ಉ.ಭಾ. ೨–೧–೧–೧) ಸ್ಪಷ್ಟಪಡಿಸಿದೆ–

**ತಾಪನೀ ಪಾಚಿಕಾ ಚೈವ ಶೋಷಣೀ ಚ ಪ್ರಕಾಶನೀ ।**
**ನೈವ ರಾಜನ್ ರವೇಃ ಶಕ್ತಿಃ ಶಕ್ತಿರ್ನಾರಾಯಣಸ್ಯ ಸಾ ॥**

— ಸಗ್ರಿ

# ಗಾಯತ್ರಿಯ ವ್ಯಾಖ್ಯಾವ್ಯಾಖ್ಯೇಯ ಭಾವ

ಸಗ್ರಿ ರಾಘವೇಂದ್ರ ಉಪಾಧ್ಯಾಯ

ಗಾಯತ್ರೀಮಂತ್ರದ ಅನೇಕ ವೈಶಿಷ್ಟ್ಯಗಳಲ್ಲಿ ಒಂದು ವೈಶಿಷ್ಟ್ಯವೆಂದರೆ ಅದು 'ಭೂರ್ಭುವಃಸ್ವಃ' ಎಂಬ ಮೂರು ವ್ಯಾಹೃತಿಯ ವ್ಯಾಖ್ಯಾನವಾದರೆ ಮೂರು ವರ್ಗಗಳ ಪುರುಷಸೂಕ್ತಕ್ಕೆ ವ್ಯಾಖ್ಯೇಯ; ಅಂದರೆ ಮೂಲವಾಗಿದೆ ಎಂಬುದು. ಹಾಗೆಯೇ ಅಷ್ಟಾಕ್ಷರ ಹಾಗೂ ದ್ವಾದಶಾಕ್ಷರಗಳ ವ್ಯಾಖ್ಯಾನವಾಗಿದೆ.

### ವ್ಯಾಖ್ಯಾ–ವ್ಯಾಖ್ಯೇಯ ಭಾವವೇ ವ್ಯಂಗ್ಯ–ವ್ಯಂಜಕ ಭಾವ:

ತಂತ್ರಸಾರಸಂಗ್ರಹದಲ್ಲಿ (೧–೧೪, ೧೫) ಶ್ರೀಮದಾಚಾರ್ಯರು ಮೂರು ಬಾರಿ ಉಚ್ಚರಿಸಲ್ಪಟ್ಟ ನಾರಾಯಣಾಷ್ಟಾಕ್ಷರ ಮಂತ್ರದಿಂದ, ಎರಡು ಆವೃತ್ತಿಯ ವಾಸುದೇವ ದ್ವಾದಶಾಕ್ಷರಮಂತ್ರದಿಂದ ಗಾಯತ್ರಿಯು ಅಭಿವ್ಯಕ್ತವಾಗಿದೆ. ಅಂತಹ ಗಾಯತ್ರಿಯಿಂದ ಪುರುಷಸೂಕ್ತ ಅಭಿವ್ಯಕ್ತವಾಗಿದೆ ಎಂದು ತಿಳಿಸಿದ್ದಾರೆ –

**ನಾರಾಯಣಾಷ್ಟಾಕ್ಷರಾಚ್ಚ ವ್ಯಾಹೃತಿತ್ರಿಗುಣಾತ್ಪುನಃ ।**
**ವೇದಮಾತಾ ತು ಗಾಯತ್ರೀ ದ್ವಿಗುಣಾ ದ್ವಾದಶಾಕ್ಷರಾತ್ ।**
**..........ತದ್ಭೇದಃ ಪೌರುಷಂ ಸೂಕ್ತಂ........**

ಇಲ್ಲಿ ನಾರಾಯಣಾಷ್ಟಾಕ್ಷರಾದಿಗಳು ಗಾಯತ್ರೀಮಂತ್ರ ಹಾಗೂ ಪುರುಷ ಸೂಕ್ತ ಇವುಗಳ ನಡುವೆ ಅನ್ಯೋನ್ಯವಾಗಿ ವ್ಯಂಗ್ಯ–ವ್ಯಂಜಕ ಭಾವವನ್ನು ತಿಳಿಸಲಾಗಿದೆ. ಈ ವ್ಯಂಗ್ಯ–ವ್ಯಂಜಕ ಭಾವ ಆಯಾ ಮಂತ್ರಗಳ ಭಗವದ್ರೂಪಗಳ ವಿಷಯದಲ್ಲಿ ಅಲ್ಲದೆ, ಮಂತ್ರಗಳ ವ್ಯಾಖ್ಯಾವ್ಯಾಖ್ಯೇಯಭಾವವೂ ಆಗಿದೆ.

**ವ್ಯಾಖ್ಯಾವ್ಯಾಖ್ಯೇಯರೂಪತ್ವಂ ವಿಕಾರಿತ್ವಮಿಹೋದಿತಮ್**
**ವಿಕಾರಿತ್ವಂ ಚ ನಾನ್ಯತ್ ಸ್ಯಾನ್ನಿತ್ಯಾ ವೇದಾ ಯತೋಽಖಿಲಾಃ ॥**

ಎಂದು ಅಕಾರದ ವಿಕಾರವೇ ಸಕಲ ವೇದಗಳು ಎಂಬ ಐತರೇಯ (೨–೨–೫)ದ ನಿರೂಪಣೆಗೆ ಸಂಬಂಧಿಸಿದಂತೆ 'ಬ್ರಹ್ಮಸಾರ, ಮಾಡಿರುವ ವಿವರಣೆ ಯನ್ನು ತಂತ್ರಸಾರಸಂಗ್ರಹದ ನಿರೂಪಣೆಗೂ ಅನ್ವಯಿಸಿಕೊಂಡು ನಾರಾಯ ಣಾಷ್ಟಾಕ್ಷರಾದಿಗಳ ನಡುವೆ ಹೇಳಿರುವ ವ್ಯಂಗ್ಯವ್ಯಂಜಕಭಾವರೂಪವಾದ ವಿಕಾರ ಎಂದರೆ ವ್ಯಾಖ್ಯಾವ್ಯಾಖ್ಯೇಯಭಾವವೇ ಹೊರತು ಬೇರೆ ಯಾವುದೇ ಬಗೆಯ ದ್ದಲ್ಲ ಎಂದು ವಿವೇಚಿಸಿಕೊಳ್ಳಬೇಕು. ಆದುದರಿಂದಲೇ ಋಗ್ಭಾಷ್ಯದಲ್ಲಿ "**ಸ ಪೂರ್ಣತ್ವಾತ್ ಪುಮಾನ್ ನಾಮ ಪೌರುಷೇ ಸೂಕ್ತ ಈರಿತಃ**" ಎಂದು ಗಾಯತ್ರೀ ಪ್ರತಿಪಾದ್ಯ ಭಗವಂತನು ಪುರುಷಸೂಕ್ತದಲ್ಲಿ ಪ್ರತಿಪಾದ್ಯನಾಗಿರುವನು ಎಂಬು ದಾಗಿಯೇ ನಿರೂಪಿಸಲಾಗಿದೆ.

ಆದುದರಿಂದ ವ್ಯಾಹೃತಿ–ಗಾಯತ್ರಿಗೂ, ನಾರಾಯಣಾಷ್ಟಾಕ್ಷರ–ಗಾಯತ್ರಿಗೂ, ವಾಸುದೇವದ್ವಾದಶಾಕ್ಷರ–ಗಾಯತ್ರಿಗೂ ಮತ್ತು ಗಾಯತ್ರೀ–ಪುರುಷಸೂಕ್ತಕ್ಕೂ ವ್ಯಾಖ್ಯಾವ್ಯಾಖ್ಯೇಯಭಾವ ಇದೆ ಎಂದು ಆಚಾರ್ಯರ ಆಶಯ. ಗಾಯತ್ರಿಯು ವ್ಯಾಹೃತಿಯ, ಅಷ್ಟಾಕ್ಷರದ, ದ್ವಾದಶಾಕ್ಷರದ ಅರ್ಥವಿವರಣೆಯನ್ನು ನಡೆಸುತ್ತಿದ್ದರೆ, ಅಂತಹ ಗಾಯತ್ರಿಯ ಅರ್ಥವಿವರಣೆಯನ್ನು ಪುರುಷಸೂಕ್ತವು ನಡೆಸುತ್ತಿದೆ. ಇವುಗಳೊಳಗೆ ಸ್ಫುಟವಾಗಿ ಅರ್ಥವಿವರಣೆ ಕಂಡುಬರದಿದ್ದರೂ ಸ್ಪಷ್ಟೀಕರಣ, ವಿವರಣೆ, ಸಮರ್ಥನೆ, ಉಪಲಕ್ಷಣ ಮುಂತಾದ ಬಗೆಯಿಂದ ವ್ಯಾಖ್ಯಾನಿಸುತ್ತಿರುವುದನ್ನು ಗುರುತಿಸಿಕೊಳ್ಳಬಹುದು.

*

## ವಿದ್ಯಾರಣ್ಯರು ಹೇಳಿದ ಗಾಯತ್ರ್ಯರ್ಥ

**ಗುಣಾಢ್ಯತ್ವಂ ಕಾರಣತ್ವಂ ಶರಣ್ಯತ್ವಂ ಪ್ರಕಾಶತಾ ।**
**ಪ್ರಕಾಶಿತ್ವಂ ಚ ನಿಖಿಲೈರ್ಧ್ಯೇಯತಾ ಚ ನಿಯಂತೃತಾ ।**
**ಏತೇ ಬ್ರಹ್ಮಗುಣಾ ನಿತ್ಯಾ ಗಾಯತ್ರೀಪದಬೋಧಿತಾಃ ॥**

ಗಾಯತ್ರಿಯ 'ತತ್' ಪದದಿಂದ ಪರಬ್ರಹ್ಮನ ಗುಣಪೂರ್ಣತ್ವವು, 'ಸವಿತುಃ' ಪದದಿಂದ ಸಕಲಕಾರಣತ್ವವು, 'ವರೇಣ್ಯಂ' ಪದದಿಂದ ಎಲ್ಲರಿಂದಲೂ ಆಸರೆ ಹೊಂದಲು ಬೇಕಾದ ಸ್ವಭಾವ, 'ಭರ್ಗಃ' ಪದದಿಂದ ಪ್ರಕಾಶ, 'ದೇವಸ್ಯ' ಪದದಿಂದ ಬೆಳಗಿಸುವ ಧರ್ಮ, 'ಧೀಮಹಿ' ಪದದಿಂದ ಎಲ್ಲರಿಂದಲೂ ಧ್ಯಾನಿಸಿಕೊಳ್ಳಲು ಬೇಕಾದ ಅರ್ಹತೆ, 'ಧಿಯೋ ಯೋ ನಃ ಪ್ರಚೋದಯಾತ್' ಭಾಗದಿಂದ ಎಲ್ಲರನ್ನೂ ನಿಯಮಿಸುವಿಕೆ -ಹೀಗೆ ಏಳು ಗುಣಗಳು ಪ್ರತಿಪಾದಿತಗಳಾಗಿದ್ದು, ಅವು ವಾಲ್ಮೀಕಿ ರಾಮಾಯಣದ ಸಪ್ತಕಾಂಡಗಳಲ್ಲಿ ವಿವರಿಸಲ್ಪಟ್ಟಿವೆ ಎಂದು ವಿದ್ಯಾರಣ್ಯರು ತಮ್ಮ 'ರಾಮಾಯಣರಹಸ್ಯ'ದಲ್ಲಿ ತಿಳಿಸಿರುವರು.

ಒಬ್ಬ ಅದ್ವೈತಿ ಚಿಂತಕರು ಗಾಯತ್ರೀ ಅರ್ಥವನ್ನು ಹೇಗೆ ಭಗವತ್ಪರವಾಗಿ ಚಿಂತಿಸಿದ್ದಾರೆಂಬುದು ಉಲ್ಲೇಖಾರ್ಹ.

— *ಉಡುಪಿ ರಾಮನಾಥ ಆಚಾರ್ಯ*

* * *

## ಬುದ್ಧಿಪ್ರಚೋದನೆಯ ತಲವಕಾರ

ಆರಂಭದಲ್ಲೆ ಬುದ್ಧಿಪ್ರಚೋದನೆಯ ಪ್ರಶ್ನೆಯನ್ನು 'ಕೇನೇಷಿತಂ ಪತತಿ ಪ್ರೇಷಿತಂ ಮನಃ' ಎನ್ನುವುದರ ಮೂಲಕ ಚಿಂತನೆ ಮಾಡ ಹೊರಟ ತಲವಕಾರೋಪನಿಷತ್ (ಕೇನೋಪನಿಷತ್) ಗಾಯತ್ರಿಯ ವ್ಯಾಖ್ಯಾನವಾಗಿದೆ.

— *ಗೋವಿಂದದಾಸ*

# ಗಾಯತ್ರಿ ಮತ್ತು ಭಾಗವತ

ಎ. ಹರಿದಾಸ ಭಟ್ಟ

ಬ್ರಹ್ಮಸೂತ್ರಗಳ ಅರ್ಥವೇ ಭಾಗವತದಲ್ಲಿದೆ. ಭಾಗವತಗ್ರಂಥ ಭಾರತಾರ್ಥವನ್ನು ನಿರ್ಣಯಮಾಡುತ್ತದೆ. ಅದು ಗಾಯತ್ರೀಮಂತ್ರದ ಭಾಷ್ಯವೂ ಆಗಿದೆ. ಭಾಷ್ಯ ಎಂದರೆ ಅರ್ಥವಿವರಣೆ. ಗಾಯತ್ರಿಯ ವಿವರಣೆ ಭಾಗವತ. ಗಾಯತ್ರೀ ಮಂತ್ರದಲ್ಲಿ ಹೇಳಿದ ಬುದ್ಧಿಪ್ರೇರಕತ್ವ, ಜಗತ್ಸೃಷ್ಟಿಕರ್ತೃತ್ವ ಮೊದಲಾದ ಮುಖ್ಯ ಗುಣಗಳನ್ನು ಭಾಗವತ ಸಮರ್ಥಿಸುತ್ತದೆ. ಅಲ್ಲದೆ–

**ಚತುರ್ವಿಂಶನ್ಮೂರ್ತಯೋಽಸ್ಯಾಃ ಕಥಿತಾ ವರ್ಣದೇವತಾಃ ॥**

*(ತಂ.ಸಾ.ಸಂ.)*

ಗಾಯತ್ರೀಮಂತ್ರದ ವರ್ಣಗಳು ಕೇಶವಾದಿ ೨೪ ಭಗವದ್ರೂಪಗಳನ್ನು ವರ್ಣಿಸುತ್ತದೆ. ಆ ರೂಪಗಳನ್ನೇ ಭಾಗವತವು ತಿಳಿಸುತ್ತದೆ. ೧೨ ಸ್ಕಂಧಗಳು ಒಂದು ಸ್ಕಂಧದಲ್ಲಿ ಎರಡರಂತೆ ಈ ರೂಪಗಳನ್ನು ಗಾಯತ್ರಿ ತಿಳಿಸುವ ಗುಣಗಳಿಂದ ಪ್ರತಿಪಾದಿಸುತ್ತದೆ. ಅಥವಾ ಆಚಾರ್ಯರು ಬೃಹದಾರಣ್ಯಕಭಾಷ್ಯದಲ್ಲಿ ಗಾಯತ್ರಿಯ ೧೦ ಪದಗಳು ಮತ್ಸ್ಯಾದಿ ಹತ್ತು ಅವತಾರಗಳನ್ನು ಪ್ರತಿಪಾದಿಸುತ್ತದೆ ಎಂದು ಹೇಳಿದ್ದಾರೆ. ಆ ಹತ್ತು ರೂಪಗಳ ವಿವರಣೆ ಭಾಗವತದಲ್ಲಿ ಇದೆ. ಆದ್ದರಿಂದ ಭಾಗವತ ಗಾಯತ್ರೀಭಾಷ್ಯರೂಪ.

ಇದಲ್ಲದೆ ಗಾಯತ್ರಿಯ ಒಂದೊಂದು ಪದಗಳ ಅರ್ಥವಿವರಣೆಯು ಭಾಗವತದಲ್ಲಿ ಬಂದಿದೆ. ಮೊದಲ 'ತತ್' ಎಂಬ ಶಬ್ದಕ್ಕೆ ಗುಣಪೂರ್ಣ ಎಂದು ಅರ್ಥ. ಭಾಗವತದಲ್ಲಿ ಆರಂಭದಿಂದ ಕೊನೆಯವರೆಗೆ ಅನೇಕ ಭಗವದ್ಭಕ್ತರು ಮಾಡಿದ ಸ್ತೋತ್ರಗಳಿಂದ ಭಗವಂತನಿಗೆ ಗುಣಪೂರ್ಣತ್ವ ಸಿದ್ಧಿಸುತ್ತದೆ. ಇದನ್ನೇ ಪದ್ಮಪುರಾಣ **"ಯತ್ರಾಧಿಕೃತ್ಯ ಗಾಯತ್ರೀಂ ವರ್ಣ್ಯತೇ ಧರ್ಮವಿಸ್ತರಃ"** ಎಂದಿದೆ.

'ಸವಿತುಃ' ಎಂದರೆ ಜಗತ್ತಿನ ಸೃಷ್ಟಿಕರ್ತೃ ಎಂದರ್ಥ. ಭಾಗವತದ ಆರಂಭದ ಪದ್ಯದಲ್ಲಿ ಇದರ ವಿವರಣೆ ಇದೆ. ಮೂರನೆಯ ಸ್ಕಂಧ ನವವಿಧ ಸೃಷ್ಟಿಗಳನ್ನು ಹೇಳುವ ಮೂಲಕ ಇದನ್ನು ವಿವರಿಸಿದೆ. ಅಲ್ಲದೆ ಬ್ರಹ್ಮ ರುದ್ರ ಮೊದಲಾದ ದೇವತೆಗಳು ವಿಷ್ಣುವಿನಿಂದ ಸೃಷ್ಟಿಯಾಗಿದ್ದಾರೆ ಎಂದು ತಿಳಿಸಿ ವಿಷ್ಣುವೇ ಸೃಷ್ಟಿಕರ್ತ ಎಂದು ಸ್ಪಷ್ಟಪಡಿಸಿದೆ.

'ವರೇಣ್ಯಂ' "ವರಣೀಯೋ ಗುಣಾನ್ನತೇಃ" ಗುಣಪೂರ್ಣನಾದುದರಿಂದ ಅವನೇ ಭಜಿಸಲು ಯೋಗ್ಯ. ಧ್ರುವ, ಪ್ರಹ್ಲಾದ, ಮಾರ್ಕಂಡೇಯ ಮುಂತಾದವರು ಭಗವಂತನನ್ನು ತಪಸ್ಸುಮಾಡಿ ಪ್ರತ್ಯಕ್ಷೀಕರಿಸಿಕೊಂಡು ಅವನ ಅದ್ಭುತ ವ್ಯಕ್ತಿತ್ವಕ್ಕೆ ವಶರಾಗಿ ಏನೂ ಕೇಳದೆ ಅವನನ್ನೇ ಕೇಳಿದರು.

'ಭರ್ಗಃ' ದುರಿತವನ್ನು ನಾಶಮಾಡುವವನು. ಅಜಾಮಿಳ ದುಷ್ಟಸಂಗಕ್ಕೆ ಬಿದ್ದು ಆರ್ಜಿಸಿದ ಪಾಪವನ್ನು ನಾರಾಯಣಸ್ಮರಣೆಯಿಂದ ಪರಿಹರಿಸಿಕೊಂಡ. ಅಥವಾ ದುಷ್ಟಶಿಕ್ಷಕ ಎಂದು ಭರ್ಗ ಶಬ್ದದ ಅರ್ಥ. ಹಿರಣ್ಯಾಕ್ಷಾದಿ ದುಷ್ಟರ ಸಂಹಾರಮಾಡಿದ ಶ್ರೀಹರಿಗೆ ಭರ್ಗ ಎಂಬ ಹೆಸರು ಅನ್ವರ್ಥ ಎಂದು ಭಾಗವತ ತಿಳಿಸಿದೆ.

'ದೇವಸ್ಯ' ಎಂದರೆ ಕ್ರೀಡಾದಿಗುಣವಿಶಿಷ್ಟ ಎಂದು ಅರ್ಥ. ಭಾಗವತ ಮಾಡುವ ಸೃಷ್ಟಿ ಅವನ ಕ್ರೀಡಾರೂಪವೇ ಹೊರತು ಶ್ರಮಸಾಧ್ಯವಾದ ಕೆಲಸವಲ್ಲ. ಇದನ್ನು "ಯತ್ರ ತ್ರಿಸರ್ಗೋ ಮೃಷಾ" ಎಂಬ ಭಾಗವತ ವಾಕ್ಯ ಆರಂಭದಲ್ಲೇ ತಿಳಿಸಿದೆ.

ಇದಲ್ಲದೆ ಗಾಯತ್ರಿಯಲ್ಲಿ ಹೇಳಿರುವ ಗುಣಗಳು ವಿಷ್ಣುವಿನಲ್ಲೇ ಇದೆ. ರುದ್ರಾದಿಗಳಲ್ಲಿ ಇಲ್ಲ. ಆದ್ದರಿಂದ ಅವರಾರೂ ಗಾಯತ್ರೀವಾಚ್ಯರಲ್ಲ ಎಂದೂ ಭಾಗವತ ತಿಳಿಸುತ್ತದೆ. ಭರ್ಗಃ ಎಂಬ ಗಾಯತ್ರಿಯ ಪದ ರಕ್ಷಣಕರ್ತೃ ಎಂಬ ಅರ್ಥವನ್ನು ಹೇಳಿದೆ. ವೃಕಾಸುರನಿಂದ ಬೆಂಬೆತ್ತಲ್ಪಟ್ಟ ರುದ್ರನನ್ನು ರಕ್ಷಿಸಿದವ ಶ್ರೀಹರಿ. ಅಂಬರೀಷ ಪ್ರಸಂಗದಲ್ಲಿ ವಿಷ್ಣುಚಕ್ರದಿಂದ ಬೆನ್ನಟ್ಟಲ್ಪಟ್ಟ ದೂರ್ವಾಸ ಋಷಿಗಳಿಗೆ ಬ್ರಹ್ಮರುದ್ರರಾರೂ ರಕ್ಷಣೆ ನೀಡಲಿಲ್ಲ. ಕೊನೆಗೆ ವಿಷ್ಣುಭಕ್ತನಾದ ಅಂಬರೀಷನ ಪ್ರಾರ್ಥನೆಯಿಂದ ಚಕ್ರವೇ ಅವನನ್ನು ರಕ್ಷಿಸಿತು. ಅಶ್ವತ್ಥಾಮ (ರುದ್ರ) ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ಸಾಯಲಿದ್ದ ಪರೀಕ್ಷಿತನನ್ನು ಗರ್ಭದಲ್ಲಿ ರಕ್ಷಣೆಮಾಡಿದವನು ಶ್ರೀಕೃಷ್ಣ. ಹೀಗೆ ಅನೇಕ ದೃಷ್ಟಾಂತಗಳಿಂದ ಹರಿಗೆ ಈ ಗುಣಗಳು ನಿರ್ಣೈಸಿಲ್ಪಟ್ಟಿವೆ. ಆದ್ದರಿಂದ ಅವನೇ ಗಾಯತ್ರೀಪ್ರತಿಪಾದ್ಯನೆಂದು ಭಾಗವತ ತಿಳಿಸಿದೆ. ಗಾಯತ್ರೀಮಂತ್ರವನ್ನು ಬಳಸಿ ಅಶ್ವತ್ಥಾಮ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ ಇತಿಹಾಸ ಭಾಗವತದಲ್ಲಿದೆ. ರುದ್ರದೇವ ಗಾಯತ್ರೀಪ್ರತಿಪಾದ್ಯನಾದರೆ ಇದು ಸಾಧ್ಯವಿಲ್ಲ. ಆದ್ದರಿಂದ ರುದ್ರ ಗಾಯತ್ರೀವಾಚ್ಯನಲ್ಲ ಎಂದು ಭಾಗವತದಿಂದ ತಿಳಿಯುತ್ತದೆ.

ಭಾಗವತದ ಮುಖ್ಯ ಕಥಾಭಾಗಗಳಲ್ಲಿ 'ವೃತ್ರಾಸುರ ವಧೆ' ಮುಖ್ಯವಾದುದು ಎಂದು ವ್ಯಾಸರೇ ತಿಳಿಸಿದ್ದಾರೆ. ವೃತ್ರಾಸುರ ವಧೆಗೆ ವಿಶ್ವರೂಪಾಚಾರ್ಯರು ಇಂದ್ರನಿಗೆ ನೀಡಿದ ಕವಚಮಂತ್ರ ನಾರಾಯಣವರ್ಮ. ಅದರಲ್ಲಿ ಭಗವಂತನ ನಾನಾ ರೂಪಗಳಿಂದ ಎಲ್ಲೆಡೆ ರಕ್ಷಣೆಯನ್ನು ಪ್ರಾರ್ಥಿಸಲಾಗಿದೆ. "ಹಯಶೀರ್ಷವಿದ್ಯೆ" ಎಂದು ಮಹತ್ವವನ್ನು ಪಡೆದ ಈ ಮಂತ್ರ ಗಾಯತ್ರಿಯ ಭರ್ಗ ಶಬ್ದದ ವಿವರಣೆ. ಹೀಗೆ ಅನೇಕ ವಿಧದಿಂದ ಗಾಯತ್ರಿಯ ಅರ್ಥವನ್ನು ದೃಷ್ಟಾಂತಸಹಿತ ವಿವರಿಸಿರುವುದರಿಂದ ಭಾಗವತ ಗಾಯತ್ರೀಭಾಷ್ಯ. ಆದುದರಿಂದಲೇ ಮೊದಲ ಪದ್ಯದಲ್ಲೇ ವ್ಯಾಸರು ಗಾಯತ್ರಿಯ ಶಬ್ದವನ್ನೇ ಬಳಸಿದ್ದಾರೆ –'ಸತ್ಯಂ ಪರಂ ಧೀಮಹಿ'.

*

# ಗಾಯತ್ರಿಯಲ್ಲಿ ಭಾಗವತದ ಛಾಯೆ

ಶ್ರೀ ವಿದ್ಯಾಧೀಶತೀರ್ಥರು

"ಗಾಯತ್ರೀಭಾಷ್ಯರೂಪೋಽಸೌ" ಎಂದು ಗಾರುಡ ಸಾರುತ್ತಿರುವಂತೆ ಹನ್ನೆರಡು ಸ್ಕಂಧಗಳ ಭಾಗವತ ಗಾಯತ್ರೀಮಂತ್ರದ ಭಾಷ್ಯರೂಪದಲ್ಲಿದೆ. ಇದನ್ನು ಬೇರೆ ಬೇರೆ ರೀತಿಯಿಂದ ಪರಿಶೀಲಿಸಬಹುದು.

ವಿಶ್ವಾಮಿತ್ರಗಾಯತ್ರಿಯ ಹನ್ನೆರಡು ಶಬ್ದಗಳು ಭಾಗವತದ ಹನ್ನೆರಡು ಸ್ಕಂಧಗಳ ಪ್ರಮುಖ ಪ್ರಮೇಯಗಳನ್ನು ಸೂಚಿಸುವ ಮೂಲಕ ಭಾಷ್ಯರೂಪ ಎನ್ನಬಹುದು.

ಗಾಯತ್ರಿಯ ಪ್ರಣವ ಹಾಗೂ ವ್ಯಾಹೃತಿಗಳನ್ನು (ಮೂರು ವ್ಯಾಹೃತಿಗಳನ್ನು ಒಂದೆಂದು ಪರಿಗಣಿಸಿ) ಸೇರಿಸಿಕೊಂಡಾಗ ಆಗುವ ಹನ್ನೆರಡು ಶಬ್ದಗಳು ಅನುಕ್ರಮವಾಗಿ ಭಾಗವತದ ಹನ್ನೆರಡು ಸ್ಕಂಧಗಳನ್ನು ತಿಳಿಸಿದೆ.

'ಓಂ' 'ಪ್ರಥಮಸ್ಕಂಧಃ' ವಿಶ್ವಾಮಿತ್ರಗಾಯತ್ರಿಯ ಮೊದಲ ಘಟಕ ಓಂ. ಅವತೀತಿ ಓಂ ಎಂದಿಟ್ಟುಕೊಂಡಾಗ ಓಂಕಾರವು ಭಗವಂತನ ಮೂಲಕ ನಡೆಯುವ ರಕ್ಷಣೆಯನ್ನು ತಿಳಿಸುತ್ತದೆ. ಭಾಗವತದ ಪ್ರಥಮ ಸ್ಕಂಧದಲ್ಲಿ ಅಶ್ವತ್ಥಾಮಾಚಾರ್ಯರ ಬ್ರಹ್ಮಶಿರೋಽಸ್ತ್ರದಿಂದ ಪರೀಕ್ಷಿತನಿಗೆ ರಕ್ಷಣೆ ನೀಡಿರುವಂತಹದು, ಶುಕಾಚಾರ್ಯರ ಮೂಲಕ ಭಾಗವತೋಪದೇಶದ ಉಪಕ್ರಮದ ಮೂಲಕ ಆಧ್ಯಾತ್ಮಿಕವಾಗಿ ಪರೀಕ್ಷಿತನ ರಕ್ಷಣೆಗೆ ಬೇಕಾದ ವ್ಯವಸ್ಥೆಯನ್ನು ಒದಗಿಸಿದುದು ಪ್ರಮುಖ ಘಟ್ಟಗಳೆನಿಸಿದ್ದು ಅವುಗಳಿಂದ ಭಗವಂತನು ತನ್ನ ಭಕ್ತರನ್ನು ಐಹಿಕವಾಗಿಯೂ ಪಾರತ್ರಿಕವಾಗಿಯೂ ಹೇಗೆ ರಕ್ಷಿಸುವನೆಂದು ತಿಳಿದುಬರುವುದು.

'ಭೂರ್ಭುವಃಸ್ವಃ' 'ದ್ವಿತೀಯಸ್ಕಂಧಃ' ಚತುರ್ಮುಖ ನಾರದರ ಸಂವಾದವನ್ನೊಳಗೊಂಡ ಎರಡನೆಯ ಸ್ಕಂಧದಲ್ಲಿ ಲೋಕಾದಿ ಸೃಷ್ಟಿಯ ಬಗ್ಗೆ ವಿಶೇಷ ಮಾಹಿತಿ ದೊರಕುತ್ತಿದ್ದು, ವ್ಯಾಹೃತಿ ರೂಪವಾದ 'ಭೂರ್ಭುವಃಸ್ವಃ' ಭೂರಾದಿ ಲೋಕಗಳ ಸೃಷ್ಟಿಯನ್ನು ಸೂಚಿಸುವುದು.

'ತತ್' 'ತೃತೀಯಸ್ಕಂಧಃ' ಮೂರು ಬಗೆಯ ವ್ಯಾಪ್ತಿಯನ್ನು ತಿಳಿಸುತ್ತಿರುವ ತತ್ ಶಬ್ದ ಭಗವಂತನ ಕಾಲಾತೀತತ್ವರೂಪವಾದ ಕಾಲತಃ ವ್ಯಾಪ್ತಿ, ಕಪಿಲ ವಾಸುದೇವನ ಉಪದೇಶದಲ್ಲಿ ಬರುವ ಗುಣತಃ ವ್ಯಾಪ್ತಿಯನ್ನು ಸೂಚಿಸುತ್ತದೆ. ಅಲ್ಲದೆ ಸ್ವಾಯಂಭುವ ಮನು ಹಾಗೂ ಶತರೂಪಾ ಇವರ ಮೂಲಕ ನಡೆಯುವ ಸೃಷ್ಟಿವಿಸ್ತಾರವನ್ನು ಸೂಚಿಸುವುದು.

'ಸವಿತುಃ' 'ಚತುರ್ಥಸ್ಕಂಧಃ' ನವ ಅಂದರೆ ಯಜ್ಞ. ಪ್ರಶಸ್ತವಾದ ಯಜ್ಞವುಳ್ಳವನನ್ನಾಗಿ ವಿಸ್ತಾರಗೊಳಿಸಿರುವುದನ್ನು ಸವಿತಾ ಶಬ್ದವು ಸೂಚಿಸುವುದು. ಮೊದಲು ಭಂಗಕ್ಕೊಳಗಾದರೂ ಬಳಿಕ ಯಜ್ಞೇಶನ ಮೂಲಕ ಯಶಸ್ವಿಯಾಗಿ ನಡೆದ ದಕ್ಷನ ಯಜ್ಞ, ನಾರದರ ಪುರಂಜನೋಪಾಖ್ಯಾನದ ಉಪದೇಶದ ಬಳಿಕ ಯಶಸ್ವಿಯಾಗಿ ನಡೆದ ಪ್ರಾಚೀನಬರ್ಹಿ ರಾಜನ ಯಜ್ಞ ಇವುಗಳ ಸೂಚನೆ ಚತುರ್ಥಸ್ಕಂಧದಲ್ಲಿ ದೊರಕಿದೆ.

'ವರೇಣ್ಯಂ' 'ಪಂಚಮಸ್ಕಂಧಃ' ಋಷಭ ಅಂದರೆ ಶ್ರೇಷ್ಠ. ವರ ಶಬ್ದಕ್ಕೂ ಅದೇ ಅರ್ಥ. ಆದುದರಿಂದ ಪ್ರಿಯವ್ರತನ ವಂಶದಲ್ಲಿ ಬರುವ ಋಷಭನಾಮಕ ಭಗವದವತಾರದ ಸೂಚನೆ ವರ ಶಬ್ದದಿಂದ ದೊರೆತರೆ, ಜಿಂಕೆ ಜನ್ಮ ತಾಳಿ ಮತ್ತೆ ಉದ್ಧಾರಹೊಂದಿದ ಋಷಭಪುತ್ರ ಜಡಭರತನ ಸೂಚನೆ 'ಏಣ್ಯ' ಶಬ್ದದಿಂದ ದೊರಕುವುದು.

'ಭರ್ಗಃ' 'ಷಷ್ಠಸ್ಕಂಧಃ' 'ಭರ್ಜನಾತ್ ಭರ್ಗ ಉಚ್ಯತೇ' ಎಂದು ಭರ್ಗ ಶಬ್ದಕ್ಕೆ ಭಕ್ತರ ಪಾಪವನ್ನು ಸುಟ್ಟುಹಾಕುವವನೆಂದು ಅರ್ಥ. ಅಜಾಮಿಳನ ಅಖ್ಯಾನ ಭಗವಂತ ತನ್ನ ನಾಮಸ್ಮರಣೆ ಮಾಡಿದವರ ಪಾಪವನ್ನು ಹೇಗೆ ಪರಿಹರಿಸುತ್ತಾನೆಂಬುದನ್ನು ತಿಳಿಸುತ್ತಿದ್ದರೆ, ವೃತ್ರಾಸುರನ ಆಖ್ಯಾನ ದೇವೇಂದ್ರ ನರಸಿಂಹನ ಸ್ಮರಣೆಯಿಂದ ಬ್ರಹ್ಮಹತ್ಯೆಯಿಂದ ಪಾರಾದ ಬಗೆಯನ್ನು ತಿಳಿಸಿದೆ.

'ದೇವಸ್ಯ' 'ಸಪ್ತಮಸ್ಕಂಧಃ' ಕ್ರೀಡಾರೂಪದಿಂದ ತನ್ನ ಚಟುವಟಿಕೆಗಳನ್ನು ನಡೆಸುವವನು ಎಂದು ದೇವ ಶಬ್ದದ ಅರ್ಥ. ಭಗವಂತನು ನರಸಿಂಹನಾಗಿ ಸ್ತಂಭದಿಂದ ಅವತರಿಸಿ ಅನಾಯಾಸವಾಗಿ ಹಿರಣ್ಯಕಶಿಪುವನ್ನು ಸಂಹರಿಸಿ ಭಕ್ತ ಪ್ರಹ್ಲಾದನನ್ನು ಅನುಗ್ರಹಿಸಿದ್ದು ಭಗವಂತನ ಕ್ರೀಡಾರೂಪದ ಚಟುವಟಿಕೆಗಳಿಗೆ ಸಾಕ್ಷಿಗಳಂತಿವೆ.

'ಧೀಮಹಿ' 'ಅಷ್ಟಮಸ್ಕಂಧಃ' ಸಮುದ್ರಮಥನವೇ ಎಂಟನೆಯ ಸ್ಕಂಧದ ಪ್ರಮುಖ ಘಟನೆಯಾಗಿದ್ದು ಇದು ಧೀಮಹಿ ಶಬ್ದದ ಅರ್ಥವಾದ ಧ್ಯಾನರೂಪವಾದ ಮಾನಸಿಕ ಮಥನದಿಂದ ಸೂಚಿತವಾಗುವುದು. ಸಮುದ್ರಮಥನದಿಂದ ದೊರೆತ ಅಮೃತದಿಂದ ದೇವತೆಗಳು ಅಮರರಾಗಿ ಪುಷ್ಟರಾದ ಸಂಗತಿಯು ಧೀಮಹಿ ಶಬ್ದದಿಂದ ಸೂಚಿಸಲ್ಪಡುವುದು. ಪೂಜ್ಯರಾದ ದೇವತೆಗಳು 'ಮಹಿ' ಶಬ್ದದಿಂದಲು ಅವರ ಪುಷ್ಟಿಯು ಪುಷ್ಟ್ಯರ್ಥಕ 'ಧಿ' ಶಬ್ದದಿಂದಲೂ ಸೂಚಿತವಾಗಬಲ್ಲದು.

'ಧಿಯಃ' 'ನವಮಸ್ಕಂಧಃ' ಸೂರ್ಯವಂಶದ ಚಂದ್ರವಂಶದ ರಾಜರ ಚರಿತೆ ವಿಶೇಷವಾಗಿ ನವಮಸ್ಕಂಧ ಪ್ರತಿಪಾದ್ಯ. ಬೆಳಕಿನ ಮೂಲಕ ಬುದ್ಧಿಗೆ ಪ್ರಚೋದಕರಾದ ಸೂರ್ಯ-ಚಂದ್ರರ ಸೂಚನೆ ಧಿಯಃ ಶಬ್ದದಿಂದ ದೊರೆತಿದೆ. ಭಗವದ್ಭಕ್ತರಾಗಿದ್ದು ಒಳ್ಳೆಯ ಬುದ್ಧಿಯ ರಾಜರ ಚರಿತೆ ನಿರೂಪಿತವಾಗಿದ್ದು, ಅಂತಹ ರಾಜರ ಸಚ್ಚಾರಿತ್ರ್ಯ ಧಿಯಃ ಶಬ್ದದಿಂದ ಸೂಚಿತವಾಗಿದೆ. ಸಜ್ಜನರ

ಪ್ರೋಷಣೆಗಾಗಿ ಅವರ ಶತ್ರುಗಳ ವಿರುದ್ಧ ಕಾದಾಡುವುದನ್ನು ಧಿಯಃ ಶಬ್ದವು ಸೂಚಿಸಿಕೊಡಬಲ್ಲುದು.

'ಯಃ' 'ದಶಮಸ್ಕಂಧಃ' ಭಾಗವತದ ಹತ್ತನೆಯ ಸ್ಕಂಧದಲ್ಲಿ ಕೃಷ್ಣನ ಚರಿತೆ ಬರುವುದು. ಕೃಷ್ಣಾವತಾರ ಬಲಕಾರ್ಯಕ್ಕಾಗಿ ಸಂಭವಿಸಿದ್ದರೂ ಭಗವದ್ಗೀತೆ, ಉದ್ಧವಗೀತೆ ಇವುಗಳ ಉಪದೇಶದಿಂದ ಜ್ಞಾನಕಾರ್ಯವು ಈ ಅವತಾರದಿಂದ ನಡೆದಿದೆ. ಜ್ಞಾನವಾಚಕ ಯಃ ಶಬ್ದದಿಂದ ಹೀಗೆ ಜ್ಞಾನವನ್ನು ನೀಡಿದ ಕೃಷ್ಣನನ್ನು ಸೂಚಿಸಿದೆ. ಅಲ್ಲದೆ ಕೃಷ್ಣನು ಅವತಾರದ ಕ್ಷಣದಿಂದ ಒಂದೆಡೆಯಿಂದ ಮತ್ತೊಂದೆಡೆಗೆ ಸಂಚರಿಸುತ್ತ ತನ್ನ ಅವತಾರಕಾರ್ಯಗಳನ್ನು ಪೂರೈಸಿರುವನು. ಅವನ ಈ ಸಂಚಾರವನ್ನೂ ಯಕಾರವು ಸೂಚಿಸಿಕೊಡುವುದು.

'ನಃ' 'ಏಕಾದಶಸ್ಕಂಧಃ' ಹನ್ನೊಂದನೆಯ ಸ್ಕಂಧದಲ್ಲಿ ಮುಖ್ಯವಾಗಿ ಕೃಷ್ಣನ ಉಪದೇಶ ಹಬ್ಬಿದೆ. ಉದ್ಧವಗೀತೆ ಮುಖ್ಯವಾಗಿ ಸಾಧಕರಾದ ನಮಗಾಗಿ ಇರುವುದಾದ್ದರಿಂದ ನಃ ಎಂಬ ಶಬ್ದದಿಂದ ಅದು ಸೂಚಿತವಾಗಬಲ್ಲದು. 'ಧಿಯೋ ಯೋಽನಃ' ಎಂದು 'ಅನಃ' ಎಂದು ಪದವಿಭಾಗಮಾಡಿಕೊಂಡರೆ ನಮ್ಮ ಚೇಷ್ಟೆಗಳನ್ನು ನಡೆಸುವ ಪ್ರಾಣದೇವರನ್ನು ತಿಳಿಸುವ ಆ ಶಬ್ದ ಉದ್ಧವಗೀತೆ ಯಲ್ಲಿನ 'ವಾಯೌ ಮುಖ್ಯಧಿಯಾ' ಎಂದು ವಾಯುದೇವನಿಗೆ ಮುಖ್ಯ ಪ್ರತೀಕತ್ವವನ್ನು ಸಾರುವ ಸಂಗತಿ ಸೂಚಿತ.

'ಪ್ರಚೋದಯಾತ್' 'ದ್ವಾದಶಸ್ಕಂಧಃ' ಹನ್ನೆರಡನೆಯ ಸ್ಕಂಧದಲ್ಲಿ ಭಗವಂತನ ಪ್ರೇರಣೆಗನುಗುಣವಾಗಿ ಕಲಿಕಾಲ ಬರುವುದು, ಅದರಲ್ಲಿ ಧರ್ಮ ಗ್ಲಾನಿ ಸಂಭವಿಸುವುದು, ಕೊನೆಗೆ ಕಲ್ಕಿಯಾಗಿ ಅವತರಿಸುವ ಭಗವಂತ ದೇವದತ್ತ ಎಂಬ ಕುದುರೆಯನ್ನು ಪ್ರೇರಿಸಿ ಅದರ ಮೂಲಕ ಸಂಚರಿಸುತ್ತ ದಸ್ಯುಗಳನ್ನೆಲ್ಲ ಸಂಹರಿಸುವುದು. ಹೀಗೆ ಭವಿಷ್ಯದ ನಿರೂಪಣೆ ಬಂದಿದೆ. ಭಗವಂತನ ಪ್ರೇರಣೆ ಗನುಗುಣವಾಗಿ ತಕ್ಷಕ ಬಂದು ಪರೀಕ್ಷಿತನನ್ನು ಕಚ್ಚುವುದು..... ಹೀಗೆ ಹೆಜ್ಜೆಹೆಜ್ಜೆಗೆ ಭಗವಂತನ ಪ್ರೇರಣೆಯನ್ನು ಎತ್ತಿತೋರಿಸುವ ಘಟನೆಗಳು ಈ ಸ್ಕಂಧದಲ್ಲಿ ಉಲ್ಲೇಖಗೊಂಡಿದ್ದು ಗಾಯತ್ರಿಯ ಪ್ರಚೋದಯಾತ್ ಶಬ್ದದಿಂದ ಅವು ಸೂಚಿತ ವಾಗಬಲ್ಲದು.

ಹೀಗೆ ಗಾಯತ್ರಿಯ ಹನ್ನೆರಡು ಶಬ್ದಗಳಿಂದ ಭಾಗವತದ ಹನ್ನೆರಡು ಸ್ಕಂಧಗಳ ಪ್ರಮುಖ ಪ್ರಮೇಯಗಳನ್ನು ಮೆಲುಕುಹಾಕಬಹುದಾಗಿದೆ.

*

ಋಗ್ವೇದದಲ್ಲಿ ಗಾಯತ್ರೀಮಂತ್ರ (೩-೬೨-೧೦)

ಸಾಮವೇದದಲ್ಲಿ ಗಾಯತ್ರೀಮಂತ್ರ (೧೪೬೨)

# ಮಹಾನಾರಾಯಣೋಪನಿಷತ್ತಿನಲ್ಲಿ ಗಾಯತ್ರಿಯ ಉಪಾಸನೆ

ಬನ್ನಂಜೆ ಗೋವಿಂದಾಚಾರ್ಯ

೬೪ ಅನುವಾಕಗಳನ್ನೊಳಗೊಂಡ ಮಹಾನಾರಾಯಣೋಪನಿಷತ್ತನ್ನು ಸಾಯಣ ಹಾಗೂ ಭಾಸ್ಕರ ಆಚಾರ್ಯರು ವ್ಯಾಖ್ಯಾನಿಸಿರುವರು. ಆದರೆ ೮೦ ಅನುವಾಕಗಳ ಮಹಾನಾರಾಯಣೋಪನಿಷತ್ತಿನಲ್ಲಿ ಬಂದಿರುವ ಅನೇಕ ಮಂತ್ರಗಳು ಪ್ರಚಲಿತ ಗಳಾಗಿರುವುದರಿಂದ ಆ ಪಾಠಕ್ಕನುಗುಣವಾಗಿ ಗಾಯತ್ರಿಯ ಮಾಹಿತಿಯನ್ನು ಪರಿಶೀಲಿಸೋಣ.

## ಗಾಯತ್ರೀಜಪದ ಪೂರ್ವಸಿದ್ಧತೆ:

ಗಾಯತ್ರೀಜಪದ ಪೂರ್ವಸಿದ್ಧತೆ, ಗಾಯತ್ರೀಮಂತ್ರಸ್ವರೂಪ ಹಾಗೂ ಗಾಯತ್ರಿಯ ವಿಸರ್ಜನೆ ಇವುಗಳಿಗೆ ಸಂಬಂಧಿಸಿದಂತೆ ಗಾಯತ್ರಿಯ ಕುರಿತು ಹೆಚ್ಚಿನ ಮಾಹಿತಿಗಳನ್ನು ನಾಲ್ಕು ಅನುವಾಕಗಳಲ್ಲಿ (೩೩–೩೬) ನೀಡುತ್ತಿರುವ ಉಪನಿಷತ್ತು ಮೊದಲು ಗಾಯತ್ರೀಜಪದ ಪೂರ್ವಸಿದ್ಧತೆಯನ್ನು ತಿಳಿಸುತ್ತ ಗಾಯತ್ರಿಯಲ್ಲಿ ಅದರ ಪ್ರಾಣಾಯಾಮದಲ್ಲಿ ಘಟಕವಾಗಿರುವ ಪ್ರಣವದ ಬಗ್ಗೆ ಮಾಹಿತಿಯನ್ನು ನೀಡುತ್ತಿದೆ.

ಓಮಿತ್ಯೇಕಾಕ್ಷರಂ ಬ್ರಹ್ಮ ।
ಅಗ್ನಿರ್ದೇವತಾ ।
ಬ್ರಹ್ಮ ಇತ್ಯಾರ್ಷಮ್ ।
ಗಾಯತ್ರಂ ಛಂದಮ್ ।
ಪರಮಾತ್ಮಂ ಸರೂಪಮ್ ।
ಸಾಯುಜ್ಯಂ ವಿನಿಯೋಗಮ್ ।

ಈ ಸಾಲುಗಳು ಉಪನಿಷದ್‌ಘಟಕ ಹೌದೋ ಅಲ್ಲವೋ ಎಂದು ಸಂಶಯ ವನ್ನು ಉಂಟುಮಾಡುವಂತಿದೆಯಾದರೂ ವೈದಿಕಪರಂಪರೆಯಲ್ಲಿ ಈ ಮಂತ್ರದ ಬಳಕೆ ಇರುವುದರಿಂದ ಸದ್ಯಕ್ಕೆ ಇದು ಉಪನಿಷತ್ತಿಗೆ ಸೇರಿದ್ದೆಂದು ಒಪ್ಪಿಕೊಂಡು ವ್ಯಾಖ್ಯಾನಿಸಲಾಗುವುದು.

'ಓಂ' ಎನ್ನುವುದು ಏಕಾಕ್ಷರ ವೇದಾದಿಗಳಿಗೆ ಮೂಲಭೂತವಾದ ಮುಖ್ಯ ಅಕ್ಷರ. 'ಬ್ರಹ್ಮ' ಎನಿಸುವ ವೇದಕ್ಕೂ ಮೂಲಭೂತವಾದುದರಿಂದ ಮೂರು ಅಕ್ಷರಗಳ ಶಬ್ದ ಬ್ರಹ್ಮ ಮುಖ್ಯವಾಗಿ ಅಕ್ಷರ ಎನಿಸುವ ಓಂ ಪ್ರತಿಪಾದ್ಯ ಗುಣಪೂರ್ಣನಾದ ಪರಮಾತ್ಮ ಎಂದೂ ಅರ್ಥೈಸಬಹುದು.

ಸ್ವತಃ ಚಲನರಹಿತವಾಗಿದ್ದು ಅಗ ಎನಿಸುವ ಜಗತ್ತಿಗೆ ಚಾಲನೆಕೊಡುವ 'ಅಗ್ನಿ' ಎನಿಸುವ ಅಗ್ನಿನಾರಾಯಣನೇ ದೇವತೆ –ಪ್ರತಿಪಾದ್ಯ.

**ಹಯಗ್ರೀವಾದಿಮಾ ವಿದ್ಯಾಃ ಶ್ವಸಿತತ್ವೇನ ನಿಃಸೃತಾಃ**

ಎಂದಿರುವಂತೆ ಎಲ್ಲ ವಿದ್ಯೆಗಳಿಗೆ ಹೇಗೋ ಹಾಗೆಯೇ ವಿದ್ಯೆಗಳಿಗೆಲ್ಲ ಮೂಲವಾದ ಓಂಕಾರಕ್ಕೂ ಹಯಗ್ರೀವರೂಪೀ ಪರಮಾತ್ಮನೇ ಮೂಲ ಋಷಿ. ಅದನ್ನೇ 'ಬ್ರಹ್ಮ ಇತ್ಯಾರ್ಷಂ' ಎನ್ನಲಾಗಿದೆ.

ಓಂಕಾರಕ್ಕೆ ಗಾಯತ್ರಿ ಛಂದಸ್ಸು. ಏಕಾಕ್ಷರಮಂತ್ರವನ್ನು ದೈವೀಗಾಯತ್ರೀ ಎಂದೂ ಕರೆಯುವುದಿದೆ. ಮೇಲ್ನೋಟಕ್ಕೆ ಒಂದೇ ಅಕ್ಷರವಾದರೂ ಒಳಗೆ ಗಾಯತ್ರೀ ಛಂದಸ್ಸು ಎನಿಸಲು ಬೇಕಾದ ಎಂಟು ಅಕ್ಷರಗಳು ಇವೆ. ಹೀಗೆ ದಿವ್ಯದೃಷ್ಟಿಗನುಗುಣವಾಗಿ ಗಾಯತ್ರಿ ಆಗಿರುವುದರಿಂದಲೂ ದೈವೀಗಾಯತ್ರೀ ಛಂದಸ್ಸು. ಛಾದಯತೀತಿ ಛಂದಃ ಎನಿಸುವಂತೆ 'ಛಂದಂ' ಎಂದೂ ಎನಿಸ ಬಹುದಾಗಿದೆ. ಭಗವಂತನನ್ನು ಮುಚ್ಚಿಡುವ ಸಂಪುಟವಾಗಿರುವುದರಿಂದ ವೇದಕ್ಕೆ ಛಂದಸ್ಸುಗಳಿಗೆ 'ಛಂದಸ್' ಎಂಬ ಹೆಸರು. ಓಂಕಾರಕ್ಕೆ ಗಾಯತ್ರೀ ಎಂಬುದೇ ಸಂಪುಟ –ಕರಡಿಕೆ. ಗಾಯತ್ರೀಛಂದೋಭಿಮಾನಿನಿಯರಾದ ಲಕ್ಷ್ಮಿ, ಸರಸ್ವತಿ, ಭಾರತಿ, ಗರುಡ ಹಾಗೂ ಸ್ವಾಹಾ –ಈ ದೇವತೆಗಳ ವಶದಲ್ಲಿ ಆ ಕರಡಿಕೆ ಇದೆ. ಅವರು ಯೋಗ್ಯ ಅಧಿಕಾರಿಗಳ ಎದುರು ಗಾಯತ್ರೀಕರಡಿಕೆಯನ್ನು ತೆರೆದು ಅದರೊಳಗೆ ಅವಿತಿರುವ ಓಂಕಾರಪ್ರತಿಪಾದ್ಯ ನಾರಾಯಣನನ್ನು ಪರಿಚಯಿಸಿ ಕೊಡುತ್ತಾರೆ. 'ಗಾಯತ್ರಂ ಛಂದಂ' ಎಂಬ ಮಾತಿನಲ್ಲಿ ಈ ಆಶಯ ತುಂಬಿದೆ.

ಓಂಕಾರವನ್ನು ಯಾವ ಪ್ರಯೋಜನಕ್ಕಾಗಿ ವಿನಿಯೋಗಿಸಲಾಗುವುದೆಂದರೆ 'ಪರಮಾತ್ಮಂ ಸರೂಪಂ ಸಾಯುಜ್ಯಂ ವಿನಿಯೋಗಮ್'.

ವಿನಿಯೋಗಮ್ ಎಂದರೆ ವಿನಿಯೋಜಕಮ್ ಎಂದು ಅರ್ಥ. (ವಿನಿಯುಜ್ಯತೇ ಅನೇನ ಇತಿ) ಪರಮಾತ್ಮಂ ಎಂಬಲ್ಲಿ ಮನಿನ್ ಪ್ರತ್ಯಯಾಂತವಾದ ಆತ್ಮನ್ ಶಬ್ದ ಅಲ್ಲ. ಆತತ ಹಾಗೂ ಎಲ್ಲವನ್ನೂ ಬಲ್ಲವ (ಸರ್ವಂ ಮಾತೀತಿ) ಎಂಬ ಅರ್ಥದಲ್ಲಿ ಅಕಾರಾಂತ ಶಬ್ದ. ಪರಮಾತ್ಮಂ ಸರೂಪಂ ಅನ್ನುವುದು ಸಮಸ್ತಪದ ಎಂದೂ ಇಟ್ಟುಕೊಳ್ಳಬಹುದು. 'ಬಿಂದುರಪ್ಯವಧಾರಣೇ' ಎಂದು ತಿಳಿಸಿರುವಂತೆ ಪರಮಾತ್ಮನ ಸರೂಪತ್ವರೂಪವಾದ ಸಾಯುಜ್ಯಮುಕ್ತಿಯನ್ನು ಪಡೆಯುವುದೇ ಓಂಕಾರ ಮತ್ತು ಗಾಯತ್ರೀಜಪದ ಅನುಷ್ಠಾನದ ಫಲ ಎಂದು ಅವಧಾರಣೆ ಯನ್ನು ತಿಳಿಸುವುದಕ್ಕಾಗಿಯೆ ಪರಮಾತ್ಮಂ ಎಂದು ಬಿಂದು ಹಾಕಲಾಗಿದೆ.

**ಗಾಯತ್ರಿಯ ಆವಾಹನೆ:**

ಗಾಯತ್ರೀಮಾತೆಯನ್ನು ಬರಮಾಡಿಕೊಳ್ಳುವುದು.

**ಆಯಾತು ವರದಾ ದೇವಿ ಅಕ್ಷರಂ ಬ್ರಹ್ಮ ಸಮ್ಮಿತಮ್ ।**
**ಗಾಯತ್ರೀ(ತ್ರೀಂ) ಛಂದಸಾಂ ಮಾತೇದಂ ಬ್ರಹ್ಮ ಜುಷಸ್ವ ಮೇ ॥**

ಉಪನಿಷತ್ತಿನ ಚಿಕ್ಕ ಪಾಠದ ಪ್ರಕಾರ ಜುಷಸ್ವ ನಃ ಎಂದಿದೆ.

ಭಕ್ತರ ಅಭೀಷ್ಟಗಳನ್ನು ಪೂರೈಸುವ ನನ್ನ ಹೃದಯಮಂಟಪದೆಡೆಗೆ ಬರಲಿ. ಈ ದೇವಿ ಮತ್ತಾರೂ ಅಲ್ಲ 'ಸ್ತ್ರೀರೂಪೋ ಹಯಶೀರ್ಷವಾನ್' ಎಂದು ಶ್ರೀಮದಾಚಾರ್ಯರು ಛಾಂದೋಗ್ಯಭಾಷ್ಯದಲ್ಲಿ ಗಾಯತ್ರಿ ಪ್ರತಿಪಾದ್ಯವಾಗಿ ಹೇಳಿರುವ ಸ್ತ್ರೀರೂಪದ ಹಯಗ್ರೀವ. ಆದುದರಿಂದ ಗಾಯತ್ರೀವಾಚ್ಯವಾದ ಸ್ತ್ರೀರೂಪದ ಭಗವಂತನು ಬರಲಿ, ಗಾಯತ್ರಿಗೆ ಮುಖ್ಯಾಭಿಮಾನಿಯಾದ ಲಕ್ಷ್ಮೀ ಹಾಗೂ ಅಮುಖ್ಯಾಭಿಮಾನಿನಿಯರಾದ ಸರಸ್ವತಿಭಾರತಿಯರು ಬರಲಿ.

'ಯಾವದ್ ಬ್ರಹ್ಮ ವಿಷ್ಠಿತಂ ತಾವತೀ ವಾಕ್' ಎಂದಂತೆ ಪರಬ್ರಹ್ಮನಂತೆ ದೇಶತಃ ಕಾಲತಃ ವ್ಯಾಪ್ತವಾದ ಓಂಕಾರರೂಪವಾದ ಅಕ್ಷರವನ್ನು ನಾನು ಪಠಿಸಿದೆ. ಆ ಅಕ್ಷರದ ಮೂಲಕ ಶಾಸ್ತ್ರದಿಂದ ಚೆನ್ನಾಗಿ ಪ್ರತಿಪಾದಿಸಲ್ಪಟ್ಟ (ಸಮ್ಮಿತಂ) ನಾಶರಹಿತವಾದ, ಗುಣಪೂರ್ಣನಾದ ಬ್ರಹ್ಮನನ್ನು ಧ್ಯಾನಿಸಿದೆ. ಈ ಪಠನ ಮತ್ತು ಧ್ಯಾನದ ಅನುಗ್ರಹಕ್ಕಾಗಿ ಗಾಯತ್ರೀಪ್ರತಿಪಾದ್ಯ ಮತ್ತು ಅಭಿಮಾನಿನಿಯರು ಬರಲಿ.

## ಪಂಚರೂಪೋಪಾಸನೆ

ವೇದಮಂತ್ರಗಳಲ್ಲಿ ಹೆಚ್ಚಾಗಿ ನಾಲ್ಕೈದು ವಿಶೇಷಣಗಳಿದ್ದು ಭಗವಂತನ ವ್ಯೂಹರೂಪವನ್ನು ತಿಳಿಸಿಕೊಡುತ್ತವೆ. ಉದಾಹರಣೆಗೆ ಋಗ್ವೇದಸಂಹಿತೆಯ ಮೊದಲ ಮಂತ್ರ 'ಅಗ್ನಿಮೀಳೇ' ಎಂಬಲ್ಲಿ 'ಪುರೋಹಿತಂ, ಯಜ್ಞಸ್ಯ ದೇವಂ, ಋತ್ವಿಜಂ, ಹೋತಾರಂ, ರತ್ನಧಾತಮಂ' ಎಂಬ ಐದು ಪದಗಳು ಸ್ತುತ್ಯನಾದ ಅಗ್ನಿವಾಚ್ಯನ ವಾಸುದೇವಾದಿ ಐದು ರೂಪಗಳನ್ನು ತಿಳಿಸಿವೆ. ಅದರಂತೆ ಪ್ರಸಿದ್ಧವಾದ ಗಾಯತ್ರಿಯಲ್ಲೂ ಪಂಚಪದಗಳಿದ್ದು ಪಂಚರೂಪೋಪಾಸನೆಗೆ ಪುಷ್ಟಿ ದೊರೆತಿದೆ.

'ತತ್' ಶಬ್ದ ಸ್ಥಿತಿಪ್ರದನಾಗಿ ಎಲ್ಲೆಡೆ ಇರುವ ಅನಿರುದ್ಧನನ್ನು, 'ಸವಿತೃ' ಶಬ್ದ ಸೃಷ್ಟಿಕರ್ತೃ ಪ್ರದ್ಯುಮ್ನನನ್ನು, 'ವರೇಣ್ಯ' ಶಬ್ದ ವರಣೀಯನಾದ ನಾರಾಯಣನನ್ನು, 'ಭರ್ಗ' ಶಬ್ದ ಸಂಹಾರಕಾರಕ ಸಂಕರ್ಷಣನನ್ನು ಮತ್ತು 'ದೇವ' ಶಬ್ದ ಸ್ವರೂಪವನ್ನು ಬೆಳಗಿಸಿ ಮೋಕ್ಷವನ್ನೀಯುವ ವಾಸುದೇವನನ್ನು ತಿಳಿಸುತ್ತದೆ.

'ಸ್ಥಿತಿ' ನಿಯಮನವನ್ನೂ ಸೂಚಿಸಿದೆ. 'ಸೃಷ್ಟಿ' ಅಜ್ಞಾನದ ಜತೆಯಲ್ಲಿ ಬಂಧನವನ್ನೂ ತಿಳಿಸಿದೆ. 'ಭರ್ಗ' ಶಬ್ದ ಅಜ್ಞಾನದ ನಾಶದಲ್ಲಿ ಜ್ಞಾನಪ್ರದತ್ವವನ್ನೂ ಒಳಗೊಂಡಿದೆ. ಹೀಗೆ ಭಗವಂತನ ಅಷ್ಟಕರ್ತೃತ್ವವನ್ನೂ ಸಾಧಕನು ಇಲ್ಲಿ ಚಿಂತಿಸಬಹುದಾಗಿದೆ.

— *ಗೋವಿಂದದಾಸ*

ದೇವಿ ಎಂತಹವಳು? 'ಗಾಯತ್ರೀ ಛಂದಸಾಂ ಮಾತಾ'. ಈಗ ಮುದ್ರಿತ ಪಾಠದಲ್ಲಿ ಗಾಯತ್ರೀಂ ಎಂದಿರುವುದಾದರೂ ಹೆಚ್ಚಿನ ವ್ಯಾಖ್ಯಾನಕಾರರೆಲ್ಲ ಗಾಯತ್ರೀ ಎಂದೇ ಇಟ್ಟುಕೊಂಡಿರುವುದರಿಂದ ಮತ್ತೆ ಪ್ರಮಾದದಿಂದ ಅನುಸ್ವಾರ ಸೇರಿಕೊಂಡದ್ದೆಂದು ಭಾವಿಸಬಹುದು. ಒಂದುವೇಳೆ ಸ್ವಾಭಾವಿಕ ಪಾಠವೇ ಆಗಿದ್ದರೆ ಅವಧಾರಣಾರ್ಥಕ ಬಿಂದು ಎಂದಿಟ್ಟುಕೊಳ್ಳಬೇಕು.

ಗಾಯತ್ರಿಯಿಂದಲೇ ಪುರುಷಸೂಕ್ತ, ವೇದಾದಿಗಳ ಅಭಿವ್ಯಕ್ತಿ ಆಗಿರುವುದರಿಂದ ಗಾಯತ್ರಿಯು ಸಕಲವೇದಗಳಿಗೆ ತಾಯಿಯ ಸ್ಥಾನದಲ್ಲಿ ಇರುವಂತಹದು. ಗಾಯತ್ರೀಛಂದಸ್ಸಿಗೆ ಅಭಿಮಾನಿನಿಯರಾದ ಲಕ್ಷ್ಮಿ ಸರಸ್ವತಿ, ಭಾರತಿಯರು ಸಮಸ್ತವೇದಕ್ಕೆ ಮಾತೃಸ್ಥಾನೀಯರು. ಗಾಯತ್ರೀ ಎಂದರೆ ಭಗವಂತ ಎಂದಿಟ್ಟುಕೊಂಡಾಗ 'ನಾನ್ಯೋ ಮದ್ವೇದ ಕಶ್ಚನ' ಎಂದು ಉದ್ಧವಗೀತೆಯಲ್ಲಿ ತಿಳಿಸಿದಂತೆ ಸಕಲವೇದಗಳನ್ನೂ ತಾತ್ಪರ್ಯಪೂರ್ವಕವಾಗಿ ಚೆನ್ನಾಗಿ ಬಲ್ಲವ 'ಛಂದಸಾಂ ಮಾತಾ ಪ್ರಮಾತಾ' ಎಂದಿಟ್ಟುಕೊಳ್ಳಬೇಕು.

ಭಗವಂತನು ಮೊತ್ತಮೊದಲು ಚತುರ್ಮುಖನಿಗೆ ವೇದದ ಗಾನ ಮಾಡಿದವನು ಹಾಗೂ ರಕ್ಷಿಸುವವನು. (ಗಾಯತಿ ತ್ರಾಯತೇ ಚ ಗಾಯತ್ರೀ) ಮತ್ತು ಗಾಯತ್ರಿಯ ಮೂಲಕ ತನ್ನನ್ನು ಗಾನಮಾಡುವವರನ್ನು ಜ್ಞಾನಾದಿಗಳನ್ನು ನೀಡುತ್ತ ರಕ್ಷಿಸುವವನು (ಗಾಯಂತಂ ತ್ರಾಯತೇ) ಎಂಬ ದೃಷ್ಟಿಯಿಂದ ಮುಖ್ಯವಾಗಿ ಗಾಯತ್ರೀ ಎನಿಸುವನು.

ಇನ್ನು ಛಂದೋಭಿಮಾನಿಗಳಾದ ಲಕ್ಷ್ಮ್ಯಾದಿಗಳು ಯಾರು ಭಗವಂತನನ್ನು ಗಾಯತ್ರಿಯಿಂದ ಸ್ತುತಿಸುತ್ತಾರೋ ಅವರನ್ನು ರಕ್ಷಿಸುತ್ತಾರೆ (ಗಾಯಂತಂ ತ್ರಾಯಂತೇ) ಎಂಬ ಅಭಿಪ್ರಾಯದಲ್ಲಿ ಗಾಯತ್ರೀ ಎನಿಸುವರು. ಆದುದರಿಂದ ಗಾಯತ್ರೀ ಶಬ್ದದಿಂದ ಇವರನ್ನೆಲ್ಲ ಪರಾಮರ್ಶಿಸಿ ಪ್ರಾರ್ಥಿಸಲಾಗುವುದು.

'ಇದಂ ಬ್ರಹ್ಮ ಜುಷಸ್ವ ಮೇ' ನನ್ನ ಬಾಯಿಂದ ಹೊರಹೊಮ್ಮುತ್ತಿರುವ ಈ ಬ್ರಹ್ಮ ಅಂದರೆ ಪ್ರಣವ ಹಾಗೂ ಗಾಯತ್ರೀಮಂತ್ರ ಇದನ್ನು ಪ್ರೀತಿಯಿಂದ ಸ್ವೀಕರಿಸು (ಜುಷೀ ಪ್ರೀತಿಸೇವನಯೋಃ). ನಾನು ಜಪಿಸಿದರೂ ಅದನ್ನು ನೀನು ಸ್ವೀಕರಿಸಿದರಷ್ಟೇ ಅದು ಸಾರ್ಥಕವಾಗುವುದು. ಆದುದರಿಂದ ನಾನು ಜಪಿಸುವ ಗಾಯತ್ರಿಯನ್ನು ಪ್ರೀತಿಯಿಂದ ಸ್ವೀಕರಿಸಬೇಕು.

## ಮತ್ತೊಂದು ಪ್ರಾರ್ಥನೆ:

ಗಾಯತ್ರೀಮಂತ್ರಜಪದ ಅಧಿಕಾರಸಿದ್ಧಿಗೆ ಬೇಕಾದ ಶುದ್ಧಿ ತನ್ನಲ್ಲಿ ಇದೆಯೆಂದು ನಿವೇದಿಸಿಕೊಳ್ಳಲಾಗುವುದು.

**ಯದಹ್ನಾತ್ ಕುರುತೇ ಪಾಪಂ ಯದಹ್ನಾತ್ ಪ್ರತಿಮುಚ್ಯತೇ ।**
**ಯದ್ರಾತ್ರ್ಯಾತ್ ಕುರುತೇ ಪಾಪಂ ಯದ್ರಾತ್ರ್ಯಾತ್ ಪ್ರತಿಮುಚ್ಯತೇ ॥**

ಅಹ್ನಾತ್ ಎಂಬಲ್ಲಿಯ ಆತ್ ಎಂಬುದು ವೈದಿಕಪ್ರತ್ಯಯ. 'ಅಹ್ನಿ' ಹಗಲಿನಲ್ಲಿ ಎಂಬ ಅರ್ಥ. ಹಗಲಿನಲ್ಲಿ ಏನು ನನ್ನಿಂದ ಪಾಪ ಎಸಗಲ್ಪಟ್ಟಿದೆಯೋ ಅದೆಲ್ಲ ತತ್ತ್ವಾಭಿಮಾನಿಗಳ ಅನುಗ್ರಹದಿಂದ ಪರಿಹಾರವಾಗಿದೆ. ರಾತ್ರಿಯಲ್ಲಿ ಎಸಗಲ್ಪಟ್ಟ ಪಾಪವೂ ಪರಿಹೃತವಾಗಿದೆ. 'ರಾತ್ರಿಸ್ತದವಲುಂಪತು', 'ಅಹಸ್ತದವ ಲುಂಪತು' ಎಂದು ರಾತ್ರಿ ಮತ್ತು ಹಗಲಿನ ದೇವತೆಗಳನ್ನು ಪ್ರಾರ್ಥಿಸಿ ಅವರಿಂದ ಪಾಪಪರಿಹಾರವನ್ನು ಪಡೆದದ್ದಾಗಿದೆ.

'ಸರ್ವವರ್ಣೇ ಮಹಾದೇವಿ ಸಂಧ್ಯಾವಿದ್ಯೇ ಸರಸ್ವತಿ'

ಎಲ್ಲ ವರ್ಣಗಳಿಗೂ ಮೂಲಭೂತಗಳಾದ 'ಲೋಹಿತಶುಕ್ಲಕೃಷ್ಣಾಂ' ಎಂದಿರುವಂತೆ ಗಾಯತ್ರೀದೇವಿ ಮೂರು ಸಂಧ್ಯಾಕಾಲಗಳಲ್ಲಿ ಕೆಂಪು, ಕಪ್ಪು, ಬಿಳಿ ಬಣ್ಣಗಳುಳ್ಳವಳಾಗಿ ಸ್ತುತಿಸಲ್ಪಡುವವಳಾದುದರಿಂದ ಸರ್ವವರ್ಣೇ ಎನಿಸಿರುವಳು. ಪರಿಪೂರ್ಣನಾಗಿದ್ದು ಸರ್ವ ಎನಿಸುವ ಭಗವಂತನನ್ನು ವರ್ಣಿಸುವುದರಿಂದಲೂ ಸರ್ವವರ್ಣಳು. ಸಂಧ್ಯಾಕಾಲದಲ್ಲಿ ಜಪಿಸಲು ಯೋಗ್ಯಳಾಗಿರುವುದರಿಂದ ಸಂಧ್ಯಾವಿದ್ಯಳು. 'ಸರಸ್ವತಿ' ವೇದವಿದ್ಯೆಯೂ ಸರಸ್ವತಿ, ಅದರ ಅಭಿಮಾನಿನಿಯರೂ ಸರಸ್ವತಿ, ಅದರ ಪ್ರತಿಪಾದ್ಯ ಭಗವಂತನು ಸರಸ್ವತಿ. ಬ್ರಹ್ಮಬಿಂದುವಿನಿಂದ ಹೊರಟು ಸರಸ್ವತಿ ನದಿಯಾಗಿ ಹರಿದಂತೆ ಬ್ರಹ್ಮಪ್ರತಿಪಾದಕ ಓಂಕಾರ ಘಟಕಬಿಂದು ಕ್ರಮೇಣ ಓಂಕಾರ, ವ್ಯಾಹೃತಿ, ಗಾಯತ್ರಿ, ಪುರುಷಸೂಕ್ತ ಹಾಗೂ ವೇದವಾಗಿ ಹರಿದುದರಿಂದ ವೇದವಿದ್ಯೆ, ಗಾಯತ್ರೀವಿದ್ಯೆ ಸರಸ್ವತಿ ಎನಿಸಿದೆ.

'ವಿಷ್ಣೋರ್ಗುಣೋಕ್ತಿಪರತಾ ಮಮ ನಿತ್ಯಂ ಸುರೇಶ್ವರಾಃ ।

ತದರ್ಥಮನ್ಯದ್ವಚನಮತಸ್ತಸ್ಯ ವಿರೋಧಿ ಯತ್ ॥

ತನ್ಮಮಾರ್ಥೋ ನಹಿ ಕ್ವಾಪಿ ಸಾऽಹಂ ತತ್ಸರಣಾತ್ ಸದಾ ।

ಸರಸ್ವತೀತಿ ಸಂಪ್ರೋಕ್ತಾ ।

ಎಂದು ಮಹೋಪನಿಷತ್ತಿನಲ್ಲಿ (ಮಾಂ.ಉ.ಭಾ.) ಹೇಳಿರುವಂತೆ ವೇದವಿದ್ಯೆ ಹೇಗೋ ಹಾಗೆಯೇ ವೇದವಿದ್ಯೆಯನ್ನು ವಿಷ್ಣುವಿನ ಗುಣಪೂರ್ಣತೆಯ ಪರವಾಗಿ ತೆರೆದುಕೊಳ್ಳುವಂತೆ ನಿಯಂತ್ರಿಸುವ ಲಕ್ಷ್ಮಿ, ಸರಸ್ವತಿ, ಭಾರತಿಯರು ಭಗವಂತನ ಗುಣಪೂರ್ಣತೆಯನ್ನು ವೇದದ ಮೂಲಕ ಅನುಸರಿಸುವುದರಿಂದ ಸರಸ್ವತಿ ಎನಿಸಿರುವರು. ಭಗವಂತನಾದರೂ ಸಾರಸ್ವತ ಸೂಕ್ತದಲ್ಲಿ ತಿಳಿಸಿರುವಂತೆ 'ಸರಃ' ಎನಿಸುವ ಗುಣಗಳನ್ನು ಒಳಗೊಂಡಿರುವುದರಿಂದ ಸರಸ್ವತೀ ಎನಿಸುವನು.

ಹೀಗೆ ಸರಸ್ವತಿ ಎನಿಸುವ ಗಾಯತ್ರೀನಾಮಕ ಭಗವಂತನಲ್ಲಿ ಹಾಗು ಗಾಯತ್ರ್ಯಭಿಮಾನಿನಿಯರಾದ ಲಕ್ಷ್ಮ್ಯಾದಿಗಳಲ್ಲಿ ಪ್ರಾರ್ಥನೆ ಸಲ್ಲಿಸಲಾಗುವುದು. ಗಾಯತ್ರೀಪ್ರತಿಪಾದ್ಯನಾದ ಭಗವಂತ ಹಾಗೂ ಮಂತ್ರದ ಅಭಿಮಾನಿನಿಯರು ನನ್ನಲ್ಲಿ ಸನ್ನಿಹಿತರಾಗಿದ್ದುಕೊಂಡು ನನ್ನಿಂದ ಸರಿಯಾಗಿ ಜಪವನ್ನು ನಡೆಸಲಿ ಎಂದು ಅಭಿಪ್ರಾಯ.

**ಗಾಯತ್ರೀ ಧ್ಯಾನ:**

ಗಾಯತ್ರಿಯ ವೈದಿಕ ಧ್ಯಾನದಂತೆ ಇರುವ ಮುಂದಿನ ಮಂತ್ರವನ್ನು ಕೆಲವು ಶಾಖೆಗಳ ಪ್ರಕಾರ ಜಪಕಾಲದಲ್ಲಿ ಹೇಳುವ ಕ್ರಮ ಇದೆ.

ಗಾಯತ್ರೀಪ್ರತಿಪಾದ್ಯ ಭಗವಂತನಲ್ಲಿರುವ ಕೆಲವು ಅಪೂರ್ವ ಗುಣಗಳನ್ನು ಉಲ್ಲೇಖಿಸಿ ಅಂತಹ ಗುಣಗಳ ಪ್ರಾಪ್ತಿಗಾಗಿ ನಡೆಸಲಾಗುವ ಸ್ತುತಿಯಂತೆ ಇರುವ ಆ ಮಂತ್ರ ಹೀಗಿದೆ–

**ಓಜೋಽಸಿ ಸಹೋಽಸಿ ಬಲಮಸಿ ಭ್ರಾಜೋಽಸಿ ದೇವಾನಾಂ**
**ಧಾಮನಾಮಾಸಿ ವಿಶ್ವಮಸಿ ವಿಶ್ವಾಯುಃ ಸರ್ವಮಸಿ ಸರ್ವಾಯುಃ**
**ಅಭಿಭೂರೋಂ ಗಾಯತ್ರೀಮಾವಾಹಯಾಮಿ**
**ಸಾವಿತ್ರೀಮಾವಾಹಯಾಮಿ ಸರಸ್ವತೀಮಾವಾಹಯಾಮಿ ಶ್ರಿಯಮಾವಾಹಯಾಮಿ**
**ಹ್ರಿಯಮಾವಾಹಯಾಮಿ ಛಂದರ್ಷೀನಾವಾಹಯಾಮಿ......**

ಅಣುಪಾಠದ ಪ್ರಕಾರ ಗಾಯತ್ರೀಮಾವಾಹಯಾಮಿ ಅಲ್ಲಿಯವರೆಗೆ ಮಾತ್ರ ಇರುವುದು.

ಓಜಸ್ಸು, ಸಹಸ್ಸು, ಬಲ ಹಾಗು ಭ್ರಾಜಸ್ಸು ಗಾಯತ್ರೀಪ್ರತಿಪಾದ್ಯ ನಾರಾಯಣನಲ್ಲಿ ಪೂರ್ಣ ಪ್ರಮಾಣದಲ್ಲಿ ಇರತಕ್ಕ ಗುಣಗಳು ನಾವು ಗಾಯತ್ರಿಯ ಜಪದಿಂದ ಪಡೆಯಬಹುದಾದವುಗಳು.

ಎದುರಾಳಿಗಳನ್ನು ಎದುರಿಸುವ ಎದೆಗಾರಿಕೆ ಓಜಸ್ಸು. ಎದುರಾಳಿಗಳ ಆಕ್ರಮಣವನ್ನು ತಡೆಯುವ ತಾಕತ್ತು ಸಹಸ್ಸು. ಎದುರಾಳಿಗಳನ್ನು ಬಗ್ಗುಬಡಿಯುವ ಸಾಮರ್ಥ್ಯ ಬಲ. ಇದರಿಂದ ಜಗತ್ತಿನಲ್ಲಿ ಖ್ಯಾತಿಪಡೆಯುವ ವರ್ಚಸ್ಸು ಭ್ರಾಜಸ್ಸು.

ಸಾಧಕನ ಎದುರಾಳಿಗಳು ರಜಸ್ಸು ಮತ್ತು ತಮಸ್ಸು. ಜೀವನದುದ್ದಕ್ಕೂ ಆಕ್ರಮಿಸಲು ಹವಣಿಸುತ್ತಿರುವ ರಜಸ್ಸಿನ ಹಾಗೂ ತಮಸ್ಸಿನ ಪ್ರಭಾವವನ್ನು ಮೆಟ್ಟಿನಿಲ್ಲಬಲ್ಲೆ ಎಂಬ ಆತ್ಮವಿಶ್ವಾಸವೆ ಓಜಸ್ಸು. ಹೀಗಿದ್ದರೂ ಕೆಲವೊಮ್ಮೆ ರಜಸ್ಸಿನ ಅಥವಾ ತಮಸ್ಸಿನ ಆಘಾತ ಸಂಭವಿಸಿದಾಗ ಅದಕ್ಕೆ ತತ್ತರಿಸದೆ ಅದನ್ನು ಹಿಮ್ಮೆಟ್ಟಿಸುವ ಆತ್ಮಬಲವೇ ಸಹಸ್ಸು. ಹೀಗೆ ರಜಸ್ಸು ತಮಸ್ಸುಗಳನ್ನು ಬಗ್ಗುಬಡಿಯುವ ಸಾಮರ್ಥ್ಯವೇ ಬಲ. ಇದರಿಂದಾಗಿ ಸಾತ್ವಿಕವಾಗಿ ಬಾಳುವುದೇ ಭ್ರಾಜಸ್ಸು.

ಗಾಯತ್ರೀಪ್ರತಿಪಾದ್ಯನಲ್ಲಿ 'ಓಜೋಽಸಿ' ...... ಅಂತೆಲ್ಲ ಪ್ರಾರ್ಥಿಸುತ್ತ ನೀನು 'ಓಜಸ್ತೇಜೋದ್ಯುತಿಧರಃ' ಎಂದು ಸ್ತುತನಾದಂತೆ ಓಜಸ್ಸೇ ಮುಂತಾದ ಗುಣಗಳನ್ನು ಪೂರ್ಣಪ್ರಮಾಣದಲ್ಲಿ ಹೊಂದಿರುವವನು. ಸ್ವರೂಪಾತ್ಮಕಗಳಾದ ಆ ಗುಣರೂಪಿಯಾಗಿರುವವನು. ಅಂತಹ ಗುಣಗಳನ್ನು ನಮಗೂ ಅನುಗ್ರಹಿಸು ಎಂದು ಪ್ರಾರ್ಥಿಸುವುದು.

'ದೇವಾನಾಂ ಧಾಮನಾಮಾಸಿ' 'ಯೋ ದೇವಾನಾಂ ನಾಮಧಾ ಏಕ ಏವ' ಎಂದಿರುವಂತೆ ಎಲ್ಲ ದೇವತೆಗಳಿಗೆ ನಾಮವನ್ನು ಕೊಟ್ಟವನೂ, ಅವುಗಳ ಮುಖ್ಯ ಧಾರಕನೂ ನೀನಾಗಿದ್ದಿ. ಯಾಕೆಂದರೆ ನೀನೇ ದೇವತೆಗಳಿಗೆ ಆಶ್ರಯನಾಗಿ ಅವರ ಒಳಗೆ ಅಂತರ್ಯಾಮಿಯಾಗಿ ಇರುವವನು.

'ವಿಶ್ವಮಸಿ ವಿಶ್ವಾಯುಃ ಸರ್ವಮಸಿ ಸರ್ವಾಯುಃ' ಎಲ್ಲವನ್ನು ತುಂಬಿರುವವನು ಅಲ್ಲದೆ ಎಲ್ಲದಕ್ಕು ಆಯುಷ್ಯವನ್ನು-ಬದುಕನ್ನು ನೀಡುವವನು ವಿಶ್ವ ಎಂದರೆ ವಾಯು ಹಾಗೂ ಚತುರ್ಮುಖ ಎಂಬ ಅರ್ಥವಿದೆ. ಆದುದರಿಂದ ಜೀವಶ್ರೇಷ್ಠರಾದ ವಾಯುಬ್ರಹ್ಮರಿಗೂ ಆಯುಷ್ಯ ನೀಡುವವನು ನೀನು.

ವಿಶ್ವ ಎಂದರೆ ಜಡಪ್ರಪಂಚವನ್ನಿಟ್ಟುಕೊಂಡು, ಚೇತನಪ್ರಪಂಚವನ್ನು ಸರ್ವ ಶಬ್ದದಿಂದ ಪರಾಮರ್ಶಿಸಿ ನೀನು ಬರೇ ಜಡಪ್ರಪಂಚವನ್ನಷ್ಟೇ ಅಲ್ಲ ಚೇತನ ಪ್ರಪಂಚವನ್ನೂ ತುಂಬಿರುವಿ ಹಾಗೂ ಅದಕ್ಕೆಲ್ಲ ಆಯುಷ್ಯ ಕೊಡುವಿ.

'ಸರ್ವಾಯು' ಎಂದರೆ ಪೂರ್ಣ ಆಯುಷ್ಯದ ಸ್ಥಿತಿ ಮೋಕ್ಷ ಎಂದು ಅರ್ಥ. ಅಂತಹ ಮೋಕ್ಷಾವಸ್ಥೆಯೂ ನಿನ್ನ ಅಧೀನ. ಸರ್ವ ಎಂದರೆ ಪ್ರಕೃತ್ಯಭಿಮಾನಿನಿ ಲಕ್ಷ್ಮೀ ಎಂದೂ ಅರ್ಥ. ಆಕೆಗೂ ಪೂರ್ಣಾಯುಷ್ಯವನ್ನು ಅನುಗ್ರಹಿಸಿರುವುದರಿಂದ ಭಗವಂತ ಸರ್ವಾಯು.

ಹೀಗೆ ಭಗವಂತನು ವಿಶ್ವಾಯು ಸರ್ವಾಯು ಎಂದೆನಿಸಿ ವಾಯು ಚತುರ್ಮುಖಲಕ್ಷ್ಮ್ಯಾದಿಗಳಿಗೂ ಬದುಕನ್ನು ನೀಡುವವನಾದುದರಿಂದಲೇ 'ಅಭಿಭೂಃ' 'ಸರ್ವಂ ಅಭಿಭವತಿ' ಲಕ್ಷ್ಮಿಯೇ ಮುಂತಾದ ಪ್ರತಿಯೊಬ್ಬರನ್ನೂ ಕಡೆಗಣಿಸಿ ಸರ್ವೋತ್ತಮನೆನಿಸಿರುವನು. 'ನಮತೀತಕ್ಷರಾಕ್ಷರ' ಆದುದರಿಂದಲೇ 'ಓಂ' ಓಂಕಾರಪ್ರತಿಪಾದ್ಯ. ಓಂಕಾರಕ್ಕೆ ಅನೇಕ ಅರ್ಥಗಳಿವೆ. ಅವುಗಳಲ್ಲಿ 'ಅವತೀತಿ ಓಂ', 'ಪ್ರವಿಶತೀತಿ ಓಂ' ಎಂಬುದಾಗಿ ಎಲ್ಲವನ್ನೂ ಅಂತರ್ಯಾಮಿಯಾಗಿ ಪ್ರವೇಶಿಸಿರುವನು, ಎಲ್ಲದರ ರಕ್ಷಣೆ ನಡೆಸುತ್ತಿರುವವನು ಎಂಬ ಎರಡು ಅರ್ಥಗಳನ್ನು ಮುಖ್ಯವಾಗಿ ಅಭಿಭೂ ಶಬ್ದಾರ್ಥದ ಪೋಷಕವಾಗಿ ಇಟ್ಟುಕೊಳ್ಳಬೇಕು.

**ಗಾಯತ್ರೀಮಾವಾಹಯಾಮಿ, ಸಾವಿತ್ರೀಮಾವಾಹಯಾಮಿ, ಸರಸ್ವತೀಮಾವಾಹಯಾಮಿ** –ಗಾಯತ್ರೀಪ್ರತಿಪಾದ್ಯ ಭಗವಂತನದ್ದೆ ಗಾಯತ್ರೀ, ಸಾವಿತ್ರೀ, ಸರಸ್ವತೀ ಎಂಬುದಾಗಿ ಮೂರು ರೂಪಗಳು, ಹಾಗೂ ಗಾಯತ್ರೀ ಅಭಿಮಾನಿನಿಯ ಮೂರು ರೂಪಗಳೂ ಆಗಿವೆ. ಗಾಯತ್ರಿಯನ್ನು ಮೂರು ಹೊತ್ತು ಜಪಮಾಡುವವರು ಗಾಯತ್ರೀಪ್ರತಿಪಾದ್ಯನ ಬೇರೆ ಬೇರೆ ರೂಪವನ್ನು ಧ್ಯಾನಮಾಡುವುದಿದೆ.

**'ಗಾಯತಿ ತ್ರಾಯತೇ ಚ'** ಚತುರ್ಮುಖನಿಗೆ ವೇದದ ಉಪದೇಶ ನೀಡಿದವನು, ಭಕ್ತರನ್ನು ರಕ್ಷಿಸುವವನು ಎಂಬ ಅರ್ಥದಲ್ಲಿ ಮತ್ತು **'ಗಾಯಂತಂ ತ್ರಾಯತೇ'**, ತನ್ನನ್ನು ಸ್ತುತಿಸುವವರನ್ನು ರಕ್ಷಿಸುವವನು ಎಂಬ ಅರ್ಥದಲ್ಲಿ ಭಗವಂತನು ಗಾಯತ್ರೀ ಎನಿಸುವನು.

ಸವಿತೃಮಂಡಲದಲ್ಲಿರುವ ಭಗವಂತನ ಸ್ತ್ರೀರೂಪ 'ಸಾವಿತ್ರೀ' ಎನಿಸುವುದು.

'ಸರಃ' ಎನಿಸಿರುವ ಗುಣಗಳಿರುವುದರಿಂದ ಸರಸ್ವಾನ್ ಎನಿಸಿರುವ ವಾಯುವಿಗೆ ಪ್ರಿಯನಾಗಿರುವುದರಿಂದ ಸರಃ ಎನಿಸುವ ಗುಣದಿಂದ ವ್ಯಾಪ್ತನಾಗಿರುವುದರಿಂದ ಸರಸ್ವತೀ ಎಂಬುದಾಗಿ ಶ್ರೀಹರಿಯು ಕರೆಯಲ್ಪಡುವನು.

ಹೀಗೆ ಗಾಯತ್ರೀ, ಸಾವಿತ್ರೀ, ಸರಸ್ವತೀ ಶಬ್ದಗಳಿಂದ ಭಗವಂತನನ್ನು ತನ್ನಲ್ಲಿ ಆವಾಹಿಸಿಕೊಳ್ಳುವುದು. ಗಾಯತ್ರಿಗೆ ಮುಖ್ಯಾಭಿಮಾನಿನಿಯಾದ ಲಕ್ಷ್ಮೀದೇವಿಯ ಶ್ರೀ ಮತ್ತು ಹ್ರೀ ರೂಪಗಳನ್ನು ಆವಾಹಿಸಿಕೊಳ್ಳುವುದು. ಬಳಿಕ 'ಛಂದರ್ಷೀನ್ ಆವಾಹಯಾಮಿ' ಗಾಯತ್ರೀಮಂತ್ರವನ್ನು ಕಂಡ ಋಷಿಗಳ ಆವಾಹನೆ. ಮೊತ್ತ ಮೊದಲ ಋಷಿ ಚತುರ್ಮುಖ, ಬಳಿಕ ವಸಿಷ್ಠರು. ವಸಿಷ್ಠರ ಸಾಮ್ಯ ತಂದುಕೊಳ್ಳಬೇಕೆಂಬ ಛಲದಿಂದ ತೊಡಗಿದ ವಿಶ್ವಾಮಿತ್ರರು ಅನಂತರದ ಋಷಿಗಳು. ಆದುದರಿಂದ ಸಮಸ್ತ ವೈದಿಕಪರಂಪರೆಯ ಋಷಿಗಳನ್ನು, ವಿಶೇಷವಾಗಿ ಗಾಯತ್ರಿಯ ದರ್ಶನಪಡೆದ ಚತುರ್ಮುಖ ವಸಿಷ್ಠ ವಿಶ್ವಾಮಿತ್ರರನ್ನು ತನ್ನಲ್ಲಿ ಆವಾಹಿಸಿಕೊಳ್ಳುವುದು. ಅವರು ತನ್ನಲ್ಲಿದ್ದುಕೊಂಡು ಜಪಕ್ಕೆ ಬೇಕಾದ ಸ್ಫೂರ್ತಿಯನ್ನು ಅನುಗ್ರಹಿಸಲಿ.

**ವಹ್ನಿಪುರಾಣದ ಪ್ರಕಾರ ಗಾಯತ್ರೀಮಂತ್ರದ ದೇವತೆ 'ವಿಷ್ಣು'**

'ಧೀ'ಶಬ್ದವಾಚ್ಯೋ ಬ್ರಹ್ಮಾಣಂ ಪ್ರಚೋದಯತಿ ಸರ್ವದಾ ।
ಸೃಷ್ಟ್ಯರ್ಥಂ ಭಗವಾನ್ ವಿಷ್ಣುಃ ಸವಿತಾ ಸ ತು ಕೀರ್ತಿತಃ ।
ಸರ್ವಲೋಕಪ್ರಸವನಾತ್ ಸವಿತಾ ಸ ತು ಕೀರ್ತ್ಯತೇ ।
ಯತಸ್ತದ್ದೇವತಾ ದೇವೀ ಸಾವಿತ್ರೀತ್ಯುಚ್ಯತೇ ತತಃ ।

ನಿತ್ಯಜ್ಞಾನಸಸ್ವರೂಪನಾಗಿದ್ದು ಎಲ್ಲರ ಬುದ್ಧಿಯ ಪ್ರೇರಕನಾಗಿ 'ಧೀ' ಎಂದೆನಿಸಿರುವ ಭಗವಂತನು ಚತುರ್ಮುಖನನ್ನು ಸೃಷ್ಟಿಗಾಗಿ ಪ್ರೇರಿಸಿ, ಅವನ ಮೂಲಕ ಜಗತ್‌ಸೃಷ್ಟಿಯನ್ನು ನಡೆಸುವುದರಿಂದ ಶ್ರೀವಿಷ್ಣುವು ಸವಿತಾ ಎನಿಸುವನು. ಹೀಗೆ ಸಮಸ್ತಲೋಕಗಳ ಸೃಷ್ಟಿಗೆ ಕಾರಣನಾಗಿದ್ದು 'ಸವಿತಾ' ಎನಿಸುವ ಶ್ರೀವಿಷ್ಣುವೇ ದೇವತೆಯಾಗಿ, ಅಂದರೆ ಪ್ರತಿಪಾದ್ಯನಾಗಿ ಇರುವ ಪ್ರಯುಕ್ತ 'ಗಾಯತ್ರೀ'ಯು 'ಸಾವಿತ್ರೀ' ಎನಿಸಿದೆ.

ಈ ರೀತಿಯಾಗಿ ಗಾಯತ್ರಿಯ 'ಧಿಯೋ ಯೋ ನಃ ಪ್ರಚೋದಯಾತ್' -ಎಂಬ ಭಾಗದ ಮೇಲೆ ಹೊಸ ಅರ್ಥ ಹೊರಹೊಮ್ಮುವಂತೆ ಬೆಳಕುಚೆಲ್ಲಿ, ಗಾಯತ್ರೀಮಂತ್ರ ಪ್ರತಿಪಾದ್ಯ ಸವಿತಾ ಎಂದರೆ ಶ್ರೀವಿಷ್ಣುವೇ ಎಂಬುದಾಗಿ ಪ್ರತಿಪಾದಿಸುತ್ತಿರುವ ವಹ್ನಿಪುರಾಣದ 'ಗಾಯತ್ರೀಕಲ್ಪ' ಎಂಬ ಅಧ್ಯಾಯದ ಮಾತು ಉಲ್ಲೇಖಗೊಂಡದ್ದು 'ಶಬ್ದಕಲ್ಪದ್ರುಮ'ದ 'ಸವಿತಾ' ಎಂಬ ಶಬ್ದದ ಅರ್ಥವಿವರಣೆಯಲ್ಲಿ.

— *ಸಗ್ರಿ*

**ಋಷಿಃಛಂದೋದೇವತಾ ಸ್ಮರಣೆ:**

ಮುಂದೆ ಗಾಯತ್ರಿಯ 'ಗಾಯತ್ರೀ ಛಂದೋ ವಿಶ್ವಾಮಿತ್ರಋಷಿಃ ಸವಿತಾ ದೇವತಾ' ಎಂದು ಗಾಯತ್ರಿಯ ಋಷ್ಯಾದಿಗಳ ಸ್ಮರಣೆಯನ್ನು ನಡೆಸಲಾಗುವುದು.

ಗಾಯತ್ರೀಮಂತ್ರದ ಛಂದಸ್ಸು ಗಾಯತ್ರೀ. ಎಂಟೆಂಟು ಅಕ್ಷರಗಳ ಮೂರು ಪಾದಗಳಿವೆ. ಮೊದಲನೆಯ ಪಾದದಲ್ಲಿ ಏಳೇ ಅಕ್ಷರಗಳಿವೆಯಾದರೂ ವರೇಣ್ಯಂ ಎಂಬಲ್ಲಿನ 'ಣ್ಯಂ' ಎಂಬುದನ್ನು 'ಣಿಯಂ' ಎಂಬುದಾಗಿ ಬಿಡಿಸಿ ಏಳು ಅಕ್ಷರಗಳನ್ನು ಎಂಟು ಅಕ್ಷರಗಳ ಉಚ್ಚಾರಣೆಯ ಕಾಲದಲ್ಲಿ ಉಚ್ಚಾರಣೆ ಮಾಡಿದಾಗ ಅದು ಪೂರ್ಣಗಾಯತ್ರೀ ಎನಿಸುತ್ತದೆ. ಭಟ್ಟಭಾಸ್ಕರ ಒಂದು ಅಕ್ಷರ ನ್ಯೂನವಾದ ಗಾಯತ್ರೀ ಆಗಿರುವುದರಿಂದ ನಿಚೃತ್‌ಗಾಯತ್ರೀ ಎಂದು ತಿಳಿಸಿ ದ್ದಾನೆ. ಆದರೆ ಹಾಗೆ ಹೇಳುವ ಪದ್ಧತಿ ಇಲ್ಲ. ಇದು ಪೂರ್ಣ ಗಾಯತ್ರಿಯೇ.

ನಾವು ಜಪಮಾಡುವುದು ಪ್ರಣವವ್ಯಾಹೃತಿಸಹಿತವಾದ ಗಾಯತ್ರಿಯಾದು ದರಿಂದ ಇದಕ್ಕೆ ಋಷಿ ವಿಶ್ವಾಮಿತ್ರ. ಅವನಿಂದಾಗಿ ನಾವು ಈ ಗಾಯತ್ರಿಯನ್ನು ಪಡೆಯುವಂತಾಗಿದೆ.

ಸೂರ್ಯಮಂಡಲದಲ್ಲಿರುವ ಸವಿತೃ ಎನಿಸುವ ನಾರಾಯಣನೇ ಗಾಯತ್ರೀ ಪ್ರತಿಪಾದ್ಯ. ಅಗ್ನಿಗತ ಅಗ್ನಿನಾರಾಯಣ ಹೇಗೆ ಓಂಕಾರಪ್ರತಿಪಾದ್ಯನೋ ಹಾಗೆ ಗಾಯತ್ರೀಪ್ರತಿಪಾದ್ಯ ಸವಿತೃನಾರಾಯಣ.

**ಮುಖಾದಿಗಳ ವರ್ಣನೆ:**

ಮುಂದೆ ಗಾಯತ್ರಿಯ ಮುಖಾದಿಗಳನ್ನು ತಿಳಿಸುವ ಆಲಂಕಾರಿಕ ವರ್ಣನೆಯ ಮೂಲಕ ಗಾಯತ್ರಿಯನ್ನು ಮತ್ತೊಂದು ರೀತಿಯಿಂದ ಪರಿಚಯಿಸ ಲಾಗುವುದು.

**ಅಗ್ನಿರ್ಮುಖಂ ಬ್ರಹ್ಮಾ ಶಿರೋ ವಿಷ್ಣುರ್ಹೃದಂ ರುದ್ರಃ ಶಿಖಾ**

**ಪೃಥಿವೀ ಯೋನಿಃ ಪ್ರಾಣಾಪಾನವ್ಯಾನೋದಾನಸಮಾನಾ**

**ಸಪ್ರಾಣಾ ಶ್ವೇತವರ್ಣಾ ಸಾಂಖ್ಯಾಯನಸಗೋತ್ರಾ....**

ವಾಗಿಂದ್ರಿಯಕ್ಕೆ ಅಭಿಮಾನಿಯಾಗಿರುವ ಅಗ್ನಿದೇವತೆ ಬಾಯಲ್ಲಿದ್ದುಕೊಂಡು ಗಾಯತ್ರಿಯನ್ನು ನುಡಿಸಬೇಕು. ಗಾಯತ್ರೀಛಂದಸ್ಸಿಗೆ 'ಸ್ವಾಹಾ' ಅಭಿಮಾನಿನಿ ಯಾಗಿರುವುದರಿಂದ, ಅವಳ ಪತಿಯಾದ ಅಗ್ನಿಗೂ ಗಾಯತ್ರೀಛಂದಸ್ಸಿನ ಮೇಲೆ ನಿಯಂತ್ರಣ ಇದೆ ಎಂದು ವಿಶೇಷವಾಗಿ ಉಲ್ಲೇಖಿಸಲಾಗಿದೆ.

ಗಾಯತ್ರಿಯ ಮೊತ್ತಮೊದಲ ಋಷಿ ಚತುರ್ಮುಖನಾದುದರಿಂದ 'ಬ್ರಹ್ಮಾ ಶಿರಃ' ತಲೆಯಲ್ಲಿಟ್ಟು ಮಣಿಯಬೇಕಾದವನು ಅವನು. ತಲೆ ಋಷಿಸ್ಥಾನೀಯ.

'ವಿಷ್ಣುರ್ಹೃದಮ್' ಶ್ರೀವಿಷ್ಣುವು ಗಾಯತ್ರಿಯಿಂದ ಧ್ಯೇಯಮೂರ್ತಿಯಾಗಿರು ವುದರಿಂದ ಹೃದಯದಲ್ಲಿ ಧ್ಯಾನಿಸಬೇಕಾದವನು ಅವನು.

ಗಾಯತ್ರಿಯ ಮೂಲಕ ಧ್ಯಾನಮಾಡಬೇಕಾದರೆ ಮನೋಭಿಮಾನಿ ರುದ್ರನ ಅನುಗ್ರಹ ಬೇಕು ಅವನು ಭಗವತ್ಪ್ರಜ್ಞೆಯನ್ನು ಒಟ್ಟಿಗೆ ಮೂಡಿಸಿದರಷ್ಟೆ ನಮ್ಮ ಜಪ ಸರಿಯಾಗಿ ನಡೆಯುವುದು. ಆದುದರಿಂದ ಗಾಯತ್ರೀಜಪದ ಜುಟ್ಟು ಮನೋಭಿಮಾನಿ ರುದ್ರನ ಕೈಯಲ್ಲಿದೆ. ಇದನ್ನೇ 'ರುದ್ರಃಶಿಖಾ' ಎನ್ನಲಾಗಿದೆ

'ಪೃಥಿವೀ ಯೋನಿಃ' ಯೋನಿ ಎಂದರೆ ಉತ್ಪತ್ತಿಸ್ಥಾನ. ಬ್ರಹ್ಮಗಾಯತ್ರಿ ದೇವಲೋಕದಲ್ಲಿ ಆವಿರ್ಭಾವ ಹೊಂದಿದರೂ ನಾವು ಜಪಿಸುವ ವಿಶ್ವಾಮಿತ್ರ ಗಾಯತ್ರಿ ಭೂಮಿಯ ಮೇಲೆ ಆವಿರ್ಭಾವವಾಗಿರುವುದರಿಂದ ಅಂತಹ ಗಾಯತ್ರಿಗೆ 'ಪೃಥಿವೀ ಯೋನಿಃ' ಎನಿಸಿದೆ.

'ಪ್ರಾಣಾಪಾನವ್ಯಾನೋದಾನಸಮಾನಾ ಸಪ್ರಾಣಾ' ಪ್ರಾಣಾದಿ ಐದು ವಾಯು ದೇವನ ರೂಪಗಳಿವೆ. ಅವುಗಳಿಂದ ನಿಯಮ್ಯಗಳಾದ ಐದು ರೂಪಗಳಿವೆ. ಹಾಗೂ ವಾಯುದೇವನ ಐದು ರೂಪಗಳಿಗೆ ನಿಯಾಮಕಗಳಾದ ವಾಸುದೇವಾದಿ ಐದು ರೂಪಗಳು ಪ್ರಾಣಾದಿ ನಾಮಗಳಿಂದ ವಾಚ್ಯವಾಗಿರುವವು. ಇವಲ್ಲದೆ ಆಚಾರ್ಯರು ಛಾಂದೋಗ್ಯಭಾಷ್ಯದಲ್ಲಿ ಭಗವಂತನ ಪರಿವಾರದೇವತೆಗಳಾಗಿ ಪ್ರಾಣಾದಿಗಳನ್ನು ತಿಳಿಸಿರುವರು. ಪ್ರಾಣವ್ಯಾನರು ಸೂರ್ಯಚಂದ್ರರು, ಅಪಾನ ಅಗ್ನಿ, ಉದಾನ ವಾಯು, ಸಮಾನ ಇಂದ್ರ. ಹೀಗೆ ಭಗವಂತನ ಒಳಗಿನ ದ್ವಾರಪಾಲಕರಾಗಿರುವ ಸೂರ್ಯ, ಚಂದ್ರ, ಅಗ್ನಿ, ಇಂದ್ರ, ವಾಯು ಇವರಿಂದ ಸಹಿತಳಾದವಳು ಅಲ್ಲದೆ ಪ್ರಾಣಾದಿ ವಾಚ್ಯರಾದ ಪ್ರಾಣದೇವರ ರೂಪಾದಿಗಳಿಂದ ಸಹಿತಳಾದವಳು 'ಸಪ್ರಾಣಾ'. ಇವರಿಗೆಲ್ಲ ಚೇಷ್ಟಕಳಾದ ಪ್ರಕೃತ್ಯಭಿಮಾನಿನಿ ಲಕ್ಷ್ಮಿ ಪ್ರಾಣ ಎನಿಸಿದರೆ ಆಕೆಯಿಂದಲೂ ಸಹಿತಳಾದವಳು ಗಾಯತ್ರೀ.

'ಶ್ವೇತವರ್ಣಾ' ಗಾಯತ್ರೀಧ್ಯೇಯಮೂರ್ತಿಯ ಬಣ್ಣ ಉಜ್ವಲವಾದ ಬಿಳುಪು. 'ರೂಪೋಪನ್ಯಾಸಾಚ್ಚ' ಎಂಬ ಬ್ರಹ್ಮಸೂತ್ರದಲ್ಲಿ ನಿರ್ಣಯಿಸಿರುವಂತೆ ಭಗವಂತನಿಗೆ ನಾಲ್ಕು ಬಣ್ಣಗಳಿವೆಯಾದರೂ ಗಾಯತ್ರಿಯ ಧ್ಯೇಯಮೂರುತಿಯ ಬಣ್ಣ ಶ್ವೇತ. ಯಾಕೆಂದರೆ ಗಾಯತ್ರಿಯ ಉಪಾಸನೆ ಶುದ್ಧ ಸಾತ್ವಿಕ ಪ್ರಯೋಜನ ಕ್ಕಾಗಿಯಷ್ಟೇ ಇರುವಂತಹದ್ದು. ಶ್ವೇತ ಸತ್ವೋನ್ಮೇಷದ ಸಂಕೇತವೂ ಹೌದು. ಅಂತೂ ಉಪಾಸನೆಯ ಉದ್ದೇಶಕ್ಕನುಗುಣವಾಗಿ ಗಾಯತ್ರಿಯಿಂದ ಶ್ವೇತವರ್ಣದ ಭಗವಂತನನ್ನು ಧ್ಯಾನಿಸಬೇಕು.

'ಸಾಂಖ್ಯಾಯನಸಗೋತ್ರಾ' ಗಾಯತ್ರೀ ಎನಿಸುವ ಲಕ್ಷ್ಮಿಯಲ್ಲಿ ಇದರ ಸಮನ್ವಯ ಹೀಗೆ –ಸಾಂಖ್ಯರು ಜ್ಞಾನಿಗಳು. ಅವರಿಗೆ ಆಶ್ರಯನಾದ ಭಗವಂತನೇ ಸಾಂಖ್ಯಾಯನ, ನಾರಾಯಣ ಇದ್ದಹಾಗೆ. ಅಂತಹ ಭಗವಂತನ ಸಗೋತ್ರ ಳಾದವಳು ಲಕ್ಷ್ಮಿ. ಗೋತ್ರ ಎನಿಸುವ ಹುಟ್ಟಿನ ಮೂಲ ಇಬ್ಬರದ್ದು ಒಂದೇ. ಯಾಕೆಂದರೆ ಇಬ್ಬರಿಗೂ ಹುಟ್ಟೇ ಇಲ್ಲ.

ಗಾಯತ್ರೀ ಎನಿಸುವ ಭಗವಂತನು ಸಾಂಖ್ಯಾಯನಸಗೋತ್ರಾ ಎನಿಸುವುದು ಹೀಗೆ –ಸಾಂಖ್ಯ ಎಂದರೆ ಶುದ್ಧಾತ್ಮ ತತ್ತ್ವವಿಜ್ಞಾನ. ಅದಕ್ಕೆ ಆಶ್ರಯರಾದ ಜ್ಞಾನಿ

ಗಳೇ ಸಾಂಖ್ಯಾಯನರು –ಅಪರೋಕ್ಷಜ್ಞಾನಿಗಳಾದ ಬ್ರಹ್ಮಾದಿದೇವತೆಗಳು. ಅವರು ಸಗೋತ್ರರು ಅಂದರೆ ಸಮಾನ ನಾಮರು. ಗೋತ್ರ ಎಂದರೆ ನಾಮ ಎಂಬ ಅರ್ಥವೂ ಇದೆ. 'ದೇವಾನಾಂ ಧಾಮನಾಮಾಸಿ' ಎಂದಿರುವಂತೆ ಇವನ ಹೆಸರನ್ನೇ ದೇವತೆಗಳಿಗಿಡಲಾದ ಪ್ರಯುಕ್ತ ಅವರ ಸಗೋತ್ರ ಸಮಾನನಾಮ ಉಳ್ಳವನು ಗಾಯತ್ರೀಪ್ರತಿಪಾದ್ಯ ಭಗವಂತನು. ಅಜ್ಞಾನಿಗಳ ಹೆಸರು ಭಗವಂತನದ್ದೆ ಆದರೂ ಅವರು ಅದನ್ನು ವಿವೇಚಿಸಿಕೊಳ್ಳುವುದಿಲ್ಲ. ಜ್ಞಾನಿಗಳಾದ ಬ್ರಹ್ಮಾದಿದೇವತೆಗಳು ತಮ್ಮ ಹೆಸರು ಮುಖ್ಯವಾಗಿ ಭಗವಂತನಿಗೆ ಸೇರಿದ್ದೆಂದು ವಿಶ್ಲೇಷಿಸಿಕೊಳ್ಳುತ್ತಾ ರಾದುದರಿಂದ ವಿಶೇಷವಾಗಿ ಸಾಂಖ್ಯಾಯನಸಗೋತ್ರಾ ಎಂದು ಉಲ್ಲೇಖಿಸ ಲಾಗಿದೆ.

## ಮತ್ತೊಂದು ಬಗೆಯ ಪರಿಚಯ:

ಗಾಯತ್ರಿಯ ಅಕ್ಷರಾದಿಗಳಿಂದ ಪ್ರತಿಪಾದ್ಯಗಳಾದ ಭಗವದ್ರೂಪಗಳನ್ನು ತಿಳಿಸುವ ಮೂಲಕ ಗಾಯತ್ರಿಯನ್ನು ಮತ್ತೊಂದು ಬಗೆಯಿಂದ ಪರಿಚಯಿಸಿ ಕೊಡಲಾಗಿದೆ.

**ಚತುರ್ವಿಂಶತ್ಯಕ್ಷರಾ ತ್ರಿಪದಾ ಷಟ್‌ಕುಕ್ಷಿಃ ಪಂಚಶೀರ್ಷೋಪನಯನೇ ವಿನಿಯೋಗಃ**

೨೪ ಅಕ್ಷರಗಳ ಗಾಯತ್ರಿಯ ಆ ಅಕ್ಷರಗಳಿಂದ ಪ್ರತಿಪಾದ್ಯರಾದ ಕೇಶವಾದಿ ೨೪ ಅಕ್ಷರರೂಪಗಳನ್ನೊಳಗೊಂಡದ್ದು ಗಾಯತ್ರಿ. ಅಕ್ಷರರೂಪಗಳು ನಾಶರಹಿತ ಗಳಾದ ರೂಪಗಳು ಎಂದರ್ಥ.

ಗಾಯತ್ರಿಯಲ್ಲಿ ಮೂರು ಪಾದಗಳು. ಅವುಗಳಿಂದ 'ತ್ರಿಪಾದಸ್ಯಾಮೃತಂ ದಿವಿ' ಎಂಬ ಪುರುಷಸೂಕ್ತದ ಭಾಗದಿಂದ ಪ್ರತಿಪಾದ್ಯಗಳಾದ ಮೂರು ರೂಪಗಳು ಪ್ರತಿಪಾದ್ಯಗಳು. "ಉತ್ತಮಾನಾಂ ಸ್ವರೂಪಂ ತು ಪಾದಶಬ್ದೇನ ಭಣ್ಯತೇ' ಎಂದಿರುವುದರಿಂದ ಇಲ್ಲಿ ಪದಶಬ್ದದಿಂದ ಭಗವಂತನ ಸ್ವರೂಪದ ಉಲ್ಲೇಖ ಬಂದಿದೆ. ಭಗವಂತನ ಶ್ವೇತದ್ವೀಪ, ಅನಂತಾಸನ, ವೈಕುಂಠ ಈ ಮೂರು ಲೋಕಗಳಲ್ಲಿರುವ ನಾರಾಯಣ, ವಾಸುದೇವ, ವೈಕುಂಠ ಎಂಬ ಮೂರು ರೂಪಗಳು ಅಥವಾ ಅನಂತಾಸನ, ಪದ್ಮನಾಭ, ವೈಕುಂಠ ಅಥವಾ ಅಮೃತ, ಕ್ಷೇಮ, ಅಭಯ ಈ ಮೂರು ರೂಪಗಳು ಗಾಯತ್ರಿಯ ಮೂರು ಪಾದಗಳಿಂದ ಪ್ರತಿಪಾದ್ಯಗಳಾಗಿವೆ.

**'ಷಟ್‌ಕುಕ್ಷಿಃ'** 'ಕುಕ್ಷ ಪೂರಣೇ' ಧಾತುವಿನಿಂದ ನಿಷ್ಪನ್ನವಾದ ಕುಕ್ಷಿ ಶಬ್ದ ಆರು ರೂಪಗಳಿಂದ ಜಗತ್ತಿನಲ್ಲಿ ತುಂಬಿರುವ ಭಗವಂತನನ್ನು ತಿಳಿಸುತ್ತದೆ. ಅಂತಹ ಆರು ಬಗೆಯ ರೂಪಗಳಿಂದ ಕೂಡಿರುವುದರಿಂದ ಗಾಯತ್ರಿ ಷಟ್‌ಕುಕ್ಷಿ.

೧) ಗಾಯತ್ರಿಯಿಂದ ಅಖಂಡವಾಗಿ ಪ್ರತಿಪಾದ್ಯವಾದ ಕುದುರೆಮೋರೆಯ ಸ್ತ್ರೀರೂಪ.

೨) ಗಾಯತ್ರಿಯ ಹತ್ತು ಶಬ್ದಗಳಿಂದ ಪ್ರತಿಪಾದ್ಯಗಳಾದ ದಶಾವತಾರಗಳು.

ಇ) ಸಮಸ್ತವಾಙ್ಮಯ ಪ್ರತಿಪಾದ್ಯ ರೂಪ.

ಈ) ಪೃಥಿವೀ ಯೋನಿಃ ಎನಿಸಿರುವ ಗಾಯತ್ರಿಯಿಂದ ಪ್ರತಿಪಾದ್ಯ ಪೃಥಿವೀ ಗತವಾದ ರೂಪ.

ಉ) ನಮ್ಮ ದೇಹದೊಳಗಿರುವ ಆತ್ಮನಾಮಕರೂಪ.

ಊ) ಜೀವದೊಳಗಿರುವ ಅಂತರ್ಯಾಮಿ ಭಗವದ್ರೂಪ.

ಈ ಆರೂ ರೂಪಗಳು ಗಾಯತ್ರೀ ಎನಿಸುತ್ತಿದ್ದು ಗಾಯತ್ರೀಪ್ರತಿಪಾದ್ಯ ಗಳಾದ ಪ್ರಯುಕ್ತ ಗಾಯತ್ರಿಯು ಷಟ್‌ಕುಕ್ಷಿ ಎನಿಸಿದೆ.

'ಪಂಚಶೀರ್ಷಾ' ಗಾಯತ್ರಿಯ ಮೂಲದಿಂದ ಹೊರಹೊಮ್ಮಿದವು ಐದು ತಲೆಗಳು ಅಂದರೆ ನಾಲ್ಕು ವೇದಗಳು ಹಾಗೂ ಇತಿಹಾಸ ಪುರಾಣಗಳು. ಹೀಗೆ ಒಟ್ಟು ಐದು ವಿದ್ಯೆಗಳು ಗಾಯತ್ರಿಯ ವ್ಯಾಖ್ಯಾನವಾಗಿ ತಲೆಯಂತೆ ಹರಡಿರು ವವುಗಳು.

ಭಗವಂತನ ವಾಸುದೇವಾದಿ ಐದು ರೂಪಗಳು ಗಾಯತ್ರಿಯ ಶಿರಸ್ಸಿ ನಂತಿದ್ದು ಆ ರೂಪಗಳನ್ನು ಪ್ರತಿಪಾದಿಸುವುದರಿಂದಲು ಗಾಯತ್ರಿಯು ಪಂಚ ಶೀರ್ಷಾ. ಗಾಯತ್ರಿಯ ಹತ್ತು ಶಬ್ದಗಳಲ್ಲಿ ಎರಡೆರಡು ಶಬ್ದಗಳು ಸೇರಿ ಭಗವಂತನ ಐದು ರೂಪಗಳನ್ನು ಪ್ರತಿಪಾದಿಸುತ್ತಿವೆ.

ಇಂತಹ ಗಾಯತ್ರಿಯನ್ನು ಎಲ್ಲಿ ಬಳಸಿಕೊಳ್ಳಬೇಕೆನ್ನುವುದನ್ನು ಹೀಗೆ ತಿಳಿಸಲಾಗಿದೆ –**ಉಪನಯನೇ ವಿನಿಯೋಗಃ.**

ಉಪನಯನ ಎಂದರೆ ಬರೇ ಉಪನಯನಸಂಸ್ಕಾರದಲ್ಲಿ ಎಂಬ ಅರ್ಥವಲ್ಲ. ಉಪರಿನಯನ –ಎತ್ತರಕ್ಕೇರಿಸುವುದರಲ್ಲಿ ಅದನ್ನು ಬಳಸಿಕೊಳ್ಳಬೇಕು. ಎತ್ತರ ದಲ್ಲಿರುವ ಪರಮಾತ್ಮನ ಹತ್ತಿರ ಸಾಗುವುದಕ್ಕೆ ಅದರ ಬಳಕೆ ದಿನನಿತ್ಯ ನಡೆಯಬೇಕು. ಅದರ ಜಪದಿಂದ ಉಂಟಾಗುವ ಆಧ್ಯಾತ್ಮಿಕ ಶಕ್ತಿ ನಮ್ಮನ್ನು ಸ್ವಲ್ಪ ಸ್ವಲ್ಪವೇ ಮೇಲೆ ಏರಿಸುತ್ತಿರುತ್ತದೆ. ಪೂರ್ಣವಾಗಿ ಎತ್ತರವನ್ನು ಸೇರುವವರೆಗೂ ಇದರ ಜಪಾದಿಗಳು ನಡೆಯುತ್ತಿರಬೇಕು.

**'ಪ್ರಾಣಯಾಮಃ'**

ಮುಂದೆ 'ಗಾಯತ್ರ್ಯಾ ದಶತಾರಕೈಃ' ಎಂಬುದಾಗಿ ತಂತ್ರಸಾರಸಂಗ್ರಹದಲ್ಲಿ (೨–೫) ಶ್ರೀಮದಾಚಾರ್ಯರು ತಿಳಿಸಿರುವಂತೆ ಹತ್ತು ಓಂಕಾರಗಳಿಂದ, ಏಳು ವ್ಯಾಹೃತಿಗಳಿಂದ, ಗಾಯತ್ರಿಯಿಂದ ಹಾಗೂ ಗಾಯತ್ರೀಶಿರಸ್ಸಿನಿಂದ ಕೂಡಿರುವ ಪ್ರಾಣಾಯಾಮವನ್ನು ಉಲ್ಲೇಖಿಸಲಾಗುವುದು.

**ಓಂ ಭೂಃ ಓಂ ಭುವಃ ಓಂ ಸುವಃ ಓಂ ಮಹಃ ಓಂ ಜನಃ ಓಂ ತಪಃ ಓಂ ಸತ್ಯಂ**

ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್

ಓಮಾಪೋ ಜ್ಯೋತೀ ರಸೋಽಮೃತಂ ಬ್ರಹ್ಮ ಭೂರ್ಭುವಃ ಸುವರೋಮ್

ಇಲ್ಲಿ ಸಪ್ತಲೋಕಗಳ ಹೆಸರುಗಳನ್ನೆ ಸಪ್ತವ್ಯಾಹೃತಿಗಳಾಗಿ ಉಲ್ಲೇಖಿಸಲಾಗಿದೆ. ಅವು ಆಯಾ ಲೋಕದಲ್ಲಿ ವ್ಯಾಪ್ತನಾದ ಲೋಕಗಳ ನಿಯಾಮಕ ಭಗವಂತನ ನಾಮ ಎಂದು ಸೂಚಿಸುವುದಕ್ಕಾಗಿಯೇ ಓಂಕಾರಸಹಿತವಾಗಿಯೇ ಪಠಿಸಲಾಗಿದೆ.

ಭೂಃ ಪರಿಪೂರ್ಣ. ಆ ಪರಿಪೂರ್ಣತೆಯ ಒಂದು ಮುಖವನ್ನು ಮತ್ತೊಂದು ವ್ಯಾಹೃತಿ ತಿಳಿಸುತ್ತದೆ ಭುವಃ, ಐಶ್ವರ್ಯದ ಪರಿಪೂರ್ಣತೆಯನ್ನು ಹೊಂದಿದವನು. ಪರಿಪೂರ್ಣತೆಯ ಮತ್ತೊಂದು ಮುಖವನ್ನು ಇನ್ನೊಂದು ವ್ಯಾಹೃತಿ ತಿಳಿಸುತ್ತದೆ ಸುವಃ. ಒಳ್ಳೆಯ ಜ್ಞಾನಾನಂದಗಳನ್ನು ಹೊಂದಿರುವವನು.

'ಮಹ ಇತಿ ಬ್ರಹ್ಮ' ಎಂದು ತೈತ್ತಿರೀಯದಲ್ಲಿ ಬಂದಿದೆ. ಎಲ್ಲದ್ದಕ್ಕಿಂತಲೂ ಮಹತ್ತಾದವನು ಎಂದು ಅರ್ಥ. ಇದನ್ನು ಸ್ಥೂಲವಾಗಿ ಎಲ್ಲರೂ ತಿಳಿಯಬಹುದಾದರೂ ಇದರ ಉಪಾಸನೆಗೆ ಅಧಿಕಾರ ಚತುರ್ಮುಖನಿಗೆ ಮಾತ್ರ. 'ಜನಯತೀತಿ ಜನಃ' ಎಲ್ಲದರ ಸೃಷ್ಟಿಗೆ ಕಾರಣನಾದವನು. ತಪ ಆಲೋಚನೇ ಎಂಬ ಧಾತುವಿನಿಂದ ನಿಷ್ಪನ್ನವಾದ ತಪಃ ಶಬ್ದದ ಅರ್ಥ ಜ್ಞಾನಸ್ವರೂಪಿ. ಸತ್ಯಂ ಎಂಬುದಕ್ಕೆ ನಿರ್ದುಷ್ಟ ಆನಂದ ಜ್ಞಾನಾತ್ಮಕ ಎಂದು ಅರ್ಥ.

## ಗಾಯತ್ರೀ–ಬ್ರಹ್ಮಗೀತೆ

ಗಾಯತ್ರಿಯು ಜಗತ್ತಿನಲ್ಲಿಯೆ ಅತ್ಯುತ್ತಮವಾದ ಪ್ರಾರ್ಥನಾಮಂತ್ರವಾಗಿದೆ. ಜ್ಞಾನವೇ ಮಾನವನ ಜೀವನದ ಜೀವಾಳವಾಗಿದೆ. ಇಂತಹ ಜ್ಞಾನದ ಪ್ರಚೋದನೆಗಾಗಿ ಭಗವಂತನನ್ನು ಪ್ರಾರ್ಥಿಸುವ ದಿವ್ಯಮಂತ್ರವೇ ಗಾಯತ್ರಿಯಾಗಿದೆ. ಸೂರ್ಯನು ಬಾಹ್ಯಜಗತ್ತಿಗೆ ಬೆಳಕನ್ನು ನೀಡಿ ಜಗತ್ತಿನ ಪೋಷಣೆಯನ್ನು ಮಾಡುತ್ತಾನೆ. ಆ ಸೂರ್ಯನ ಒಳಗಿರುವ ಭಗವಂತನು ನಮ್ಮ ಅಂತರಂಗದೊಳಗೆ ಜ್ಞಾನದ ಬೆಳಕನ್ನು ನೀಡಿ ಸಕಲ ಚೇತನವರ್ಗವನ್ನು ಪೋಷಿಸಲಿ ಎಂದು ಗಾಯತ್ರೀಮಂತ್ರದ ಮೂಲಕವಾಗಿ ನಾವು ಸೂರ್ಯನಾರಾಯಣನ ಪ್ರಾರ್ಥನೆಯನ್ನು ಸಲ್ಲಿಸುತ್ತೇವೆ. ರಾಷ್ಟ್ರಗೀತೆಯು ನಮಗೆ ರಾಷ್ಟ್ರೀಯ ಭಾವನೆಯನ್ನು ಪ್ರಜ್ವಲಗೊಳಿಸುವಂತೆ ಇದು ನಮ್ಮಲ್ಲಿ ಆಧ್ಯಾತ್ಮಿಕ ಸ್ಫೂರ್ತಿಯನ್ನು ತುಂಬುವ ಬ್ರಹ್ಮಗೀತೆಯಾಗಿದೆ.

ಮನೆಮನೆಗಳಲ್ಲಿ ಈ ಮಂತ್ರವು ಪ್ರತಿಧ್ವನಿಗೊಂಡಾಗ ನಾಡಿನಲ್ಲಿ ಆಧ್ಯಾತ್ಮಿಕ ಭೌತಿಕ ಸಮೃದ್ಧಿಯಾಗುವುದರಲ್ಲಿ ಸಂದೇಹವಿಲ್ಲ.

ಹೀಗೆ ಓಂಕಾರವಾಚ್ಯನಾದ ಭಗವಂತನೇ ಭೂಃ, ಅವನೇ ಭುವಃ ಎಂದು ಇಲ್ಲಿಯ ಭೂ ಮುಂತಾದ ಶಬ್ದಗಳು ಭಗವದ್ವಾಚಕ ಎಂದು ಸ್ಪಷ್ಟವಾಗಲೆಂದೇ ಓಂಕಾರದ ಜೊತೆಗೆ ಪಠಿಸಲಾಗಿದೆ.

## ಗಾಯತ್ರಿಯ ಅರ್ಥ:

ಶ್ರೀಮದಾಚಾರ್ಯರು ಗಾಯತ್ರಿಯ ಅರ್ಥವನ್ನು ವಿವರಿಸಿರುವರು –ಗಾಯತ್ರಿಯ 'ತತ್' ಶಬ್ದವನ್ನು 'ಗುಣೈಸ್ತತಃ' ಎಂದು ವ್ಯಾಖ್ಯಾನಿಸಿರುವರು. 'ತತ್' ಶಬ್ದ ವ್ಯಾಪ್ತಿಯನ್ನು ತಿಳಿಸುತ್ತದೆ. ವ್ಯಾಪ್ತಿಯಲ್ಲಿ ದೇಶತಃ ವ್ಯಾಪ್ತಿ, ಕಾಲತಃ ವ್ಯಾಪ್ತಿ ಲಕ್ಷ್ಮೀದೇವಿಯಲ್ಲಿ, ದೇಶಕಾಲಗಳಲ್ಲೂ ಇರುವುದರಿಂದ ಇದೆ. ಭಗವಂತನ ಅಸಾಧಾರಣ ಧರ್ಮ ಗುಣತಃ ವ್ಯಾಪ್ತಿ ಮಾತ್ರ. ಆದುದರಿಂದ ಅದನ್ನು ವಿಶೇಷವಾಗಿ ಉಪಾಸನೆ ಮಾಡಬೇಕು. ಇದಕ್ಕೆ ಉಳಿದ ವ್ಯಾಪ್ತಿಗಳನ್ನು ಬಿಟ್ಟುಬಿಡ ಬೇಕೆಂದರ್ಥವಲ್ಲ. ಪ್ರಾಶಸ್ತ್ಯ ಗುಣತಃ ವ್ಯಾಪ್ತಿಗೆ ನೀಡಬೇಕೆಂದಷ್ಟೇ. ಗುಣತಃ ವ್ಯಾಪ್ತಿ ಎಂದರೆ ಗುಣಪರಿಪೂರ್ಣನಾದವನೆಂದರ್ಥ.

ತತ್ ಶಬ್ದ ಗಾಯತ್ರಿಯ ಮೊದಲ ಶಬ್ದ ಆಗಿರುವಂತೆ ಗಾಯತ್ರಿಯ ಮೊದಲ ಹಾಗೂ ಕೊನೆಯ ಅಕ್ಷರಗಳನ್ನೊಳಗೊಂಡು ಗಾಯತ್ರಿಯ 'ಅಬ್ರಿವಿ ಯೇಷನ್' –ಆದ್ಯಂತಗಳ ಸಂಗ್ರಾಹಕವೂ ಆಗಿದೆ. ಆದುದರಿಂದಲೇ ಗೀತೆಯಲ್ಲಿ 'ಓಂ ತತ್ ಸದಿತಿ ನಿರ್ದೇಶಃ ಬ್ರಹ್ಮಣಸ್ತ್ರಿವಿಧಃ ಸ್ಮೃತಃ' ಎಂಬುದಾಗಿ ಭಗವಂತನ ಪ್ರಮುಖ ಹೆಸರಾಗಿ ಉಲ್ಲೇಖಿಸಲ್ಪಟ್ಟಿದೆ.

'ಸವಿತುಃ' ಎಂಬುದಕ್ಕೆ 'ಪ್ರಸವಿತಾ' ಜಗತ್ತನ್ನು ಸೃಷ್ಟಿಮಾಡುವವನು ಎಂದು ವ್ಯಾಖ್ಯಾನಿಸಿರುವರು.

'ವರೇಣ್ಯಂ' ಹಿಂದೆ 'ತತ್' ಎಂಬುದಕ್ಕೆ ಗುಣಪೂರ್ಣ ಎಂದು ವ್ಯಾಖ್ಯಾನಿಸ ಲಾಗಿತ್ತು. ಅವನು ಗುಣಪೂರ್ಣನಾಗಿರುವುದರಿಂದಲೇ 'ವರೇಣ್ಯಂ' ಎಲ್ಲರಿಗಿಂತ ಶ್ರೇಷ್ಠ ಹಾಗೂ ವರಣೀಯ; ವರಣ ಎಂದರೆ ಆಶ್ರಯ. ವರಣೀಯ ಆಶ್ರಯ ಣೀಯ; ಎಲ್ಲರೂ ಅವನ ಆಶ್ರಯದಲ್ಲೇ ನೆರಳಲ್ಲೇ ಕೃಪಾಛತ್ರದಲ್ಲೇ ಬದುಕಬೇಕು. 'ವರಣೀಯೋ ಗುಣೋನ್ನತೇಃ' ಎಂದು ವಿವರಿಸಿದರು.

'ಭರ್ಗಃ' ಎಂದರೆ 'ಭಾರತಿಜ್ಞಾನರೂಪತ್ವಾತ್ ಭರ್ಗಃ'. ಭರ್ಗ ಎಂಬಲ್ಲಿ 'ಭ', 'ರ', 'ಗ' ಎಂದು ಮೂರು ಅಕ್ಷರಗಳಿವೆ. 'ಭ' ಎಂದರೆ ಜ್ಯೋತಿ ಎಂದರ್ಥ. ಆ ಜ್ಯೋತಿ ಕಟ್ಟಿಗೆಯಿಂದ ಉರಿಯುವಂತಹದ್ದಲ್ಲ. ರ ಅಂದರೆ ರಮಣ; ಗ ಅಂದರೆ ಜ್ಞಾನ. ಜ್ಞಾನಾನಂದಾತ್ಮಕವಾದ ಜ್ಯೋತಿ.

'ದೇವಸ್ಯ' 'ದಿವ್' ಧಾತುವಿಗೆ ಕ್ರೀಡಾದಿ ಹತ್ತು ಅರ್ಥಗಳಿವೆ. 'ದಿವು ಕ್ರೀಡಾಯಾಮ್' 'ಲೋಕವತ್ತು ಲೀಲಾಕೈವಲ್ಯಮ್' ಎಂಬ ಬ್ರಹ್ಮಸೂತ್ರದಲ್ಲಿ ಸಿದ್ಧಾಂತಿಸಿರುವಂತೆ ಜಗತ್ತಿನ ಸೃಷ್ಟ್ಯಾದಿಗಳನ್ನು ಯಾರು ಕ್ರೀಡೆಯಾಗಿ ನಡೆಸುವನೋ ಅವನೇ ದೇವರು. 'ದಿವು ವಿಜಿಗೀಷಾಯಾಮ್' ಸಮಸ್ತಜಗತ್ತನ್ನೂ

ಗೆದ್ದು, 'ಅಭಿಭೂಃ, ಎನಿಸಿ ಯಾರು ಮೆರೆಯುತ್ತಿರುವನೋ ಅವನೇ ದೇವ. 'ದಿವು ವ್ಯವಹಾರೇ' ಇಡೀ ಜಗತ್ತಿನ ಎಲ್ಲರ ವ್ಯವಹಾರಗಳನ್ನೂ ಯಾರು ಸ್ವತಂತ್ರನಾಗಿ ನಡೆಸುವನೋ ಅವನೇ ದೇವ. 'ದಿವು ದ್ಯುತೌ' 'ಯದೇತತ್ ವ್ಯದ್ಯುತದಾ ಇತಿ' ಎಂದು ಉಪನಿಷತ್ತು ತಿಳಿಸುವಂತೆ ಸೂರ್ಯಚಂದ್ರಾದಿಗಳನ್ನು ಯಾರು ಬೆಳಗುವನೋ ಅವನು ದೇವ. 'ದಿವು ಸ್ತುತೌ' ಪ್ರತಿಯೊಂದು ಶಬ್ದವೂ, ನಾದವೂ ಯಾರನ್ನು ಸ್ತುತಿಸುತ್ತದೋ ಅವನು ದೇವ. 'ದಿವು ಸ್ವಪ್ನೇ' ಎಚ್ಚರಾವಸ್ಥೆಯಲ್ಲಾದರೂ ನಮಗೆ ನಾವು ಮಾಡಿದೆವೆಂಬ ಭ್ರಮೆ ಬರುವುದುಂಟು. ಆದರೆ ಎಲ್ಲರೂ ನಿದ್ರಿಸಿದಾಗ 'ಕಾಮಂ ಕಾಮಂ ಪುರುಷೋ ನಿರ್ಮಮಾಣಃ' ಎಂದಿರುವಂತೆ ಹೊಸ ಪ್ರಪಂಚವನ್ನು ಸೃಷ್ಟಿಮಾಡಿ ತೋರಿಸುವವನೇ ದೇವ.

'ದಿವು ಮೋದೇ' ಯಾರು ಆನಂದರೂಪನೋ ಅವನು ದೇವ. 'ದಿವು ಮದೇ' 'ಏತಸ್ಯೈವಾನಂದಸ್ಯ ಮಾತ್ರಾಮುಪಜೀವಂತಿ' ಎಂದಿರುವಂತೆ ಯಾರು ಉಳಿದವರಿಗೆ ತನ್ನ ಆನಂದದ ಪ್ರತಿಬಿಂಬದ ತುಣುಕನ್ನು ನೀಡುವನೋ ಅವನೇ ದೇವ. 'ದಿವು ಕಾಂತೌ' ಕಾಂತಿರಿಚ್ಛಾ –ಯಾರು ಸತ್ಯಸಂಕಲ್ಪನೋ, ಯಾರು ಬಯಸಿದ್ದೆಲ್ಲ ಈಡೇರಿಯೇ ತೀರುವುದೋ ಅವನು ದೇವ. 'ದಿವು ಗತೌ' ಯಾರು ಸರ್ವಗತನೋ, ಯಾರು ಸರ್ವಜ್ಞನೋ ಅವನು ದೇವ. ಹೀಗೆ ಯಾರಲ್ಲಿ ದೇವ ಶಬ್ದದ ಈ ಹತ್ತೂ ಅರ್ಥಗಳು ಪೂರ್ಣಪ್ರಮಾಣದಲ್ಲಿ ಇರುವವೋ ಅವನೇ ದೇವರು.

ಧೀಮಹಿ –ಧ್ಯಾನಮಾಡುತ್ತೇವೆ. ಇದಕ್ಕೆ ಆಚಾರ್ಯರು 'ಧ್ಯೇಯೋಽಖಿಲೈರ್ಜನೈಃ' ಎಂಬುದಾಗಿ ಎಲ್ಲರಿಂದಲೂ ಧ್ಯೇಯನಾದವನು ಎಂದು ವ್ಯಾಖ್ಯಾನಿಸಿರುವರು. ಎಲ್ಲರಿಂದಲೂ ಧ್ಯಾನಿಸಲ್ಪಡಬೇಕಾದವನನ್ನು ನಾವೂ ಧ್ಯಾನಿಸುವೆವು.

## ಬ್ರಹ್ಮಸೂತ್ರಗಳ ನಂಟು

ಗಾಯತ್ರಿಯಲ್ಲಿಯ 'ತತ್' ಶಬ್ದ ಗುಣಪೂರ್ಣತ್ವವನ್ನು ತಿಳಿಸುವ ಮೂಲಕ ಬ್ರಹ್ಮ ಶಬ್ದದ ಪರ್ಯಾಯಶಬ್ದವೆನಿಸಿ ಬ್ರಹ್ಮಸೂತ್ರಗ್ರಂಥದ ಆದ್ಯ ಸೂತ್ರವನ್ನು ಸೂಚಿಸಿದೆ. ಬ್ರಹ್ಮನ ಲಕ್ಷಣವಾಗಿ ಬಂದ ಎರಡನೆಯ ಸೂತ್ರಾರ್ಥವನ್ನು 'ಸವಿತೃ' ಪದ ತಿಳಿಸಿದೆ. ಶಾಸ್ತ್ರಗಳಲ್ಲಿ ಇವನನ್ನೆ ಶ್ರೇಷ್ಠನನ್ನಾಗಿ ತಿಳಿಸಿದ ವರೇಣ್ಯ ಶಬ್ದವು ಮೂರನೆಯ ಸೂತ್ರದ ಸಂಗ್ರಾಹಕ. ಪ್ರಥಮಾಧ್ಯಾಯವು ಸಮನ್ವಯವನ್ನು ತೋರಿಸುವ ಮೂಲಕ ಆತನ ವರಣೀಯತ್ವವನ್ನೆ ಸಾಧಿಸಿದೆ. ಭರ್ಗ ಶಬ್ದವು ಅವಿರೋಧಾಧ್ಯಾಯದ ಸಾರ. ದೇವ ಶಬ್ದವು ಗಮ್ಯನನ್ನು ತಿಳಿಸುವುದರಿಂದ ಫಲಾಧ್ಯಾಯ ತಿಳಿಸಿದಂತೆ ಧೀ ಪ್ರಚೋದನೆ ಹಾಗೂ ಧ್ಯಾನ ಸಾಧನಾಧ್ಯಾಯದ ತಿರುಳು.

*— ಗೋವಿಂದದಾಸ.*

ನಮ್ಮ ಬುದ್ಧಿ–ವೃತ್ತಿಗಳನ್ನೆಲ್ಲ ಯಾರು ಪ್ರೇರಿಸುವನೋ ಅವನನ್ನೇ 'ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ.....' ಎಂದಿರುವಂತೆ ನಮಗೆ ಒಳ್ಳೆಯ ಬುದ್ಧಿಯನ್ನು ಅನುಗ್ರಹಿಸೆಂದು ಪ್ರಾರ್ಥಿಸಬೇಕು.

**ಗಾಯತ್ರೀಶಿರಸ್ಸು:**

'ಆಪಃ' ಎಲ್ಲವನ್ನೂ ಪಾಲನೆಮಾಡುವವನು. 'ಜ್ಯೋತಿಃ' ಸೂರ್ಯ ಚಂದ್ರಾದಿಗಳನ್ನು ಬೆಳಗಿಸುವವನು. ಅವನು ನೀರೂ ಹೌದು; ಬೆಂಕಿಯೂ ಹೌದು. ಇಷ್ಟೇ ಅಲ್ಲ 'ರಸಃ', 'ಯದ್ಯದ್ ವಿಭೂತಿಮತ್ಸತ್ತ್ವಂ........' ಎಂಬುದಾಗಿ ಹೇಳಿದಂತೆ ಪ್ರತಿಯೊಂದರ ಸಾರಭಾಗವೂ ಅವನದ್ದೇ. ನೀರಿನ ತರ್ಪಕತ್ವ, ಬೆಂಕಿಯ ಪ್ರಕಾಶಕತ್ವ ಹೀಗೆ ಪ್ರತಿಯೊಂದರ ಅಸಾಧಾರಣ ಧರ್ಮವೂ ಅವನದ್ದೇ. ಬರೇ ಸಂಸಾರದಲ್ಲಿ ಮಾತ್ರವಲ್ಲ ಮುಕ್ತಿಯೂ ಅವನ ಅಧೀನ–'ಅಮೃತಮ್' ಅವನೇ 'ಬ್ರಹ್ಮ', ಅವನೇ 'ಭೂರ್ಭುವಃಸ್ವಃ' ಎಂಬ ವ್ಯಾಹೃತಿಪ್ರತಿಪಾದ್ಯ; ಅವನೇ 'ಓಮ್' ಪ್ರಣವಪ್ರತಿಪಾದ್ಯನೂ ಆಗಿರುವನು.

**ಗಾಯತ್ರಿಯ ವಿಸರ್ಜನೆ:**

ಪೂಜೆ ಆದಮೇಲೆ ಆವಾಹಿತ ದೇವತೆಗಳನ್ನು 'ಯಥಾಸ್ಥಾನಮುದ್ವಾಸಯಾಮಿ' ಎಂದು ಕಳುಹಿಸಿಕೊಡುವಂತೆ, ಜಪಕ್ಕಾಗಿ ಆವಾಹಿಸಿದ ಗಾಯತ್ರಿಯನ್ನು ವಿಸರ್ಜನೆ ಮಾಡಬೇಕು. ಅದರ ವಿನಿಯೋಗದಲ್ಲಿ ಇರುವ ಮಂತ್ರ–

**ಉತ್ತಮೇ ಶಿಖರೇ ಜಾತೇ ಭೂಮ್ಯಾಂ ಪರ್ವತಮೂರ್ಧನಿ ।**
**ಬ್ರಾಹ್ಮಣೇಭ್ಯೋಽಭ್ಯನುಜ್ಞಾತಾ ಗಚ್ಛ ದೇವಿ ಯಥಾಸುಖಮ್ ॥**

ನಾರಾಯಣೋಪನಿಷತ್ತಿನ ಅಣುಪಾಠದ ಪ್ರಕಾರ 'ಜಾತೇ' ಶಬ್ದದ ಸ್ಥಾನದಲ್ಲಿ 'ದೇವಿ' ಎಂಬುದಾಗಿಯೂ 'ಬ್ರಾಹ್ಮಣೇಭ್ಯೋ ಹ್ಯನುಜ್ಞಾನಂ' ಎಂದೂ ಇದೆ. ಸಾಯಣಭಾಸ್ಕರಾದಿಗಳೂ ಶ್ರೀವೈಷ್ಣವರೂ ಆ ಪಾಠವನ್ನೇ ಇಟ್ಟುಕೊಂಡಿರುವರು.

ಭೂಮಿಯಲ್ಲಿರುವ ಪರ್ವತದ ಶ್ರೇಷ್ಠ ಶಿಖರದಲ್ಲಿ ಹುಟ್ಟಿಬಂದವಳೆಂಬುದು ಯಾವುದೋ ನದಿಯನ್ನು ವರ್ಣಿಸಿರುವಂತೆ ಮೇಲ್ನೋಟಕ್ಕೆ ಕಾಣಿಸುವುದು. ಆದರೆ ಗಾಯತ್ರೀ ಶಬ್ದ ವಾಚ್ಯನಾಗಿ ಭಗವಂತನ ಸ್ತ್ರೀರೂಪವನ್ನು ಇಟ್ಟುಕೊಂಡಾಗ ಇದು ಸ್ವಾರಸಿಕ ಅರ್ಥದಲ್ಲಿ ತೆರೆದುಕೊಳ್ಳಬಲ್ಲದು. ಮಹಾನಾರಾಯಣೋಪನಿಷತ್ ಪ್ರತಿಪಾದ್ಯನಾದ ನಾರಾಯಣನೇ ಈ ಮಂತ್ರದಿಂದಲೂ ಪ್ರತಿಪಾದ್ಯನಾಗಿರುವನು.

'ತ್ರಿಪಾದ್' ಎನಿಸಿರುವ ಭಗವಂತನಿಗೆ ಅನಂತಾಸನ, ಶ್ವೇತದ್ವೀಪ ಹಾಗೂ ವೈಕುಂಠ ಎಂಬುದಾಗಿ ಮೂರು ಲೋಕಗಳು. ಇವುಗಳಲ್ಲಿ ಅನಂತಾಸನ ಭೂಮಿಗೆ ಸಂಬಂಧಿಸಿದ್ದಾದರೆ, ಶ್ವೇತದ್ವೀಪ ಅಂತರಿಕ್ಷಕ್ಕೆ ಸಂಬಂಧಿಸಿದ್ದು, ವೈಕುಂಠ ಸತ್ಯ ಲೋಕಕ್ಕಿಂತಲೂ ಮೇಲೆ ಇರುವಂತಹದ್ದು. ಭೂಮಿಯಲ್ಲಿ ಉಪಾಸನೆ ನಡೆಸುವಾಗಲೂ ಭೂಲೋಕಕ್ಕೆ ಸಂಬಂಧಿಸಿದಂತೆ ಮೇರುಪರ್ವತದ ಶಿಖರದಲ್ಲಿರುವ

ನಾರಾಯಣರೂಪವನ್ನು ಗಾಯತ್ರಿಯಲ್ಲಿ ಆವಾಹಿಸುವುದು ಸಹಜ. ಅನಂತಾಸನ ಭೂಮಿಯಲ್ಲಿಯೇ ಇರುವಂತಹದ್ದಾದರೂ ಅತ್ಯಂತ ಎತ್ತರದಲ್ಲಿರುವುದರಿಂದ ಹಾಗೂ ಬಾಹ್ಯ ದೃಷ್ಟಿಗೆ ಕಾಣಿಸದೆ ಅಪ್ರಾಕೃತವಾಗಿರುವುದರಿಂದಲೂ ಅನಂತಾಸನವುಳ್ಳ ಮೇರುಪರ್ವತದ ಶಿಖರ ಉತ್ತಮ ಎನಿಸಿದೆ. ಅಂತಹ ಅನಂತಾಸನದಲ್ಲಿ ಗಾಯತ್ರೀಪ್ರತಿಪಾದ್ಯ ಸ್ತ್ರೀರೂಪದಲ್ಲಿ ಅಭಿವ್ಯಕ್ತಳಾಗಿ ಬ್ರಾಹ್ಮಣರ, ಬ್ರಹ್ಮಜ್ಞಾನಿಗಳ ಗಾಯತ್ರೀಜಪಾನುಷ್ಠಾನಕ್ಕೆ ಅನುಕೂಲತೆಯನ್ನು ಒದಗಿಸಲು ಬಂದಿರುವಳು. ಗಾಯತ್ರೀಜಪಾನುಷ್ಠಾನ ಮುಗಿದಿದೆ. ಆದ್ದರಿಂದ ಬ್ರಾಹ್ಮಣರು 'ಅಭ್ಯನುಜ್ಞಾನ' ನಡೆಸಿದ್ದಾರೆ. ಅಂದರೆ ನಾಳೆ ಪುನಃ ಜಪಾನುಷ್ಠಾನಕ್ಕಾಗುವಾಗ ಬರಬೇಕೆಂದು ಪ್ರಾರ್ಥಿಸಿಕೊಂಡು, ತೆರಳಲು ವಿನಂತಿಸಿಕೊಂಡಿರುವರು. ಆದ್ದರಿಂದ ದೇವಿ, ನಿನ್ನ ಸ್ಥಾನಕ್ಕೆ ಅನಂತಾಸನಕ್ಕೆ 'ಯಥಾಸುಖಮ್' ಭಕ್ತರಿಗೆ ಹೇಗೆ ಸುಖವಾದೀತೋ ಹಾಗೆ, ಹೊರತು ದೇವಿಗೆ ಹೇಗೆ ಸುಖವಾದೀತೋ ಹಾಗೆ ಎಂಬ ಅರ್ಥವಲ್ಲ. ಸುಖಪೂರ್ಣಳಾದ ದೇವಿಗೆ ಸುಖ ಆಗದಿರುವ ಸಂಭವವೇ ಇಲ್ಲ. ಆದ್ದರಿಂದ ಭಕ್ತರಿಗೆ ಸ್ವರೂಪದ ಆವಿರ್ಭಾವ ಹೇಗೆ ಆದೀತೋ ಹಾಗೆ ನಡೆದುಕೊಳ್ಳು ಎಂದು ಪ್ರಾರ್ಥನೆಯನ್ನು ಗಾಯತ್ರೀರೂಪದ ಭಗವಂತನಲ್ಲಿ ಸಲ್ಲಿಸಲಾಗುವುದು.

ಮತ್ತೊಂದು ಮಂತ್ರ ೬೪ ಅನುವಾಕಗಳ ಪುಸ್ತಕಗಳಲ್ಲಿ ಇಲ್ಲ. ೮೦ ಅನುವಾಕಗಳ ಪುಸ್ತಕದಲ್ಲಿ ಇದೆ.

ಸ್ತುತೋ ಮಯಾ ವರದಾ ವೇದಮಾತಾ
ಪ್ರಚೋದಯಂತೀ ಪವನೇ ದ್ವಿಜಾತಾ ।
ಆಯುಃ ಪೃಥಿವ್ಯಾಂ ದ್ರವಿಣಂ ಬ್ರಹ್ಮವರ್ಚಸಂ
ಮಹ್ಯಂ ದತ್ವಾ ಪ್ರಜಾತುಂ ಬ್ರಹ್ಮಲೋಕಮ್ ।

ಗಾಯತ್ರಿಯು ವೇದಮಾತೆ. ಗಾಯತ್ರಿ ಎನಿಸುವ ಭಗವಂತನೂ ವೇದಗಳನ್ನು ಆವಿಷ್ಕಾರಗೊಳಿಸುವವನಾದುದರಿಂದ ವೇದಗಳ ಮಾತೃಸ್ಥಾನದಲ್ಲಿರುವವನು. ಗಾಯತ್ರೀಮಂತ್ರದ ಮೂಲಕ ಉಪಾಸನೆ ನಡೆಸುವ ಭಕ್ತರಿಗೆ ವರಗಳನ್ನು ಅನುಗ್ರಹಿಸುವವನು. ಅಂತಹ ನೀನು ನನ್ನಿಂದ ಗಾಯತ್ರೀಮಂತ್ರದ ಮೂಲಕ ಸ್ತುತಿಸಲ್ಪಟ್ಟಿರುವಿ.

ಅಥರ್ವವೇದದಲ್ಲಿ 'ಸ್ತುತಾ ಮಯಾ......' ಎಂದು ಸ್ತ್ರೀಲಿಂಗದಲ್ಲೇ ಇರುವುದಾದರೂ ಇಲ್ಲಿ 'ಸ್ತುತೋ ಮಯಾ.......' ಎಂಬುದಾಗಿ ಪುಲ್ಲಿಂಗವನ್ನು ಬಳಸಿರುವುದು ಇಲ್ಲಿ ಗಾಯತ್ರೀಯಾಗಿ ಪ್ರಸ್ತುತನಾಗಿರುವವನು ಸ್ತ್ರೀರೂಪದ ಪರಮಾತ್ಮ. ಆದುದರಿಂದ ಇಲ್ಲಿ ಲಿಂಗದ ವಿವಕ್ಷೆ ಇಲ್ಲ ಎಂದು ಸೂಚಿಸಿಕೊಡುವ ಉದ್ದೇಶದಿಂದ.

ಹೇ ದೇವಿ! ನೀನು 'ಪ್ರಚೋದಯಂತೀ' ನಮ್ಮನ್ನು ಪ್ರೇರಿಸುವವಳು. ಆದರೆ ನೇರವಾಗಿ ಅಲ್ಲ. 'ಪವನೇ' ನಮ್ಮ ಪ್ರಾಣಶಕ್ತಿಯಲ್ಲಿದ್ದುಕೊಂಡು ನಮಗೆ ಬೇರೆ ಬೇರೆ ಚಟುವಟಿಕೆಗಳಿಗೆ ಬೇಕಾದ ಪ್ರಚೋದನೆ ನೀಡುವವಳು. ನೀನು 'ದ್ವಿಜಾತಾ',

ಅಂದರೆ ಬ್ರಹ್ಮಾಂಡದೊಳಗಿರುವ ಅನಂತಾಸನ ಹಾಗೂ ಶ್ವೇತದ್ವೀಪದಲ್ಲಿ ಎರಡು ರೂಪಗಳಿಂದ ಅಭಿವ್ಯಕ್ತಳಾಗಿರುವವಳು. ಇನ್ನು ಗಾಯತ್ರೀಪ್ರತಿಪಾದ್ಯಳಾಗಿ ಹಾಗೂ ಸಕಲಶಾಸ್ತ್ರಪ್ರತಿಪಾದ್ಯಳಾಗಿ ಎರಡು ಸ್ತ್ರೀರೂಪಗಳಿಂದ ಅಭಿವ್ಯಕ್ತಳಾಗಿರುವವಳು. ಹಾಗೆಯೇ ಆಧ್ಯಾತ್ಮಿಕವಾಗಿ 'ಆತ್ಮಾ' 'ಅಂತರಾತ್ಮಾ' –ಎಂಬ ಎರಡು ರೂಪಗಳಿಂದ ಶರೀರದೊಳಗೆ ಹಾಗೂ ಜೀವಸ್ವರೂಪದೊಳಗೆ ಅಂತರ್ಯಾಮಿಯಾಗಿ ಅಭಿವ್ಯಕ್ತಳಾಗಿರುವವಳು.

ನಾನು ನಿನ್ನನ್ನು ಯಾಕೆ ಸ್ತುತಿಸಿದ್ದೇನೆ? ಅಂದರೆ ನನಗೆ ಆಯುಷ್ಯ, ಸಂಪತ್ತು ಹಾಗೂ ಬ್ರಹ್ಮವರ್ಚಸ್ಸನ್ನು ಅನುಗ್ರಹಿಸು ಎಂದು. ಆಯುಷ್ಯ ಎಂದರೆ ಎಂದೆಂದೂ ಇರುವಿಕೆ 'ಸರ್ವಾಯುಷ್ಯ' ಹುಟ್ಟುಸಾವುಗಳ ತವರೂರಾದ ಈ ಪೃಥಿವಿಯಲ್ಲಿ ಇದ್ದುಕೊಂಡೂ ಅಂತಹ ಸರ್ವಾಯುಷ್ಯ ಎನಿಸುವ ಅಮೃತತ್ವವನ್ನು ಪಡೆಯುವಂತಾಗಬೇಕು. ಅಂತಹ ಸ್ಥಿತಿಗಾಗಿ ಬೇಕಾದ 'ದ್ರವಿಣ' ಎಂದರೆ 'ವಿತ್ತಂ ವಿದ್ಯಾಧನಾತ್ಮಕಮ್' ಎಂದು ಶ್ರೀಮದಾಚಾರ್ಯರು ತಿಳಿಸಿರುವಂತೆ ಮುಖ್ಯವಾಗಿ ಬೇಕಾದದ್ದು ವಿದ್ಯಾರೂಪದ ಸಂಪತ್ತು. ಅದರಿಂದಷ್ಟೇ ಬ್ರಹ್ಮವರ್ಚಸ್ಸನ್ನು ಪಡೆಯಬಹುದು. ಬ್ರಹ್ಮವರ್ಚಸ್ಸು ಅಂದರೆ, ಬ್ರಹ್ಮನು ನಮ್ಮನ್ನು ವರಣ ಮಾಡಿದುದರಿಂದ, ಸ್ವೀಕಾರಮಾಡಿದುದರಿಂದ ಅಭಿವ್ಯಕ್ತವಾಗುವ ನಮ್ಮ ಸ್ವಭಾವ, ಜ್ಞಾನಾನಂದಸ್ವರೂಪ. ಗಾಯತ್ರಿಯ ಉಪಾಸನೆಯಿಂದ ಇದನ್ನು ಅನುಗ್ರಹಿಸು.

ಪ್ರಾರ್ಥನೆಯ ಮತ್ತೊಂದು ಅಂಶ 'ಪ್ರಜಾತುಂ ಬ್ರಹ್ಮಲೋಕಮ್'. ಪ್ರಜಾತುಂ ಅಂದರೆ 'ಪ್ರಜನಯಿತುಂ' ಅಭಿವ್ಯಕ್ತಗೊಳಿಸುವುದಕ್ಕಾಗಿ. ಯಾವುದರದ್ದು? 'ಬ್ರಹ್ಮಲೋಕಮ್' 'ಲೋಕೃ ದರ್ಶನೇ' ಎಂಬ ಧಾತುವಿನಿಂದ ನಿಷ್ಪನ್ನವಾದ ಲೋಕ ಶಬ್ದಕ್ಕೆ ಜ್ಞಾನ ಎಂದು ಅರ್ಥ. ಜ್ಞಾನಸ್ವರೂಪಿಯಾದ ಬ್ರಹ್ಮನ ಅಭಿವ್ಯಕ್ತಿಗಾಗಿ, ಸಾಕ್ಷಾತ್ಕಾರಕ್ಕಾಗಿ ನಾನು ನಿನ್ನನ್ನು ಸ್ತುತಿಸಿದೆ. ಅದನ್ನು ಅನುಗ್ರಹಿಸಿ, ಆಯುಷ್ಯಾದಿಗಳನ್ನು ನೀಡು. ಗಾಯತ್ರಿಯ ಉಪಾಸನೆಯ ಫಲ ಇದೇ ಹೊರತು ಇನ್ನೇನೂ ಬೇಡ ಎಂದು ಪ್ರಾರ್ಥಿಸಿ ಗಾಯತ್ರೀಸ್ವರೂಪದ ಭಗವಂತನನ್ನು ಹೃದಯದಿಂದ ಅನಂತಾಸನಕ್ಕೆ ಕಳುಹಿಸಿಕೊಡುವುದು –ಇದೇ ಗಾಯತ್ರಿಯ ವಿಸರ್ಜನೆ. *

## ಗಾಯತ್ರೀತಂತ್ರದ ಹತ್ತು ಪಟಲದ ವಿಷಯ

ಹತ್ತು ಪಟಲಗಳಲ್ಲಿ ಕ್ರಮವಾಗಿ –೨೪ ಅಕ್ಷರಗಳ ಋಷಿಛಂದೋದೇವತಾ ವಿಚಾರ, ೨೪ ಅಕ್ಷರಗಳ ಶಕ್ತಿ ವರ್ಣತತ್ವ ಮುದ್ರಾವಿಷಯ, ಅಂಗನ್ಯಾಸ-ಧ್ಯಾನ-ಪದಾಕ್ಷರಗಳಿಂದ ಕವಚಮಂತ್ರ, ಗಾಯತ್ರೀಹೃದಯ (ಖಂಡವಾಕ್ಯಗಳಲ್ಲಿ), ಗಾಯತ್ರೀ ಸ್ತೋತ್ರ, ಅ ಆ ಇ ಈ ಕ್ರಮದಲ್ಲಿ ಸಾವಿರದೆಂಟು ನಾಮಾವಳಿ (ಣದ ಬದಲಿಗೆ ನಕಾರದಲ್ಲಿ ಇದೆ, ಕ್ಷಕಾರವು ಕೊನೆಯಲ್ಲಿದೆ), ದೀಕ್ಷಾವಿಧಾನದ ಜತೆ ಕುಂಡಸಂಸ್ಕಾರದ ಭೂತಶುದ್ಧಿಪ್ರಕಾರ, ಪುರಶ್ಚರಣೆ, ಶಾಂತಿಪ್ರಯೋಗಕ್ರಮ ಬಂದಿದೆ.

# ಅಗ್ನಿಪುರಾಣದ ಗಾಯತ್ರಿ

ಸಗ್ರಿ ರಾಘವೇಂದ್ರ ಉಪಾಧ್ಯಾಯ

ಅಗ್ನಿಪುರಾಣದ ಮೂರು ಅಧ್ಯಾಯಗಳಲ್ಲಿ (೨೧೫, ೨೧೬, ೨೧೭) ಗಾಯತ್ರಿಯ ಬಗ್ಗೆ ತಿಳಿಸಲಾಗಿದೆ. ಗಾಯತ್ರಿಯ ಸ್ವರೂಪ, ಅದರ ದೇವತೆಗಳು, ಅದರ ಅರ್ಥಚಿಂತನೆ, ವಿನಿಯೋಗ ಮತ್ತು ಪ್ರಯೋಜನ –ಇಷ್ಟು ವಿಷಯದಲ್ಲಿ ಮಾಹಿತಿಗಳು ದೊರಕುವವು.

## ಗಾಯತ್ರಿಯ ಸ್ವರೂಪ:

ಗಾಯತ್ರಿಯ ದೇವತೆಯನ್ನು ಹೀಗೆ ವರ್ಣಿಸಲಾಗಿದೆ:

**ಶುಕ್ಲಾ ಚಾಗ್ನಿಮುಖೀ ದಿವ್ಯಾ ಕಾತ್ಯಾಯನಸಗೋತ್ರಜಾ ।**
**ತ್ರೈಲೋಕ್ಯವರಣಾ ದಿವ್ಯಾ ಪೃಥಿವ್ಯಾಧಾರಸಂಯುತಾ ।**
**ಅಕ್ಷಸೂತ್ರಧರಾ ದೇವೀ ಪದ್ಮಾಸನಗತಾ ಶುಭಾ ॥**

ಶುಭ್ರವರ್ಣ. ಅಗ್ನಿಯಂತೆ ಉಜ್ಜ್ವಲವಾದ ಮುಖ. ಕಾತ್ಯಾಯನ ಗೋತ್ರದಲ್ಲಿ ಪ್ರಾದುರ್ಭಾವ. ಮೂರುಲೋಕಗಳಲ್ಲೂ ಪ್ರಾರ್ಥಿಸಲ್ಪಡುವವಳು. ಪೃಥಿವಿಯಲ್ಲಿ ವಿಶ್ವಾಮಿತ್ರರ ಮೂಲಕ ಪ್ರಸಿದ್ಧಳಾದವಳು. ಅಕ್ಷಮಾಲೆಯನ್ನು ಧರಿಸಿರುವವಳು. ಪದ್ಮಾಸನ ಹಾಕಿರುವವಳು.

ಗಾಯತ್ರಿಯ ಪ್ರತಿಪಾದ್ಯ ಭಗವಂತನ ಸ್ತ್ರೀರೂಪವನ್ನಾಗಲೀ ಗಾಯತ್ರಿಯ ಅಭಿಮಾನಿದೇವತೆಗಳನ್ನಾಗಲೀ ವರ್ಣಿಸಿರುತ್ತಿರುವ ಈ ಸ್ತುತಿಯನ್ನು ಮಹಾನಾರಾಯಣೋಪನಿಷತ್ತಿನಲ್ಲಿ ಬಂದಿರುವಂತೆ ವ್ಯಾಖ್ಯಾನಿಸಿಕೊಳ್ಳಬೇಕು.

ಶುಭ್ರ ಎಂಬ ಅರ್ಥದಲ್ಲಷ್ಟೆ ಗಾಯತ್ರೀದೇವಿಯನ್ನು 'ಶುಕ್ಲಾ' ಎಂದು ಕರೆದಿದ್ದರೂ ಮಹಾನಾರಾಯಣೋಪನಿಷತ್ತಿನಲ್ಲಿ 'ಸರ್ವವರ್ಣೇ' ಎಂದು ಉಲ್ಲೇಖಿಸಿರುವಂತೆ ಎಲ್ಲ ಬಣ್ಣಗಳನ್ನು ಒಳಗೊಂಡವಳು ಗಾಯತ್ರೀ.

ಧ್ಯಾನಕಾಲದಲ್ಲಿ ಚಿಂತಿಸಬೇಕಾದ ಗಾಯತ್ರಿಯ ೨೪ ಅಂಗಗಳಲ್ಲಿ ೨೪ ಬಣ್ಣಗಳನ್ನು ಉಲ್ಲೇಖಿಸಲಾಗಿದೆ.

**ಪಾದಾಂಗುಷ್ಠೌ ಚ ಗುಲ್ಫೌ ಚ ನಲಕೌ ಜಾನುನೀ ತಥಾ ।**
**ಜಂಘೇ ಶಿಶ್ನಶ್ಚ ವೃಷಣೌ ಕಟಿರ್ನಾಭಿಸ್ತಥೋದರಮ್ ॥**
**ಸ್ತನೌ ಚ ಹೃದಯಂ ಗ್ರೀವಾ ಮುಖಂ ತಾಲು ಚ ನಾಸಿಕಾ ।**
**ಚಕ್ಷುಷೀ ಚ ಭ್ರುವೋರ್ಮಧ್ಯಂ ಲಲಾಟಂ ಪೂರ್ವಮಾನನಮ್ ॥**
**ದಕ್ಷಿಣೋತ್ತರಪಾರ್ಶ್ವೇ ದ್ವೇ ಶಿರ ಆಸ್ಯಮನುಕ್ರಮಾತ್ ।**
**ಪೀತಃ ಶ್ಯಾಮಶ್ಚ ಕಪಿಲೋ ಮಾರಕತೋಽಗ್ನಿಸನ್ನಿಭಃ ।**

ರುಕ್ಮವಿದ್ಯುದ್ಧೂಮ್ರಕೃಷ್ಣರಕ್ತಗೌರೇಂದ್ರನೀಲಭಾಃ ।
ಸ್ಫಾಟಿಕಸ್ವರ್ಣಪಾಂಡ್ವಾಭಾಃ ಪದ್ಮರಾಗೋಽಖಿಲದ್ಯುತಿಃ ।
ಹೇಮಧೂಮ್ರರಕ್ತನೀಲರಕ್ತಕೃಷ್ಣಸುವರ್ಣಭಾಃ ।
ಶುಕ್ಲಕೃಷ್ಣಪಲಾಶಾಭಾ ಗಾಯತ್ರ್ಯಾಃ ವರ್ಣಕಾಃ ಕ್ರಮಾತ್ ।
ಧ್ಯಾನಕಾಲೇ ಪಾಪಹರಾ ಸ್ಮೃತ್ಯೈಷಾ ಸರ್ವಕಾಮದಾ ॥

ವಿಶ್ವಾಮಿತ್ರರು ಗಾಯತ್ರೀಮಂತ್ರದ ಋಷಿಗಳು. ಗಾಯತ್ರೀ ಛಂದಸ್ಸು ಸವಿತೃ ದೇವತೆ ಎಂದು ಗಾಯತ್ರಿಯ ಋಷ್ಯಾದಿಗಳನ್ನು ಪರಿಚಯಿಸಿಕೊಡಲಾಗುವ ಇಲ್ಲಿ 'ಸಾವಿತ್ರ್ಯಾಸ್ತು ಪರಂ ನಾಸ್ತಿ' 'ನ ಗಾಯತ್ರ್ಯಾಃ ಪರಂ ಜಪ್ಯಂ'.... ಮುಂತಾದ ಮಾತುಗಳಲ್ಲಿ ಗಾಯತ್ರಿಯ ಹಿರಿಮೆಯನ್ನು ಸಾರಲಾಗಿದೆ.

ಗಾಯತ್ರೀಮಂತ್ರವೇ ಸಾವಿತ್ರೀ ಸರಸ್ವತೀ ಎಂಬ ಹೆಸರನ್ನು ಹೇಗೆ ಪಡೆದಿದೆ ಎಂಬುದನ್ನು ತಿಳಿಸಲಾಗಿದೆ.

ಗಾಯನ್ ಶಿಷ್ಯಾನ್ ಯತಸ್ತ್ರಾಯೇತ್ ಗಾಯಃ ಪ್ರಾಣಾಂಸ್ತಥೈವ ಚ ।
ತತಃ ಸ್ಮೃತೇಯಂ ಗಾಯತ್ರೀ...

ತನ್ನ ಮೂಲಕ ಗಾನನಡೆಸುವ ಶಿಷ್ಯರನ್ನು ಅವರ ಪ್ರಾಣಗಳನ್ನು ರಕ್ಷಿಸುವ ಪ್ರಯುಕ್ತ ಗಾಯತ್ರೀಮಂತ್ರ ಗಾಯತ್ರೀ ಎನಿಸಿದೆ.

.......ಸಾವಿತ್ರೀಯಂ ತತೋ ಯತಃ । ಪ್ರಕಾಶನಾತ್ ಸಾ ಸವಿತುಃ......

ಗಾಯತ್ರೀಪ್ರತಿಪಾದ್ಯ ಸವಿತೃನಾಮಕ ಭಗವಂತನನ್ನು ಬೆಳಗಿಸುವ ಪ್ರಯುಕ್ತ ಗಾಯತ್ರೀಮಂತ್ರ ಸಾವಿತ್ರೀ ಎನಿಸಿದೆ.

........ವಾಗ್ರೂಪತ್ವಾತ್ ಸರಸ್ವತೀ ।

ಮಾತಿನ ರೂಪದಲ್ಲಿರುವುದರಿಂದ ಸರಸ್ವತೀ ಎನಿಸಿದೆ.

## ಗಾಯತ್ರಿಯ ದೇವತೆಗಳು:

'ಸವಿತಾ ದೇವತಾ' ಎಂಬುದಾಗಿ ಗಾಯತ್ರಿಯ ಮುಖ್ಯ ಪ್ರತಿಪಾದ್ಯ ಸವಿತೃ ಎನಿಸುವ ಭಗವಂತನು. ಅವನು ಗಾಯತ್ರಿಯಲ್ಲಿ ವಾಕ್ಯಸಮನ್ವಯ ದೃಷ್ಟಿಯಿಂದಷ್ಟೇ ಅಲ್ಲದೆ ಅಕ್ಷರಸಮನ್ವಯ ದೃಷ್ಟಿಯಿಂದಲೂ ಪ್ರತಿಪಾದ್ಯನು ಎಂದು ಅಭಿಪ್ರಾಯಪಡುವ ಅಗ್ನಿಪುರಾಣದಲ್ಲಿ ಗಾಯತ್ರಿಯ ೨೪ ಅಕ್ಷರಗಳಿಂದ ಅಮುಖ್ಯವಾಗಿ ಪ್ರತಿಪಾದ್ಯರಾದ ದೇವತೆಗಳನ್ನೂ ಉಲ್ಲೇಖಿಸಲಾಗಿದೆ.

ಅಗ್ನಿರ್ವಾಯೂ ರವಿರ್ವಿದ್ಯುದ್ಯಮೋ ಜಲಪತಿರ್ಗುರುಃ ।
ಪರ್ಜನ್ಯ ಇಂದ್ರೋ ಗಂಧರ್ವಃ ಪೂಷಾ ಚ ತದನಂತರಮ್ ।
ಮಿತ್ರೋಽಥ ವರುಣಸ್ತ್ವಷ್ಟಾ ವಸವೋ ಮರುತಃ ಶಶೀ ।
ಅಂಗಿರಾ ವಿಶ್ವನಾಸತ್ಯೌ ಕಸ್ತಥಾ ಸರ್ವದೇವತಾಃ ।

ರುದ್ರೋ ಬ್ರಹ್ಮಾ ಚ ವಿಷ್ಣುಶ್ಚ ಕ್ರಮಶೋಽಕ್ಷರದೇವತಾಃ ।
ಗಾಯತ್ರ್ಯಾ ಜಪಕಾಲೇ ತು ಕಥಿತಾಃ ಪಾಪನಾಶನಾಃ ।

ಅಗ್ನಿ ಮುಂತಾದ ೨೪ ದೇವತೆಗಳನ್ನು ಜಪಮಾಡುವಾಗ ಸ್ಮರಿಸಿದಲ್ಲಿ ಪಾಪಪರಿಹಾರ ಆಗುವುದೆಂಬ ಫಲವನ್ನು ಸೂಚಿಸಲಾಗಿದೆ.

**ಅರ್ಥಚಿಂತನೆ:**

'ಭಾ ದೀಪ್ತೌ' 'ಭ್ರಸ್ಜ ಪಾಕೇ' 'ಭ್ರಾಜೃ ದೀಪ್ತೌ' –ಈ ಮೂರು ಧಾತುಗಳನ್ನು ಉಲ್ಲೇಖಿಸಿ ಭರ್ಗಃ ಎಂಬ ಶಬ್ದವು ತುಂಬ ಪ್ರಕಾಶಿಸುವವನು, ಸಸ್ಯಾದಿಗಳ ಪಾಕಕ್ಕೆ ಕಾರಣನಾಗಿರುವವನು ಎಂಬ ಅರ್ಥದಲ್ಲಿ ಜ್ಯೋತಿಃ ಸ್ವರೂಪಿಯಾದ ಪರಬ್ರಹ್ಮನನ್ನು ತಿಳಿಸುವುದೆಂದು ಹೇಳಲಾಗಿದೆ.

ಎಲ್ಲ ತೇಜಸ್ಸುಗಳಿಗಿಂತಲೂ ಶ್ರೇಷ್ಠವಾಗಿರುವುದರಿಂದ ಹಾಗೂ ಸ್ವರ್ಗ, ಮೋಕ್ಷ ಮುಂತಾದವನ್ನು ಅಪೇಕ್ಷಿಸುವವರೆಲ್ಲರಿಂದಲೂ ಯಾವಾಗಲೂ ಸೇವಿಸಲ್ಪಡುವುದರಿಂದ 'ವರೇಣ್ಯಂ' ಎನಿಸುವ ಆ ಜ್ಯೋತಿಸ್ಸ್ವರೂಪನಾದ ಪರಮಾತ್ಮನನ್ನು ಮೋಕ್ಷಪುರುಷಾರ್ಥಕ್ಕಾಗಿ ಧ್ಯಾನಿಸುವೆವು.

ಆ ಜ್ಯೋತಿ ಜಗತ್ತಿನ ಜನ್ಮಾದಿಗಳಿಗೆ ಕಾರಣನಾದ ವಿಷ್ಣುವೇ ಹೊರತು ಮತ್ತಾರೂ ಅಲ್ಲ.

ತಜ್ಜ್ಯೋತಿರ್ಭಗವಾನ್ ವಿಷ್ಣುರ್ಜಗಜ್ಜನ್ಮಾದಿಕಾರಣಮ್ ।

ಕೆಲವರು ಶಿವನನ್ನೂ, ಹಲವರು ಶಕ್ತಿಯನ್ನೂ, ಇತರರು ಅಗ್ನಿಯನ್ನೂ ಗಾಯತ್ರೀಮಂತ್ರಪ್ರತಿಪಾದ್ಯನೆಂದು ಹೇಳುವುದುಂಟು ಎಂದು ಅನುವಾದಿಸುವ ಪುರಾಣವು ವಿಷ್ಣುವೇ ಗಾಯತ್ರೀಪ್ರತಿಪಾದ್ಯ ಎಂದು ನಿರ್ಣಯಿಸಿದೆ.

ಅಗ್ನ್ಯಾದಿರೂಪೀ ವಿಷ್ಣುರ್ಹಿ ವೇದಾದೌ ಬ್ರಹ್ಮ ಗೀಯತೇ ।
ತತ್ಪದಂ ಪರಮಂ ವಿಷ್ಣೋರ್ದೇವಸ್ಯ ಸವಿತುಃ ಸ್ಮೃತಮ್ ॥

ಅಗ್ನಿ, ಸೂರ್ಯ ಮುಂತಾದವರನ್ನು ರೂಪಿಸುವ, ಸೃಷ್ಟಿಸಿ ನಿಯಮಿಸುತ್ತಿರುವ ಪರಬ್ರಹ್ಮವಿಷ್ಣುವೇ ವೇದ ಮುಂತಾದ ಸಕಲ ವಾಙ್ಮಯದಲ್ಲಿ ಸ್ತುತನಾಗಿರುವನು. ಅಂತಹ ವಿಷ್ಣುವೇ ಗಾಯತ್ರಿಯ 'ದೇವಸ್ಯ' 'ಸವಿತುಃ' ಮುಂತಾದ ಪದಗಳಿಂದ ವಾಚ್ಯನು.

ಮಹತ್ತತ್ತ್ವವೇ ಮುಂತಾದ ಜಗತ್ತು ಸಮರ್ಥನಾದ ಹರಿಯಿಂದಲೇ ಸೃಷ್ಟಿಸಲ್ಪಡುವುದರಿಂದ ಅವನೇ 'ಸವಿತೃ' ಎನಿಸುವನು.

ಮಹದಾದ್ಯಂ ಸೂಯತೇ ಹಿ ಸ್ವಯಂಜ್ಯೋತಿರ್ಹರಿಃ ಪ್ರಭುಃ ।

ಆ ವಿಷ್ಣುವೇ ಸೂರ್ಯ, ಅಗ್ನಿ ಮುಂತಾದವರ ಮೂಲಕ ನಮ್ಮ ಹಾಗೂ ಎಲ್ಲ ಪ್ರಾಣಿಗಳ ಬುದ್ಧಿಯನ್ನು ಬೇರೆ ಬೇರೆ ಕರ್ಮಗಳಲ್ಲಿ ಪ್ರೇರಿಸುವನು.

ನೋಽಸ್ಮಾಕಂ ಯಶ್ಚ ಭರ್ಗಶ್ಚ ಸರ್ವೇಷಾಂ ಪ್ರಾಣಿನಾಂ ಧಿಯಃ ।

**ಚೋದಯೇತ್ ಪ್ರೇರಯೇತ್ ಬುದ್ಧೀರ್ಭೋಕ್ತೃಣಾಂ ಸರ್ವಕರ್ಮಸು ।**
**ದೃಷ್ಟಾದೃಷ್ಟವಿಪಾಕೇಷು ವಿಷ್ಣುಃ ಸೂರ್ಯಾದಿರೂಪವಾನ್ ॥**

ಗಾಯತ್ರಿಯ ಧಿಯಃ ಎಂಬ ಶಬ್ದ ಉಪಲಕ್ಷಣ ಎಂದಿಟ್ಟುಕೊಂಡು ಒಳ್ಳೆಯ ಕರ್ಮ ಮುಂತಾದುವನ್ನು ತೆಗೆದುಕೊಳ್ಳಬೇಕೆಂದು ಸೂಚಿಸಲಾಗಿದೆ.

**ಜ್ಞಾನಾನಿ ಶುಭಕರ್ಮಾದೀನ್ ಪ್ರವರ್ತಯತಿ ಯಃ ಸದಾ ।**

ಜ್ಞಾನಗಳನ್ನೂ ಶುಭಕರ್ಮವೇ ಮುಂತಾದವುಗಳನ್ನೂ ಪ್ರೇರಿಸುವವನು ಶ್ರೀಹರಿ.

ಹೀಗೆ ವಿಷ್ಣುಪರವಾಗಿ ಗಾಯತ್ರ್ಯರ್ಥವನ್ನು ಸಮರ್ಥಿಸಿ ಮುಂದೆ ದರ್ಶನ ಭಾಷೆಯಲ್ಲಿ ವಸಿಷ್ಠರು ಗಾಯತ್ರಿಯ ಮೂಲಕ ನಡೆಸಿದ ಶಿವಪರವಾಗಿರುವಂತೆ ಕಾಣಿಸುವ ಸ್ತುತಿಯನ್ನು ಪ್ರಸ್ತುತಪಡಿಲಾಗಿದೆ.

## ವಿನಿಯೋಗ ಮತ್ತು ಪ್ರಯೋಜನ:

**.....ಉಪನಯೇ ಜಪ್ಯೇ ವಿನಿಯೋಗೋ ಹುತೇ ತಥಾ ।**

ಗಾಯತ್ರಿ ಮುಖ್ಯವಾಗಿ ಎತ್ತರದಲ್ಲಿರುವ ಪರಮಾತ್ಮನೆಡೆಗೆ ನಾಗಿಸುವುದಕ್ಕೆ ಅಂದರೆ ಪರಮಾತ್ಮನ ಪ್ರಜ್ಞೆಯನ್ನು ಹೆಚ್ಚುಮಾಡಿಕೊಳ್ಳುವುದಕ್ಕೆ ಪುಣ್ಯಸಂಪಾದನೆಗಾಗಿ ಹಾಗೂ ಪ್ರಾಯಶ್ಚಿತ್ತಾದಿ ರೂಪದಲ್ಲಿ ಹೋಮ ನಡೆಸಲು ವಿನಿಯೋಗಿಸಲ್ಪಡುವುದೆಂದು ಸಾಮಾನ್ಯವಾಗಿ ತಿಳಿಸಿ ಅದರ ಬಗ್ಗೆ ವಿಶೇಷ ಮಾಹಿತಿಯನ್ನು ನೀಡಲಾಗುವುದು.

ಜಪದಲ್ಲಿ ಯಾವ ಬಗೆಯ ಗಾಯತ್ರಿಯನ್ನು ಬಳಸಬೇಕು ಎಂಬುದನ್ನು ಪರಿಚಯಿಸಲಾಗಿದೆ.

**ಓಂಕಾರಂ ಪೂರ್ವಮುಚ್ಚಾರ್ಯ ಭೂರ್ಭುವಃಸ್ವಸ್ತಥೈವ ಚ ।**
**ಗಾಯತ್ರೀ ಪ್ರಣವಶ್ಚಾಂತೇ ಜಪೇ ಚೈವಮುದಾಹೃತಮ್ ॥**

ಇಲ್ಲಿ ಕೊನೆಯಲ್ಲೂ ಓಂಕಾರವನ್ನು ಜಪಿಸಬೇಕೆಂದು ತಿಳಿಸಲಾಗಿದೆ. ಆದರೆ ಪ್ರಮಾಣಾಂತರದ ವಿರೋಧ ಇರುವುದರಿಂದ ಸಂಧ್ಯಾವಂದನೆಯಲ್ಲಿ ಗಾಯತ್ರೀ ಜಪದಲ್ಲಿ ಕೊನೆಯಲ್ಲಿ ಓಂಕಾರ ಹೇಳುವ ಪದ್ಧತಿ ಇಲ್ಲ.

ಪಂಚಮಹಾಪಾತಕಗಳಲ್ಲಿನ ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಾಪಹಾರ ಹಾಗೂ ಗುರುಹಿರಿಯರ ಪತ್ನಿಯರ ಬಗ್ಗೆ ಕೆಟ್ಟರೀತಿಯ ನಡತೆ –ಈ ನಾಲ್ಕು ಮಹಾಪಾತಕಗಳು ಗಾಯತ್ರೀಜಪದಿಂದ ಪರಿಹಾರ ಹೊಂದುವವೆಂದು ತಿಳಿಸಲಾಗಿದೆ.

**ಬ್ರಹ್ಮಹತ್ಯಾ ಸುರಾಪಾನಂ ಸುವರ್ಣಸ್ತೇಯಮೇವ ಚ ।**
**ಗುರುದಾರಗಮಶ್ಚೈವ ಜಪ್ಯೇನೈವ ಪುನಾತಿ ಸಾ ।**

ಲಕ್ಷ ಸಂಖ್ಯೆಯಲ್ಲಿ ಜಪಿಸಿದಾಗ ಬ್ರಹ್ಮಹತ್ಯೆ ಗೋಹತ್ಯೆ ಮುಂತಾದ ಪಾತಕಗಳ ಪರಿಹಾರ ಸಾಧ್ಯ ಎಂದು ಮುಂದೆ ಸ್ಪಷ್ಟ ನೀಡಲಾಗಿದೆ.

**ಗೋಘ್ನಃ ಪಿತೃಘ್ನೋ ಮಾತೃಘ್ನೋ ಬ್ರಹ್ಮಹಾ ಗುರುತಲ್ಪಗಃ ।**
**ಬ್ರಹ್ಮಘ್ನಃ ಸ್ವರ್ಣಹಾರೀ ಚ ಸುರಾಪ್ನೋ ಲಕ್ಷಜಪ್ಯತಃ ।**

ನೂರು ಸಂಖ್ಯೆಯಲ್ಲಿ ಜಪಿಸಿದರೆ ಪಾಪಗಳ ಪರಿಹಾರ, ಸಾವಿರ ಜಪಿಸಿದರೆ ಉಪಪಾತಕಗಳ ಪರಿಹಾರ ಸಂಭವಿಸುವುದು.

**ಶತಂ ಜಪ್ತಾ ತು ಗಾಯತ್ರೀ ಪಾಪೋಪಶಮನೀ ಸ್ಮೃತಾ ।**
**ಸಹಸ್ರಂ ಜಪ್ತಾ ಸಾ ದೇವೀ ಉಪಪಾತಕನಾಶಿನೀ ॥**

ಯಾವ ದ್ರವ್ಯದಿಂದ ಹೋಮಮಾಡಿದಾಗ ಯಾವ ಫಲವನ್ನು ಹೊಂದ ಬಹುದೆಂಬ ಮಾಹಿತಿಯನ್ನು ನೀಡಲಾಗಿದೆ.

**ಗಾಯತ್ರ್ಯಾ ತು ತಿಲೈರ್ಹೋಮಃ ಸರ್ವಪಾಪಪ್ರಣಾಶನಃ ।**
**ಶಾಂತಿಕಾಮೋ ಯವೈಃ ಕುರ್ಯಾದಾಯುಷ್ಕಾಮೋ ಘೃತೇನ ಚ ॥**

ಬ್ರಹ್ಮಗಾಯತ್ರೀಮಂತ್ರದ ಮೂಲಕ ತಿಲಹೋಮ ಸರ್ವಪಾಪ ಪ್ರಾಯಶ್ಚಿತ್ತ ರೂಪದಲ್ಲಿ ಇದೆ. ಯವ ಹೋಮದಿಂದ ಶಾಂತಿಯು, ಆಜ್ಯ ಹೋಮದಿಂದ ಆಯುಷ್ಯವು ಸಿದ್ಧಿಸುವುದು.

**ಸಿದ್ಧಾರ್ಥಕೈಃ ಕರ್ಮಸಿದ್ಧ್ಯೈ ಪಯಸಾ ಬ್ರಹ್ಮವರ್ಚಸೇ ।**
**ಪುತ್ರಕಾಮಸ್ತಥಾ ದಧ್ನಾ ಧಾನ್ಯಕಾಮಸ್ತು ಶಾಲಿಭಿಃ ॥**

ಯಾವುದಾದರೂ ಕರ್ಮದ ಸಿದ್ಧಿಗಾಗಿ ಸಾಸಿವೆಯಿಂದ, ಬ್ರಹ್ಮವರ್ಚಸ್ಸಿನ ಸಿದ್ಧಿಗಾಗಿ ಹಾಲಿನಿಂದ, ಪುತ್ರಪ್ರಾಪ್ತಿಗಾಗಿ ಮೊಸರಿನಿಂದ, ಧಾನ್ಯಲಾಭಕ್ಕೆ ಭತ್ತದಿಂದ ಹೋಮಿಸಬೇಕು.

**ಕ್ಷೀರಿವೃಕ್ಷಸಮಿದ್ಭಿಸ್ತು ಗ್ರಹಪೀಡೋಪಶಾಂತಯೇ ।**
**ಧನಕಾಮಸ್ತಥಾ ಬಿಲ್ವೈಃ ಶ್ರೀಕಾಮಃ ಕಮಲೈಸ್ತಥಾ ।**
**ಆರೋಗ್ಯಕಾಮೋ ದೂರ್ವಾಭಿರ್ಗುರೂತ್ಪಾತೇ ಸ ಏವ ಹಿ ।**
**ಸೌಭಾಗ್ಯೇಚ್ಛುರ್ಗುಗ್ಗುಲುನಾ ವಿದ್ಯಾರ್ಥೀ ಪಾಯಸೇನ ಚ ।**
**ಅಯುತೇನೋಕ್ತಸಿದ್ಧಿಃ ಸ್ಯಾಲ್ಲಕ್ಷೇಣ ಮನಸೇಪ್ಸಿತಮ್ ।**
**ಕೋಟ್ಯಾ ಬ್ರಹ್ಮವಧಾನ್ಮುಕ್ತಃ ಕುಲೋದ್ಧಾರೀ ಹರಿರ್ಭವೇತ್ ॥**

ಅಶ್ವತ್ಥಾದಿ ಸಮಿತ್ತುಗಳಿಂದ ಗ್ರಹಪೀಡೆಯ ಪರಿಹಾರಕ್ಕಾಗಿ, ಬಿಲ್ವಫಲಗಳಿಂದ ಸಂಪತ್ತಿಗಾಗಿ, ಕಮಲಗಳಿಂದ ಕಾಂತಿಗಾಗಿ, ಗರಿಕೆಗಳಿಂದ ಆರೋಗ್ಯಕ್ಕಾಗಿ, ಗುಗ್ಗುಳ ದಿಂದ ಸೌಭಾಗ್ಯಕ್ಕಾಗಿ, ಪಾಯಸದಿಂದ ವಿದ್ಯಾಪ್ರಾಪ್ತಿಗಾಗಿ ಹೋಮಿಸಬೇಕು. ಹತ್ತು ಸಾವಿರ ಹೋಮಿಸಿದರೆ ಹೇಳಿದ ಫಲ ಸಿಗುವುದು. ಲಕ್ಷ ಹೋಮದಿಂದ ಬಯಸಿ ದ್ದನ್ನು ಪಡೆಯಬಹುದು. ಕೋಟಿ ಆಹುತಿಗಳಿಂದ ಬ್ರಹ್ಮಹತ್ಯೆಯ ಪಾಪದಿಂದಲೂ ಪರಿಹಾರ ದೊರೆಯುವುದು.

ಹೀಗೆ ಅಗ್ನಿಪುರಾಣದಲ್ಲಿ ಮೂರು ಅಧ್ಯಾಯಗಳಲ್ಲಿ ಸುಮಾರು ನೂರು ಶ್ಲೋಕಗಳಲ್ಲಿ ಉಳಿದ ಯಾವುದೇ ಪುರಾಣದಲ್ಲಿ ದೊರಕದಷ್ಟು ಹೆಚ್ಚು ಮಾಹಿತಿ ಗಾಯತ್ರಿಯ ಬಗ್ಗೆ ಸಿಗುವುದು.

*

## ರೂಪೋಪನ್ಯಾಸ

ಸಂಧ್ಯಾವಂದನದಲ್ಲಿಯ ಗಾಯತ್ರೀಮಂತ್ರದಿಂದ ಚಿಂತಿಸಬಹುದಾದ ಭಗವಂತನ ರೂಪಗಳೆಷ್ಟು? ಮೂವತ್ತಾರು.

ಇದೊಂದು ತುಂಬಾ ರೋಚಕ ಚಿಂತನೆ. ಪ್ರಣವ ಮತ್ತು ವ್ಯಾಹೃತಿಗಳೊಡನಿರುವ ಗಾಯತ್ರೀಮಂತ್ರಕ್ಕೆ ಕೆಲವು ಬಗೆಯಿಂದ ಹಲವು ಭಗವದ್ರೂಪಗಳು ಪ್ರತಿಪಾದ್ಯ ಗಳೆನಿಸಿವೆ. ಪ್ರಣವವನ್ನು ಒಂದಾಗಿ ಮೂರು ಅಕ್ಷರವಾಗಿ ಮತ್ತು ಎಂಟು ಅಕ್ಷರ ಗಳನ್ನಾಗಿ ನೋಡಬಹುದು. ಇದರಲ್ಲೂ ಬೇರೆ ಬೇರೆ ಭಗವದ್ರೂಪಾನುಸಂಧಾನ ಮಾಡಬಹುದು. ಪ್ರಣವ ಸಮಸ್ತ ಶಾಸ್ತ್ರಸಾರವಾಗಿ ಸರ್ವಶಾಸ್ತ್ರಪ್ರತಿಪಾದ್ಯನನ್ನು ತಿಳಿಸಿದೆ. ಮೂರು ವೇದದ ಸಾರವಾಗಿ ವೇದತ್ರಯ ಪ್ರತಿಪಾದ್ಯರೂಪಗಳನ್ನು ತಿಳಿಸಿದೆ. ವಿಶ್ವಾದಿ ಎಂಟು ರೂಪಗಳನ್ನು ತಿಳಿಸಿದೆ. ವ್ಯಾಹೃತಿಯನ್ನು ಒಂದಾಗಿ, ಮೂರಾಗಿ ಮತ್ತು ನಾಲ್ಕಾಗಿ ನೋಡಬಹುದು. ಚತುರ್ವೇದ ಪ್ರತಿಪಾದ್ಯರೂಪಗಳನ್ನು, ಇತಿಹಾಸ ತ್ರಯ ಪ್ರತಿಪಾದ್ಯರೂಪಗಳನ್ನು, ಬ್ರಹ್ಮಸ್ವರೂಪವನ್ನೂ ತಿಳಿಯಬಹುದು. ಗಾಯತ್ರೀ ಮಂತ್ರವನ್ನೂ ಒಂದಾಗಿ, ಪಾದತ್ರಯಾತ್ಮಕವಾಗಿ, ದಶಪದಿಯಾಗಿ, ಇಪ್ಪತ್ನಾಲ್ಕು ಅಕ್ಷರೋಪೇತವಾಗಿ ನೋಡಿದಾಗ ಹಯಗ್ರೀವರೂಪವನ್ನೊ, ಸೃಷ್ಟಿ-ಲಯ-ಸ್ಥಿತಿಪ್ರದ ರೂಪಗಳನ್ನೊ ಮತ್ಸ್ಯಾದಿಗಳನ್ನೊ ಕೇಶವಾದಿಗಳನ್ನೋ ಚಿಂತಿಸಬಹುದು.

ಪ್ರಣವಪ್ರತಿಪಾದ್ಯ – ೧, ೩, ೮

ವ್ಯಾಹೃತಿಪ್ರತಿಪಾದ್ಯ – ೧, ೩, ೪

ಗಾಯತ್ರೀಪ್ರತಿಪಾದ್ಯ – ೧, ೩, ೧೦, ೨೪

ವಿಶ್ವಾದಿಗಳ ಜತೆ ವಾಸುದೇವಾದಿಗಳನ್ನೂ ಸೇರಿಸಿ ಕೇಶವಾದಿಗಳ ಒಟ್ಟು ಸಂಖ್ಯೆ ೩೬ ಆಗುವುದು. ಇವೇ ಅಲ್ಲದೆ ಬೇರೆ ಬೇರೆ ಬಗೆಯಲ್ಲಿ ಇದರ ಆವೃತ್ತಿಯನ್ನು ನೋಡಿದರೆ ತುಂಬಾ ತುಂಬಾ ರೂಪಗಳು ಸಿಗ್ತವೆ. ಒಟ್ಟು ಆವೃತ್ತಿ ಸಂಖ್ಯೆಯೂ ೩೬ (೩ x ೩ x ೪).

ಪ್ರಣವಾಷ್ಟಾಕ್ಷರ ಪ್ರತಿಪಾದ್ಯರೂಪಗಳಿಂದ ಅಭಿವ್ಯಕ್ತಗೊಂಡ ಅಜಾದಿಗಳನ್ನೂ ಸೇರಿಸಿಕೊಂಡಲ್ಲಿ ನೂರು ರೂಪಗಳು ಗಾಯತ್ರೀಮಂತ್ರ ಜಪದಲ್ಲಿ ಯೋಚನೆಗೆ ಬರುತ್ತವೆ. ವಿಶ್ವಾದಿಗಳೆಂಟು, ವಾಸುದೇವಾದಿ ನಾಕು, ಮತ್ಸ್ಯಾದಿ ಹತ್ತು, ಕೇಶವಾದಿ ಇಪ್ಪತ್ನಾಕು, ಅಜಾದಿ ಐವತ್ತರ ಜತೆ ವಿಷ್ಣು, ಪರಂಜ್ಯೋತಿ, ಪರಂಬ್ರಹ್ಮ ಮತ್ತು ವಾಸುದೇವ. ಹೀಗೆಯೆ ಬಹಳ ಬಗೆಯಿಂದ ರೂಪಗಳನ್ನು ಉಪಾಸನೆಗೈಯಬಹುದು.

*— ಉಡುಪಿ ರಾಮನಾಥ ಆಚಾರ್ಯ*

# ರಾಮಾಯಣ ಗಾಯತ್ರಿಯ ಭಾಷ್ಯ

ಕೆ. ಹಯವದನ ಪುರಾಣಿಕ

ರಾಮಾಯಣವು ಮಂತ್ರಶ್ರೇಷ್ಠವಾದ ಗಾಯತ್ರಿಯ ಭಾಷ್ಯರೂಪದಲ್ಲಿದೆ ಎಂಬುದು ಆಸ್ತಿಕರ ನಂಬಿಕೆ. ಗಾಯತ್ರಿಯಲ್ಲಿ ಇಪ್ಪತ್ತನಾಲ್ಕು ಅಕ್ಷರಗಳಿದ್ದು, ವಾಲ್ಮೀಕಿ ರಾಮಾಯಣವಾದರೂ ಇಪ್ಪತ್ತನಾಲ್ಕು ಸಾವಿರ ಶ್ಲೋಕಗಳನ್ನೊಳಗೊಂಡಿರುವುದರಿಂದಲೇ ರಾಮಾಯಣವು ಗಾಯತ್ರಿಯ ಭಾಷ್ಯವೆನಿಸಿರುವುದೆಂದು ವ್ಯಾಖ್ಯಾನಕಾರರು ಸಮರ್ಥಿಸಿರುವರು. ಆದರೆ ಗಾಯತ್ರಿ ಮತ್ತು ರಾಮಾಯಣಗಳ ನಡುವೆ ಇಷ್ಟು ಮಾತ್ರ ಸಂಬಂಧವಿರುವುದಲ್ಲ. ಗಾಯತ್ರಿಯ ಒಂದೊಂದೂ ವಿಶೇಷಣವೂ ಸಾರುತ್ತಿರುವ ಪ್ರಮೇಯವನ್ನು ರಾಮಾಯಣದ ಒಂದೊಂದು ಕಾಂಡವು ಕ್ರಮವಾಗಿ ವಿವರಿಸುತ್ತಿದ್ದು ಈ ಪ್ರಯುಕ್ತವೂ ಭಾಷ್ಯವೆನಿಸಿದೆ.

## ಗುಣಪರಿಪೂರ್ಣ:

'ತತ್' ಎಂಬ ಶಬ್ದದಿಂದಲೇ ಪ್ರಾರಂಭವಾಗುವ ಗಾಯತ್ರಿಯು ಭಗವಂತನ ಅಸಾಧಾರಣ ಧರ್ಮವಾದ ಗುಣಪರಿಪೂರ್ಣತ್ವವನ್ನು ಸಾರುತ್ತಿದೆ. ಹೀಗೆ 'ತತ್' ವಿಶೇಷಣದಿಂದ ಸ್ಥೂಲವಾಗಿ ಪ್ರತಿಪಾದಿಸಲ್ಪಡುವ ಭಗವಂತನ ಗುಣಪರಿಪೂರ್ಣತ್ವವು ಸಮಗ್ರ ವಾಲ್ಮೀಕಿ ರಾಮಾಯಣದ ತಾತ್ಪರ್ಯವೆನಿಸಿದೆ. 'ಕೋನ್ವಸ್ಮಿನ್ ಸಾಂಪ್ರತಂ ಲೋಕೇ ಗುಣವಾನ್'...... ಈ ಲೋಕದಲ್ಲಿ ಗುಣಪರಿಪೂರ್ಣನಾದವನಾರು? ಎಂಬ ವಾಲ್ಮೀಕಿಗಳ ಪ್ರಶ್ನೆಗೆ 'ಇಕ್ಷ್ವಾಕುವಂಶಪ್ರಭವೋ ರಾಮೋ ನಾಮ ಜನೈಃ ಶ್ರುತಃ' ಎಂಬುದಾಗಿ ಇಕ್ಷ್ವಾಕುವಂಶದಲ್ಲಿ ಪ್ರಾದುರ್ಭವಿಸಿದ ಶ್ರೀರಾಮನನ್ನು ಗುಣಪರಿಪೂರ್ಣನೆಂದು ಉತ್ತರಿಸಿದ ನಾರದರು, ಶ್ರೀರಾಮನ ಗುಣಪೂರ್ಣತ್ವದ ಸಮರ್ಥನೆಗಾಗಿ ಅವನ ಚರಿತ್ರೆಯನ್ನೇ ಉದಾಹರಿಸಿದ್ದು, ಅದರ ಆಧಾರದ ಮೇಲೆಯೇ ರಚಿತವಾದದ್ದು ವಾಲ್ಮೀಕಿ ರಾಮಾಯಣವೆಂದ ಮೇಲೆ ಅಂತಹ ವಾಲ್ಮೀಕಿರಾಮಾಯಣಕ್ಕೂ ಪರಮ ತಾತ್ಪರ್ಯ ಶ್ರೀರಾಮನ ಗುಣಪೂರ್ಣತ್ವದ ಸಮರ್ಥನೆಯಲ್ಲೇ ಎಂಬುದು ಸ್ಪಷ್ಟ.

## ಸೃಷ್ಟಿಸುವವನು:

'ತತ್' ಶಬ್ದದಿಂದ ಭಗವಂತನ ಗುಣಪೂರ್ಣತ್ವವನ್ನು ಸ್ಥೂಲವಾಗಿ ಪ್ರಸ್ತಾವಿಸಿದ ಗಾಯತ್ರಿಯು ಒಂದೊಂದು ವಿಶೇಷಣದಿಂದ ಭಗವಂತನ ಗುಣಗಳಲ್ಲಿ ಪ್ರಮುಖವಾದ ಒಂದೊಂದೇ ಗುಣವನ್ನು ಉಲ್ಲೇಖಿಸುತ್ತ, ಮೊದಲನೆಯದಾಗಿ 'ಸವಿತುಃ' ವಿಶೇಷಣದಿಂದ ಭಗವಂತನ ಸೃಷ್ಟಿಕರ್ತೃತ್ವ ಪ್ರತಿಪಾದಿತವಾಗಿದೆ. ಭಗವಂತನು ಸಜ್ಜನರ ಉದ್ಧಾರಕ್ಕಾಗಿ ರಾಮನಾಗಿ ತನ್ನನ್ನು ಸೃಷ್ಟಿಸಿಕೊಂಡಿರುವನು. ಇದು ಶುದ್ಧ ಸೃಷ್ಟಿ. ಹಾಗೆಯೇ ತನ್ನ ಸಂಕರ್ಷಣಾದಿ ರೂಪಗಳ ಆವೇಶವುಳ್ಳ

ಲಕ್ಷ್ಮಣ, ಭರತ, ಶತ್ರುಘ್ನರನ್ನು ಸೃಷ್ಟಿಸಿರುವನು. ಹೀಗೆ ಭಗವಂತನು ಧರ್ಮ ಹಾಗೂ ಸಜ್ಜನರ ಸಾಧನಾನುಷ್ಠಾನಕ್ಕಾಗಿ ಅವರ ಸೃಷ್ಟಿಯನ್ನೂ ನಡೆಸು ವನೆಂದು ತೋರಿಸುವ ಬಾಲಕಾಂಡದಲ್ಲಿ ಸೃಷ್ಟಿತತ್ವದ ಪ್ರಮುಖ ಅಂಶವನ್ನು ವಿವರಿಸಿ ದಂತಾಗುವುದು. ಅಲ್ಲದೆ ವಾಲ್ಮೀಕಿ ಋಷಿಯ ಮೂಲಕ ನಡೆಯುವ ಕಾವ್ಯ ಸೃಷ್ಟಿಯ ಪ್ರಸ್ತಾವವೂ ಈ ಕಾಂಡದಲ್ಲೇ ಇದೆ.

**ಸರ್ವಶ್ರೇಷ್ಠನಾದವನು:**

ಭಗವಂತನು ಗುಣಪೂರ್ಣನಾಗಿರುವುದರಿಂದ ಎಲ್ಲರಿಂದಲೂ ವರಣೀಯ. ಆದ್ದರಿಂದಲೇ ಸರ್ವಶ್ರೇಷ್ಠ. ಗಾಯತ್ರಿಯ 'ವರೇಣ್ಯ' ಎಂಬ ವಿಶೇಷಣವು ಪ್ರತಿಪಾದಿಸುತ್ತಿರುವ ಈ ಗುಣವು ಅಯೋಧ್ಯಾಕಾಂಡದಲ್ಲಿ ಸ್ಪಷ್ಟವಾಗುವುದು. ದಶರಥನು ಶ್ರೀರಾಮಚಂದ್ರನಿಗೆ ರಾಜ್ಯಾಭಿಷೇಕ ನಡೆಸಬೇಕೆಂಬ ತನ್ನ ಸಂಕಲ್ಪವನ್ನು ಪ್ರಜೆಗಳ ಮುಂದಿಟ್ಟಾಗ ಪ್ರತಿಯೊಬ್ಬರೂ ಶ್ರೀರಾಮನನ್ನು ಯುವರಾಜನನ್ನಾಗಿ ಪಡೆಯಲು ಒಪ್ಪಿಕೊಳ್ಳುವರು. ಈ ಮೂಲಕ ಅವನ ಪಾರಮ್ಯವನ್ನು ಹೃತ್ಪೂರ್ವಕವಾಗಿ ಅಂಗೀಕರಿಸಿರುವರು. ಹೀಗೆ ಎಲ್ಲಾ ಪ್ರಜೆಗಳು ಮನಸಾರೆ ಒಪ್ಪಿಕೊಂಡ ಈ ಪ್ರಮೇಯದಲ್ಲೂ ಅಪಸ್ವರ ಎತ್ತಿದ ಮಂಥರೆ ಸರ್ವ ಪ್ರಮಾಣ ಪ್ರಮಿತವಾದ ಪ್ರಮೇಯದಲ್ಲೂ ದುರ್ಜನರು ಹೇಗೆ ವಿವಾದಿಸು ತ್ತಾರೆಂಬುದನ್ನು ಸಂಕೇತಿಸುತ್ತಾಳೆ.

**ದುರ್ಜನರ ಭಂಜಕ:**

ಸಜ್ಜನರ ರಕ್ಷಣೆಯ ಹೊಣೆ ಹೊತ್ತ ಭಗವಂತನು, ಅದಕ್ಕಾಗಿಯೇ ದುರ್ಜನರ ಭಂಜಕನೂ ಆಗಿರುವನು. ಗಾಯತ್ರಿಯ 'ಭರ್ಗಃ' ವಿಶೇಷಣಕ್ಕೆ ಇದೂ ಅರ್ಥ. ದುಷ್ಟರಾಕ್ಷಸರನ್ನು ಸಂಹರಿಸಿ, ಅಲ್ಲಿಯ ಋಷಿಗಳಿಗೆ ರಕ್ಷಣೆ ನೀಡುವುದಕ್ಕಾಗಿಯೇ ವನವನ್ನು ಪ್ರವೇಶಿಸಿದವನು ಶ್ರೀರಾಮ

**'ಅಪ್ಯಹಂ ಜೀವಿತಂ ಜಹ್ಯಾಂ ತ್ವಾಂ ವಾ ಸೀತೇ ಸಲಕ್ಷ್ಮಣಾಮ್ ।**
**ನತು ಪ್ರತಿಜ್ಞಾಂ ಸಂಶ್ರುತ್ಯ ಬ್ರಾಹ್ಮಣೇಭ್ಯೋ ವಿಶೇಷತಃ ॥'**

'ಸೀತೆ, ನನ್ನ ಪ್ರಾಣವನ್ನೇ ಆಗಲಿ ನಿನ್ನನ್ನೇ ಆಗಲಿ ಲಕ್ಷ್ಮಣನನ್ನಾಗಲಿ ಬಿಟ್ಟೇನು. ಆದರೆ ಋಷಿಗಳಿಗೆ ಮಾತುಕೊಟ್ಟಂತೆ ಅವರ ರಕ್ಷಣೆಯನ್ನು ಮಾತ್ರ ಮಾಡದಿರಲಾರೆ' ಎಂದು ಸೀತೆಯೆದುರು ಪ್ರತಿಜ್ಞೆಮಾಡುವ ಶ್ರೀರಾಮನಿಗೆ ಋಷಿಗಳ ರಕ್ಷಣೆಯಲ್ಲಿ ಎಷ್ಟು ತಾತ್ಪರ್ಯವಿದೆ ಎಂಬುದು ಸ್ಪಷ್ಟ. ಹೀಗೆ ಋಷಿಗಳ ರಕ್ಷಣೆಗಾಗಿ ಸಾವಿರಾರು ಅಸುರರನ್ನು ಸಂಹರಿಸಿದ್ದನ್ನು ತಿಳಿಸುತ್ತಿರುವ ಅರಣ್ಯಕಾಂಡ ಗಾಯತ್ರಿಯ 'ಭರ್ಗಃ' ವಿಶೇಷಣದ ವ್ಯಾಖ್ಯಾನವಾಗಿದೆ.

ಬ್ರಹ್ಮೋಪದೇಶ ಎನ್ನುವಲ್ಲಿ ಬ್ರಹ್ಮ ಎನ್ನುವ ಶಬ್ದ ಸಕಲಶಾಸ್ತ್ರಗಳನ್ನು ತಿಳಿಸಿದಾಗ ಬ್ರಹ್ಮಚಾರಿ ಶಬ್ದವು ಶಾಸ್ತ್ರವಿಚಾರಶೀಲನನ್ನು ತಿಳಿಸುವುದು.

## ಲೀಲೆಯನ್ನು ನಡೆಸುವವನು:

'ಕ್ರೀಡಾ' ಅರ್ಥವಿರುವ 'ದಿವು' ಎಂಬ ಧಾತುವಿನಿಂದ ನಿಷ್ಪನ್ನವಾದ ಗಾಯತ್ರಿಯ 'ದೇವ' ಶಬ್ದಕ್ಕೆ ಭಗವಂತನು ಕ್ರೀಡೆಗಳನ್ನು, ಲೀಲೆಗಳನ್ನು ನಡೆಸುವ ನೆನ್ನುವ ಕಿಷ್ಕಿಂಧಾಕಾಂಡವು ದೇವ ಶಬ್ದದ ಭಾಷ್ಯವೆನಿಸುವುದು. ಸೀತಾನ್ವೇಷಣೆ ಯಲ್ಲಿ ತೊಡಗಿದ ಶ್ರೀರಾಮ ಲಕ್ಷ್ಮಣನಿಂದೊಡಗೂಡಿ ಕಿಷ್ಕಿಂಧೆಗೆ ನಿರ್ಗತಿಕನಂತೆ ಪ್ರವೇಶಿಸುವನು. ಬಳಿಕ ಸುಗ್ರೀವನ ಸಖ್ಯ ಬೆಳಸಿ ಸಮಗ್ರ ಕಪಿಸೈನ್ಯ ತನ್ನ ಬೆಂಬಲವಾಗಿ ನಿಲ್ಲುವಂತೆ ಮಾಡುವನು. ಭಗವಂತನ ಲೀಲೆಗೆ ಇದೊಂದು ಉತ್ತಮ ನಿದರ್ಶನ.

## ಹೇಗೆ ಧ್ಯಾನಿಸಬೇಕು?

ಗಾಯತ್ರಿಯ ಮುಂದಿನ ಶಬ್ದ 'ಧೀಮಹಿ' ಭಗವಂತನ ಸ್ವರೂಪವನ್ನು ಧ್ಯಾನಿಸುವೆವು ಎಂಬುದು ಇದರ ಅರ್ಥ. ರಾಮಾಯಣದ ಸುಂದರಕಾಂಡವು ಭಗವಂತನನ್ನು ಚೆನ್ನಾಗಿ ಧ್ಯಾನಿಸುವ ಹನುಮಂತನ ಧ್ಯಾನಪ್ರಕಾರವನ್ನು ತೋರಿಸಿಕೊಡುವುದರ ಮೂಲಕ ಭಗವಂತನನ್ನು ಹೇಗೆ ಧ್ಯಾನಿಸಬೇಕೆಂಬುದನ್ನು ವಿವರಿಸುತ್ತಿದೆ.

ಭಗವದ್‌ಧ್ಯಾನಪೂರ್ವಕವಾಗಿಯೇ ಸಮುದ್ರೋಲ್ಲಂಘನದಲ್ಲಿ ತೊಡಗಿರುವ ಹನುಮಂತನು ಕಾರ್ಯಸಾಧನೆಯ ಹಂತಹಂತದಲ್ಲೂ ಭಗವಂತನ ಧ್ಯಾನವನ್ನು ನಡೆಸುತ್ತಲೇ ಇರುವನು. ಲಂಕೆಯನ್ನು ಪ್ರವೇಶಿಸಿ ಸೀತೆಗಾಗಿ ಹುಡುಕಾಡುವಾಗ ರಾವಣನ ಅಂತಃಪುರದ ಸ್ತ್ರೀಯರನ್ನೆಲ್ಲ ನೋಡಬೇಕಾಗುವುದು. ನಿದ್ರಿಸುತ್ತಿರುವ ಅವರ ಉಡುಪುಗಳು ಅಸ್ತವ್ಯಸ್ತವಾಗಿರುವವು. ಅಂತಹವರನ್ನು ಕಾಣುವಾಗಲೂ ತನ್ನ ಮನಸ್ಸು ಯಾವುದೇ ಕಾಮವಿಕಾರಕ್ಕೊಳಗಾಗಲಿಲ್ಲವೆಂದು ಆಂಜನೇಯನು ಆತ್ಮವಿಶ್ಲೇಷಣೆ ಮಾಡಿಕೊಳ್ಳುವನು. 'ನ ತು ಮೇ ಮನಸಾ ಕಿಂಚಿದ್ ವೈಕೃತ್ಯಮುಪಪದ್ಯತೇ.' 'ತಚ್ಚ ಮೇ ಸುವ್ಯವಸ್ಥಿತಮ್' ಮನಸ್ಸಲ್ಲಿ ಸರ್ವದಾ ಭಗವದ್ ಧ್ಯಾನವನ್ನು ನಡೆಸುತ್ತಿರುವುದರಿಂದಷ್ಟೇ ಇದು ಸಾಧ್ಯ.

## ಬುದ್ಧಿಪ್ರಚೋದಕ:

ಗಾಯತ್ರಿಯ 'ಧಿಯೋ ಯೋ ನಃ ಪ್ರಚೋದಯಾತ್' ಎಂಬ ಭಾಗವು ಭಗವಂತನು ನಮ್ಮ ಹಾಗೂ ಎಲ್ಲರ ಬುದ್ಧಿಯನ್ನು ಪ್ರೇರಿಸುವನು ಎಂಬುದನ್ನು ಹೇಳುತ್ತಿದೆ. ಯುದ್ಧಕಾಂಡ ಇದರ ವ್ಯಾಖ್ಯಾನವೆನಿಸಿದೆ. ಯುದ್ಧದ ಘಟನೆಯನ್ನು ತಿಳಿಸುವ ಯುದ್ಧಕಾಂಡ ಯುದ್ಧದಲ್ಲಿ ತೊಡಗಿದ ರಾವಣನ ಬುದ್ಧಿಗೆ ಕನ್ನಡಿಯಾಗಿದೆ. ಮಾರೀಚ, ವಿಭೀಷಣಾದಿಗಳು ಪರಿಪರಿಯಾಗಿ ಶ್ರೀರಾಮನ ಸಾಮರ್ಥ್ಯವನ್ನು ತಿಳಿಹೇಳಿದರೂ ತಾನೇ ಸ್ವತಃ ಅನುಭವಿಸಿಕೊಂಡರೂ ರಾವಣ ನಿಗೆ ಸೀತೆಯನ್ನು ಮರಳಿಸಿ ಯುದ್ಧದಿಂದ ಹಿಂಜರಿಯಲಾಗಲಿಲ್ಲ. ಇದರಿಂದ ಸ್ಪಷ್ಟ:

ಅವನ ಬುದ್ಧಿ ಅವನ ಅಧೀನವಾಗಿಲ್ಲ. ಭಗವಂತ ಪ್ರೇರಿಸುತ್ತಿರುವ ಬುದ್ಧಿಗೆ ಅನುಗುಣವಾಗಿ ಅವನು ನಡೆದುಕೊಳ್ಳುತ್ತಿದ್ದಾನಷ್ಟೆ.

### ಸಜ್ಜನರಿಗೆ ಸದ್‌ಬುದ್ಧಿ ಪ್ರಚೋದಕ:

'ಧಿಯೋ ಯೋ ನಃ ಪ್ರಚೋದಯಾತ್' ಎಂಬ ಭಾಗದಲ್ಲಿ 'ನಃ' ಶಬ್ದಕ್ಕೆ ಒತ್ತು ನೀಡಿದಾಗ ನಮಗೆ ಅಂದರೆ ಗಾಯತ್ರಿಯನ್ನು ಧ್ಯಾನಿಸುವ ಸಜ್ಜನರಿಗೆ ಎಂಬ ಅರ್ಥಸಿದ್ಧಿಸುವುದರ ಮೂಲಕ ಸಜ್ಜನರಿಗೆ ಒಳ್ಳೆಯ ಬುದ್ಧಿಯನ್ನು ಪ್ರೇರಿಸುವನೆಂಬುದಾಗಿ ತಾತ್ಪರ್ಯವು ಹೊರಡುವುದು. ಈ ಅಭಿಪ್ರಾಯವು ರಾಮಾಯಣದ ಉತ್ತರಕಾಂಡದಲ್ಲಿ ವಿವರಿಸಲ್ಪಟ್ಟಿದೆ. ಮುಖ್ಯವಾಗಿ ಶ್ರೀರಾಮ ರಾಜ್ಯದ ವೈಭವವನ್ನು ವರ್ಣಿಸುವ ಉತ್ತರಕಾಂಡದಲ್ಲಿ ಅಂತಹ ವೈಭವಕ್ಕೆ ಆಗಿನ ಪ್ರಜೆಗಳು ಅಷ್ಟು ಸಜ್ಜನರಾಗಿದ್ದುದೂ ಕಾರಣವೆಂದು ಸೂಚಿಸಲಾಗಿದೆ. ಶ್ರೀರಾಮನು ರಾಜ್ಯವಾಳುತ್ತಿರುವಾಗ "ರಾಮೋ ರಾಮೋ ರಾಮ ಇತಿ ಸರ್ವೇಷಾ ಮಭವತ್ತದಾ । ಸರ್ವೋ ರಾಮಮಯೋ ಲೋಕೋ ಯದಾ ರಾಮಸ್ತ್ವಪಾಲಯತ್' –ಎಂದಿರುವಂತೆ ಪ್ರಜೆಗಳೆಲ್ಲ ಶ್ರೀರಾಮಪರಾಯಣರಾಗಿದ್ದರು. ಹೀಗೆ ಅವರಿಗೆ ಸದ್ಬುದ್ಧಿಯನ್ನು ಪ್ರೇರಿಸಿ, ಅದಕ್ಕನುಗುಣವಾಗಿ ಸಮೃದ್ಧಿಯನ್ನು ಅನುಗ್ರಹಿಸಿದವನು ಭಗವಂತನು.

ಸಜ್ಜನರು ಸದ್ಬುದ್ಧಿಯನ್ನೇ ಭಗವಂತನಿಂದ ಅನುಗ್ರಹಿಸಲ್ಪಡುತ್ತಿದ್ದರೂ ತಮ್ಮ ಯೋಗ್ಯತಾನುಸಾರವಾಗಿ ದುರ್ಬುದ್ಧಿಯನ್ನು ಪಡೆದುಕೊಳ್ಳದಿರದ ದುರ್ಜನರನ್ನು ಶ್ರೀರಾಮನ ಮೇಲೂ ಅಪವಾದ ಹೊರಿಸುವ ದುರ್ಬುದ್ಧಿಯನ್ನು ತೋರಿಸಿದ ಸುರಾಣಕರು ಸಂಕೇತಿಸುವರು.

ಹೀಗೆ ರಾಮಾಯಣದ ಒಂದೊಂದು ಕಾಂಡದ ಅರ್ಥವನ್ನು ನಾವು ವಿಶ್ಲೇಷಿಸಿಕೊಂಡಾಗ ಅದು ಗಾಯತ್ರಿಯ ಒಂದೊಂದು ವಿಶೇಷಣದ ಭಾಷ್ಯರೂಪವಾಗಿ ಇರುವುದು ಕಂಡುಬರುವುದು.

*

### ಸಾಂಗವೇದಗಳಿಗೆ ಸಮಾನ ಗಾಯತ್ರಿ

**ಗಾಯತ್ರೀಂ ಚೈವ ವೇದಾಂಶ್ಚ ತುಲಯಾ ಸಮತೋಲಯನ್ ।**
**ವೇದಾ ಏಕತ್ರ ಸಾಂಗಾಸ್ತು ಗಾಯತ್ರೀ ಚೈಕತಃ ಸ್ಮೃತಾ ॥**

— *ಕೂರ್ಮಪುರಾಣ*

ಷಡಂಗಗಳಿಂದ ಕೂಡಿದ ವೇದಗಳನ್ನು ಒಂದೆಡೆ, ಬರೇ ಗಾಯತ್ರಿಯನ್ನು ಮತ್ತೊಂದೆಡೆ ಇರಿಸಿ ತಕ್ಕಡಿಯ ಮೂಲಕ ತೂಗಲಾಯಿತು. ಇದರಿಂದ ಗಾಯತ್ರಿಯು ಸಾಂಗವೇದಗಳಿಗೆ ಸಮಾನವೆಂದು ಸಿದ್ಧವಾಗುವುದು.

# ಗಾಯತ್ರಿಯಲ್ಲಿ ಸ್ವರಾನುಸಂಧಾನ

ಸಗ್ರಿ ರಾಘವೇಂದ್ರ ಉಪಾಧ್ಯಾಯ

ವೇದದಲ್ಲಿ ಒಟ್ಟು ನಾಲ್ಕು ಸ್ವರಗಳು. ಉದಾತ್ತ ಹಾಗೂ ಅನುದಾತ್ತ ಎಂಬೆರಡು ಪ್ರಧಾನ ಸ್ವರಗಳು; ಸ್ವರಿತ ಹಾಗೂ ಪ್ರಚಯ ಎಂಬೆರಡು ಉದಾತ್ತದ ಅನಂತರದ ಅನುದಾತ್ತ ಸ್ವರವೇ 'ಉದಾತ್ತಾದನುದಾತ್ತಸ್ಯ' ಎಂಬ ಸೂತ್ರಪ್ರಕಾರ ಮಾರ್ಪಾಟಾಗಿ ರೂಪುಗೊಂಡ ಅಪ್ರಧಾನ ಸ್ವರಗಳು. ವೇದಪುಸ್ತಕಗಳಲ್ಲಿ ಅಚ್ ಅಕ್ಷರಗಳ ಮೇಲೆ ನೇರ ಗೆರೆ ಹಾಕಿ ಸ್ವರಿತ ಸ್ವರವನ್ನು, ಕೆಳಗೆ ಅಡ್ಡ ಗೆರೆ ಹಾಕಿ ಅನುದಾತ್ತ ಸ್ವರವನ್ನು ಸೂಚಿಸುತ್ತಾರೆ. ಉದಾತ್ತ ಹಾಗೂ ಪ್ರಚಯ ಸ್ವರವನ್ನು ಗೆರೆಹಾಕದೆಯೇ ಬಿಡುತ್ತಾರೆ. ಅನುದಾತ್ತದ ಅನಂತರ ಸ್ವರಿತದ ವರೆಗಿನ ಗೆರೆ ಹಾಕದ ಸ್ವರ ಉದಾತ್ತವೆಂದೂ, ಸ್ವರಿತದ ಅನಂತರ ಅನುದಾತ್ತದ ವರೆಗಿನ ಗೆರೆಹಾಕದ ಸ್ವರ ಪ್ರಚಯ ಎಂದು ಪರಿಗಣಿಸಬೇಕು.

ಸ್ವರಗಳು ಶಬ್ದಸ್ವಭಾವಕ್ಕನುಗುಣವಾಗಿ ಬಂದಿರುವವೆಂಬ ವೈಯಾಕರಣರ ಪ್ರಕ್ರಿಯೆಯನ್ನೇ ಒಪ್ಪಿಕೊಂಡು ಉಳಿದೆಲ್ಲ ವೇದವ್ಯಾಖ್ಯಾನಕಾರರು ವೇದದ ಸ್ವರಗಳ ಬಗ್ಗೆ ಏನೂ ಗಮನಹರಿಸಲಿಲ್ಲ. ಶ್ರೀಮಧ್ವಾಚಾರ್ಯರು ಮಾತ್ರ ಪ್ರತಿಯೊಂದು ಸ್ವರಕ್ಕೂ ಅರ್ಥವಿದೆ ಎಂದು ಅಭಿಪ್ರಾಯಪಡುತ್ತ ನಾಲ್ಕು ಸ್ವರಗಳ ಅರ್ಥಗಳನ್ನು ಹೀಗೆ ನಿರೂಪಿಸಿರುವರು.

**ದಾರ್ಢ್ಯಮೇವಾನುದಾತ್ತಾರ್ಥಃ ಉದಾತ್ತಸ್ಯೋಚ್ಚತಾ ತಥಾ ।**
**ನೀಚತಾ ಸ್ವರಿತಸ್ಯಾರ್ಥಃ ಪ್ರಚಯಸ್ಯ ಯಥಾಸ್ಥಿತಿಃ ॥**

ದಾರ್ಢ್ಯವು ಅನುದಾತ್ತ ಸ್ವರದ ಅರ್ಥ. ಉಚ್ಚತ್ವವು ಉದಾತ್ತ ಸ್ವರದ ಅರ್ಥ. ನೀಚತ್ವವು ಸ್ವರಿತದ ಅರ್ಥ. ಯಥಾಸ್ಥಿತಿ ಅಂದರೆ ಒಂದೇರೀತಿಯಾಗಿರುವಂತದ್ದು ಪ್ರಚಯ ಸ್ವರದ ಅರ್ಥ.

ಸ್ವರಗಳು ಅಚ್ ಅಕ್ಷರಗಳಿಗೇ ಬರುವವು. ಯಾವ ಅಚ್ ಅಕ್ಷರದ ಮೇಲೆ ಅನುದಾತ್ತ ಸ್ವರವಿದೆಯೋ ಅಂತಹ ಅಚ್ ಅಕ್ಷರವನ್ನೊಳಗೊಂಡ ಶಬ್ದದ ಮೂಲಭೂತ ಧಾತುವಿನ ಅರ್ಥಕ್ಕೆ ದಾರ್ಢ್ಯವನ್ನು ಸೇರಿಸಿಕೊಳ್ಳಬೇಕು. ಹಾಗೆಯೇ ಉದಾತ್ತ ಸ್ವರದ ಅಕ್ಷರವನ್ನೊಳಗೊಂಡ ಶಬ್ದದ ಮೂಲಭೂತ ಕ್ರಿಯಾಪದದ ಅರ್ಥಕ್ಕೆ ಉಚ್ಚತ್ವವನ್ನು ಅಂದರೆ ಆಧಿಕ್ಯವನ್ನು ಸೇರಿಸಿಕೊಳ್ಳಬೇಕು. ಪದಪಾಠದಲ್ಲಿ ಅನುದಾತ್ತವಾಗಿರುವಂತಾದ್ದು ಸಂಹಿತಾ ಪಾಠದಲ್ಲಿ ಸ್ವರಿತವಾಗಿ ರೂಪುಗೊಳ್ಳುವುದು. ಆದ್ದರಿಂದ ಸ್ವರಿತ ಸ್ವರದ ಅಕ್ಷರಗಳನ್ನೊಳಗೊಂಡ ಶಬ್ದದ ಅರ್ಥದಲ್ಲಿ ದಾರ್ಢ್ಯವೇ ಇರುವುದಾದರೂ ದಾರ್ಢ್ಯಕ್ಕೆ ಪೋಷಕವಾಗುವಂತೆ ಆ ದೃಢವಾದ ಅರ್ಥಕ್ಕೆ ಸಂಬಂಧಿಸುವ ಪದಾರ್ಥದಲ್ಲಿ ನೀಚತ್ವವನ್ನು ಸ್ವರಿತ ಸ್ವರವು

ಸೂಚಿಸುವುದು. ಈ ಉಚ್ಚತ್ವ ನೀಚತ್ವಗಳು ಎಂದೆಂದೂ ಬದಲಾಗದೆ ಒಂದೇ ರೀತಿಯಾಗಿ ಮುಂದುವರಿಯುವವು ಎಂದು ಪ್ರಚಯ ಸ್ವರವು ಸೂಚಿಸುವುದು.

## ಗಾಯತ್ರಿಯಲ್ಲಿ ಸ್ವರಚಿಂತನೆ:

ಆಚಾರ್ಯರು ತೋರಿಸಿಕೊಟ್ಟ ಆಧಾರದಲ್ಲಿ ಸಮಗ್ರ ವೇದದ ಸ್ವರಗಳಿಗೆ ಅರ್ಥಹೇಳಬಹುದಾದಂತೆ ಗಾಯತ್ರಿಯ ಸ್ವರಗಳಿಗೂ ಅರ್ಥಚಿಂತನೆಯನ್ನು ನಡೆಸಬಹುದು.

'ತ' ಎಂಬಲ್ಲಿಯ ಅಕಾರದ ಉದಾತ್ತ ಸ್ವರವು ತತ್ ಶಬ್ದಾರ್ಥವಾದ ಭಗವಂತನ 'ತತಿ'ಯಲ್ಲಿ ವ್ಯಾಪ್ತಿಯಲ್ಲಿ ಇರುವ ಅತ್ಯಾಧಿಕ್ಯವನ್ನು ತಿಳಿಸುವುದು.

ಸ್ವರಿತ ಸ್ವರವನ್ನು 'ಸವಿತುಃ' ಎಂಬಲ್ಲಿಯ ಸಕಾರದ ಅಕಾರವು ಒಳಗೊಂಡಿದ್ದು ಆ ಸ್ವರವು ಸವಿತೃ ಶಬ್ದಾರ್ಥವಾದ ಸೃಷ್ಟಿಯಲ್ಲಿ ನೀಚತ್ವವನ್ನು ತಿಳಿಸುತ್ತಿದ್ದು, ಅತ್ಯಧಿಕ ಗುಣಪೂರ್ಣನಾದ ಅವನಿಂದ ನಡೆದ ಸೃಷ್ಟಿ ಆಯಾ ವಸ್ತುಗಳ ಯೋಗ್ಯತೆಗನುಗುಣವಾದ ಕೆಳಮಟ್ಟದ್ದೇ ಹೊರತು ತನ್ನಂತಹ ಗುಣಪೂರ್ಣ ವಸ್ತುಗಳ ಸೃಷ್ಟಿ ಅಲ್ಲ ಎಂದು ಸೂಚಿಸುವುದು.

'ವಿ' ಎಂಬಲ್ಲಿಯ ಇಕಾರವು ಅನುದಾತ್ತ ಸ್ವರವನ್ನು ಒಳಗೊಂಡಿದ್ದು ಆ ಸ್ವರವು ಕೆಳಮಟ್ಟದ ಸೃಷ್ಟಿಯನ್ನು ಸೂಚಿಸಿ ಅವನ ವ್ಯಕ್ತಿತ್ವದೆದುರು ಅವನ ಸೃಷ್ಟಿ ತುಂಬ ಕೆಳಮಟ್ಟದ್ದೆಂದು ತಿಳಿಸುವುದು.

'ತು' ಮತ್ತು 'ವ' ಎಂಬಲ್ಲಿಯ ಉಕಾರ ಅಕಾರಗಳು ಉದಾತ್ತ ಸ್ವರಗಳನ್ನೊಳಗೊಂಡಿದ್ದು ಆ ಸ್ವರಗಳು ಸೃಷ್ಟಿಸುವ ಅವನ ಸ್ವಭಾವದಲ್ಲಿಯ ಉಚ್ಚಾತ್ಯುಚ್ಚತ್ವವನ್ನು ತಿಳಿಸುತ್ತವೆ.

'ವರೇಣ್ಯಂ' ಎಂಬಲ್ಲಿಯ ಏಕಾರ ಸ್ವರಿತ ಸ್ವರವನ್ನು 'ಅಂ' ಅನುದಾತ್ತ ಸ್ವರವನ್ನು ಒಳಗೊಂಡಿದ್ದು ಆ ಸ್ವರಗಳು ಅವನ ಶ್ರೇಷ್ಠ್ಯದ ಎದುರು ನಮ್ಮಲ್ಲಿಯ ನೀಚತ್ವವನ್ನೂ ಅವನ ಭಜನಾರ್ಹತೆಯಲ್ಲಿರುವ ದಾರ್ಢ್ಯವನ್ನೂ ತಿಳಿಸುತ್ತವೆ.

'ಭರ್ಗಃ' ಎಂಬಲ್ಲಿಯ ಅಕಾರ ಉದಾತ್ತಸ್ವರವನ್ನೊಳಗೊಂಡಿದ್ದು ಆ ಸ್ವರವು ಅವನು ನೀಡುವ ಭರಣದಲ್ಲಿಯ ಉಚ್ಚತ್ವವನ್ನು ತಿಳಿಸುವುದು.

'ಗೋ' ಎಂಬಲ್ಲಿಯ ಓಕಾರದ ಸ್ವರಿತ ಸ್ವರವು ಅವನ ಪ್ರೇರಣೆಯಿಂದ ನಮ್ಮಲ್ಲಿ ನಡೆಯುವ ಚಟುವಟಿಕೆಯಲ್ಲಿ ನೀಚತ್ವವನ್ನು ಸೂಚಿಸುವುದು.

'ದೇ' ಎಂಬಲ್ಲಿಯ ಏಕಾರದ ಅನುದಾತ್ತವು ಅವನ ವಿಜಯಾದಿಯಲ್ಲಿಯ ದಾರ್ಢ್ಯವನ್ನು ತಿಳಿಸಿದರೆ, ವಕಾರದ ಉದಾತ್ತವು ಅವನ ವಿಜಯಾದಿಗಳಲ್ಲಿರುವ ಉಚ್ಚತ್ವವನ್ನು ತಿಳಿಸುವುದು.

'ಸ್ಯ' ಎಂಬಲ್ಲಿಯ ಸ್ವರಿತ ಅವನ ವಿಜಯಾದಿಗಳೆದುರು ನಮ್ಮ ನೀಚತ್ವ ವನ್ನು ತಿಳಿಸುವುದು.

'ಧೀಮಹಿ' ಎಂಬಲ್ಲಿ ಪ್ರಚಯ ಸ್ವರಗಳಿದ್ದು ಅವನ ಧ್ಯೇಯತ್ವವು ಎಂದೆಂದೂ ಬದಲಾಗದೆ ಮುಕ್ತ್ಯವಸ್ಥೆಯಲ್ಲಿಯೂ ಮುಂದುವರಿಯುವುದೆಂದು ತಿಳಿಯುವುದು.

'ಧಿಯೋ' ಎಂಬಲ್ಲಿಯ ಇಕಾರದ ಉದಾತ್ತವು ಅವನು ಪ್ರೇರಿಸಬೇಕಾದ ಬುದ್ಧಿಯಲ್ಲಿ ಉಚ್ಚತ್ವವನ್ನು ಸೂಚಿಸಿದರೆ ಓಕಾರದ ಅನುದಾತ್ತವು ಆ ಬುದ್ಧಿಯಲ್ಲಿ ದಾರ್ಢ್ಯವನ್ನು ಸೂಚಿಸುವುದು.

'ಯೋ' ಎಂಬಲ್ಲಿಯ ಓಕಾರದ ಉದಾತ್ತವು ಯಕಾರದ ಅರ್ಥವಾದ ಅವನ ಜ್ಞಾನರೂಪಾತ್ವಾದಿಗಳಲ್ಲಿಯ ಉಚ್ಚತ್ವವನ್ನು ಸೂಚಿಸುವುದು.

'ನಃ' ಎಂಬಲ್ಲಿಯ ಸ್ವರಿತ ನಮ್ಮ ನೀಚತ್ವವನ್ನು ತಿಳಿಸುವುದು.

'ಪ್ರ' ಎಂಬಲ್ಲಿಯ ಪ್ರಚಯ ಪ್ರೇರಿಸುವ ಅವನ ಸ್ಥಿತಿ ಬದಲಾಗದು ಎಂದು ತಿಳಿಸಿವೆ.

'ಚೋ' ಎಂಬಲ್ಲಿಯ ಅನುದಾತ್ತ ಪ್ರೇರಣೆಯಲ್ಲಿಯ ದಾರ್ಢ್ಯವನ್ನು, ದಕಾರದಲ್ಲಿಯ ಉದಾತ್ತ ಅದರ ಉಚ್ಚತ್ವವನ್ನೂ 'ಯಾ' ಎಂಬಲ್ಲಿಯ ಸ್ವರಿತ ಅವನ ಪ್ರೇರಣೆಗೊಳಗಾಗುವ ನಮ್ಮ ನೀಚತ್ವವನ್ನೂ ತಿಳಿಸುವುದು.

ಹೀಗೆ ಆಚಾರ್ಯರು ಹಾಕಿಕೊಟ್ಟ ಸ್ವರದ ಅರ್ಥಚೌಕಟ್ಟಿನ ಒಳಗೆ ಗಾಯತ್ರೀಪ್ರತಿಪಾದ್ಯ ಭಗವದ್ಗುಣಗಳಿಗೆ ಮೆರುಗು ದೊರಕುವಂತೆ ಸ್ವರಗಳ ಅರ್ಥವನ್ನು ಹಚ್ಚಿಕೊಂಡು ಅನುಸಂಧಾನ ಮಾಡಬೇಕು.

*ಮೂಲ: ಬನ್ನಂಜೆ ಗೋವಿಂದಾಚಾರ್ಯ*

*

## ಗಾಯತ್ರೀಮಾತೆಯ ಯೋಗ್ಯ ಮಕ್ಕಳೆನಿಸಬೇಕಾದರೆ......

ಜ್ಞಾನಕ್ಕೆ ಗಾಯತ್ರೀಮಂತ್ರದ ಉಪದೇಶವೇ ಮಾರ್ಗ. ಈ ಉಪದೇಶವಾದಾಗ ನಾವು ದ್ವಿಜರಾಗುತ್ತೇವೆ. ನಮಗೆ ನಮ್ಮ ಈ ಶರೀರರೂಪದಲ್ಲಿ ಜನ್ಮಕೊಟ್ಟ ತಾಯಿ ಒಬ್ಬಳು. ಎರಡನೇ ತಾಯಿಯೇ ಗಾಯತ್ರೀದೇವಿ. ನಮ್ಮಲ್ಲಿ ಜ್ಞಾನದೀಪವನ್ನು ಬೆಳೆಸುವ ತಾಯಿಯನ್ನು ಮರೆಯುವುದು ಕೃತಘ್ನತೆ ಎನಿಸುವುದು. ತಾಯಿಯ ಸೇವೆಯನ್ನು ಬಿಟ್ಟು ಯಾರು ಎಷ್ಟು ಕೆಲಸಮಾಡಿದರೂ ಅದಕ್ಕೆ ಬೆಲೆ ಬರಲಾರದು. ಜ್ಞಾನಜ್ಯೋತಿಯು ನಮ್ಮಲ್ಲಿ ಸದಾ ಬೆಳಗುತ್ತಿರುವಂತೆ ಸದಾ ಕಾಲವೂ ನಮ್ಮ ಪ್ರಾರ್ಥನೆ ಸಲ್ಲುತ್ತಿದ್ದರೆ ಆಗ ನಾವು ಆ ತಾಯಿಗೆ ಯೋಗ್ಯರಾದ ಮಕ್ಕಳು.

*— ಶ್ರೀ ವಿದ್ಯಾಮಾನ್ಯತೀರ್ಥರು*

# ವ್ಯಾಹೃತಿ–ಗಾಯತ್ರೀ–ಪುರುಷಸೂಕ್ತ

ಸಗ್ರಿ ರಾಘವೇಂದ್ರ ಉಪಾಧ್ಯಾಯ

'ಭೂರ್ಭುವಃಸ್ವಃ' ಎಂಬ ಮೂರು ವ್ಯಾಹೃತಿಯ ವ್ಯಾಖ್ಯಾನ ಮೂರು ಪಾದದ ಗಾಯತ್ರೀ ಆದರೆ ಗಾಯತ್ರಿಯ ವ್ಯಾಖ್ಯಾನ ಮೂರು ವರ್ಗದ ಪುರುಷ ಸೂಕ್ತ. ಹೀಗೆ ಗಾಯತ್ರಿಯು ವ್ಯಾಹೃತಿಗೆ ವ್ಯಾಖ್ಯಾನರೂಪದಲ್ಲೂ, ಪುರುಷಸೂಕ್ತಕ್ಕೆ ವ್ಯಾಖ್ಯೇಯರೂಪದಲ್ಲೂ ಇದೆ.

## ವ್ಯಾಹೃತಿ–ಗಾಯತ್ರೀ:

'ಪೂರ್ಣೋ ಭೂತಿವರೋನಂತಸುಖೋ ಯದ್ವ್ಯಾಹೃತೀರಿತಃ' ಎಂದು ಋಗ್ಭಾಷ್ಯದಲ್ಲಿ (೧–೨) ವ್ಯಾಹೃತಿಯ ಭೂಃ ಶಬ್ದಕ್ಕೆ ಗುಣಪೂರ್ಣ, ಭುವಃ ಶಬ್ದಕ್ಕೆ ಶ್ರೇಷ್ಠ ಐಶ್ವರ್ಯಸಂಪನ್ನ, ಸ್ವಃ ಶಬ್ದಕ್ಕೆ ಅನಂತಸುಖಸಂಪನ್ನ ಎಂಬ ಅರ್ಥವನ್ನು ಹೇಳಿದ್ದರೆ, ತೈತ್ತಿರೀಯ ಭಾಷ್ಯದಲ್ಲಿ (೧–೧೦) 'ಭೂರ್ನಾಮಾ ಸ್ಫೂರ್ತಿರೂಪ ತ್ವಾದ್ಭೂರಿವೀರ್ಯತ್ವತೋ ಭುವಃ । ಸುವಃ ಸುಬಲರೂಪತ್ವಾತ್' ಎಂದು ಪ್ರತಿಭಾರೂಪಿ, ಪರಿಪೂರ್ಣಪರಾಕ್ರಮಿ, ಶ್ರೇಷ್ಠಬಲಸ್ವರೂಪಿ ಎಂಬ ಅರ್ಥವನ್ನು ಹೇಳಲಾಗಿದೆ. .ಅನುವ್ಯಾಖ್ಯಾನದಲ್ಲಿ (೧–೧೦) 'ವ್ಯಾಹೃತೀನಾಂ ಚ ಭೂಮತಃ । ಭಾವನಾಚ್ಚೈವ ಸುತ್ವಾಚ್ಚ' ಎಂದು ಗುಣಪೂರ್ಣ, ಜಗದುತ್ಪಾದಕ, ಸುಖರೂಪಿ ಎಂಬ ಅರ್ಥವನ್ನು ಹೇಳಲಾಗಿದೆ.

ವ್ಯಾಹೃತಿಯ ಈ ಅರ್ಥದ ವಿವರಣೆಯನ್ನು ಗಾಯತ್ರಿಯಲ್ಲಿ ಕಾಣ ಬಹುದು. ಭೂಃ ವ್ಯಾಹೃತಿ ಹೇಳುತ್ತಿರುವ ಗುಣಪೂರ್ಣತ್ವವನ್ನು ಗಾಯತ್ರಿಯ ತತ್ ಶಬ್ದವು ಸೂಚಿಸಿದೆ. ಅಲ್ಲದೆ ಸ್ರಷ್ಟೃತ್ವವೇ ಮುಂತಾದ ಗುಣಗಳನ್ನು ಸವಿತೃ ಮುಂತಾದ ಶಬ್ದಗಳಿಂದ ಉಲ್ಲೇಖಿಸಿ ಇಂತಹ ಗುಣಗಳಿಂದ ಪೂರ್ಣನಾದವನು ಪರಮಾತ್ಮನು ಎಂದು ಸ್ಪಷ್ಟಪಡಿಸಿದೆ.

'ಭುವಃ' ಎಂಬ ಶಬ್ದದಿಂದ ಪ್ರತಿಪಾದಿತವಾದ ಜಗದುತ್ಪಾದಕತ್ವ ಗಾಯತ್ರಿಯ ಸವಿತೃ ಶಬ್ದದಿಂದ ಜಗದುತ್ಪಾದನೆ ಅವನ ಸಹಜ ಪ್ರವೃತ್ತಿ ಹೊರತು ಸ್ವಾರ್ಥಕ್ಕಾಗಿ ನಡೆಸಲ್ಪಡುವಂತಹದ್ದಲ್ಲ ಎಂದು ಶೀಲ ಎಂಬ ಅರ್ಥದ ತೃಚ್ ಪ್ರತ್ಯಯದಿಂದಾಗಿ ವಿವರಿಸಲ್ಪಟ್ಟಿದೆ.

ದುಷ್ಟರನ್ನು ಭರ್ಜನಮಾಡುವುದರಿಂದ, ಸುಟ್ಟುಹಾಕುವುದರಿಂದ 'ಭರ್ಗ' ಎನಿಸುವ ಭಗವಂತನು ದುಷ್ಟರನ್ನು ಭರ್ಜನಮಾಡಲು ಬೇಕಾದ ಅಮಿತ ಪರಾಕ್ರಮ, ಬಲಸಂಪನ್ನನಾಗಿರುವನೆಂಬುದಾಗಿ 'ಭುವಃ' 'ಸ್ವಃ' ಶಬ್ದಗಳ ಅರ್ಥಕ್ಕೆ ಪೂರಕವಾಗಿ ಭರ್ಗ ಶಬ್ದವು ತೆರೆದುಕೊಳ್ಳುವುದು.

ಆನಂತಸುಖಿ, ಬಲಸ್ವರೂಪಿ ಎಂಬ ಅರ್ಥದ 'ಸ್ವಃ' ಶಬ್ದಾರ್ಥವಿವರಣೆಯನ್ನು ಗಾಯತ್ರಿಯ ದೇವ ಶಬ್ದ ನಡೆಸುವುದು. ಕ್ರೀಡಾರೂಪದಲ್ಲಿ ಜಗತ್ಸೃಷ್ಟ್ಯಾದಿಗಳನ್ನು ನಡೆಸುವವನು ಎಂಬ ಅರ್ಥದ ದೇವ ಶಬ್ದವು ಜಗತ್ಸೃಷ್ಟ್ಯಾದಿಗಳಿಗೆ ಪ್ರಯೋಜಕವಾಗುವ ಅವನ ಆನಂದ ಹಾಗೂ ಬಲದ ಅಮಿತತ್ವವನ್ನು ಎತ್ತಿತೋರಿಸಬಲ್ಲದು.

ಲಕ್ಷ್ಮೀದೇವಿಯಿಂದ ಪ್ರಾರಂಭಿಸಿ ಪ್ರತಿಯೊಬ್ಬರಿಂದಲೂ ವರಣೀಯ, ಭಜನೀಯ ಎನಿಸುವಷ್ಟು ಐಶ್ವರ್ಯಸಂಪನ್ನನಾಗಿರುವನೆಂದು 'ಭೂಃ' ಶಬ್ದದ ಅರ್ಥಕ್ಕೆ ಪೋಷಕವಾಗಿ ಗಾಯತ್ರಿಯ ವರೇಣ್ಯ ಶಬ್ದವು ತೆರೆದುಕೊಳ್ಳುವುದು. ಜಗದುತ್ಪತ್ತಿಗೆ ಮಾಧ್ಯಮರಾಗಿರುವ ಚತುರ್ಮುಖಾದಿಗಳ ಬುದ್ಧಿಯನ್ನು ಸೃಷ್ಟಿಗೆ ಅನುಕೂಲವಾಗುವಂತೆ ಪ್ರೇರಿಸಿ, ಅವರ ಮೂಲಕ ಜಗತ್ತನ್ನು ಸೃಷ್ಟಿಸುವನು ಎಂದು ಜಗದುತ್ಪಾದಕ ಎಂಬ ಅರ್ಥದ 'ಭುವಃ' ಶಬ್ದವು ಗಾಯತ್ರಿಯ ಧಿಯೋ ಯೋ ನಃ ಪ್ರಚೋದಯಾತ್ ಎಂಬ ಭಾಗದಿಂದ ವ್ಯಾಖ್ಯಾನಿಸಲ್ಪಟ್ಟಂತಾಯಿತು. ಗಾಯತ್ರಿಯ 'ಧೀಮಹಿ' ಶಬ್ದದಿಂದ ಭಗವಂತನ ವ್ಯಕ್ತಿತ್ವವು ಧ್ಯಾನಾರ್ಹವಾದುದೆಂದು ಸೂಚಿಸಲ್ಪಡುವ ಪ್ರಯುಕ್ತ ವ್ಯಾಹೃತಿಯಿಂದ ಹೇಳಲ್ಪಟ್ಟ ಅವನ ಗುಣಗಳು ಧ್ಯಾನಾರ್ಹಗಳಾದ, ಅಪ್ರಾಕೃತಗಳಾದ ಕಲ್ಯಾಣಗುಣಗಳೆಂದು ವ್ಯಾಖ್ಯಾನಿಸಿದಂತಾಗುವುದು.

**ಗಾಯತ್ರೀ–ಪುರುಷಸೂಕ್ತ:**

ಪುರುಷಸೂಕ್ತದಲ್ಲಿ 'ಯಜ್ಞೇನ ಯಜ್ಞಮಯಜಂತ ದೇವಾಃ' ಎಂದು ಮಾನಸಿಕ ಯಜ್ಞವನ್ನು ತಿಳಿಸಿದ್ದು ಅದು ಗಾಯತ್ರಿಯ 'ಧೀಮಹಿ' ಶಬ್ದದ ವ್ಯಾಖ್ಯಾನ.

'ಸಹಸ್ರಶೀರ್ಷಾ ಪುರುಷಃ' ಎಂದು ಪುರುಷನಾಮಕ ಭಗವಂತನ ಸಹಸ್ರಶೀರ್ಷತ್ವಾದಿ ಗುಣಗಳನ್ನು ಉಲ್ಲೇಖಿಸಿ 'ಏತಾವಾನಸ್ಯ ಮಹಿಮಾ ಅತೋ ಜ್ಯಾಯಾಂಶ್ಚ ಪರುಷಃ' ಎಂದು ಪುರುಷನ ಮಹಿಮೆ ಇಷ್ಟೇಯೋ? ಅಲ್ಲ, ಮಾತು ಮನಸು ಪೂರ್ಣವಾಗಿ ಗ್ರಹಿಸಲಾರದಷ್ಟು ಎತ್ತರ ಅವನದ್ದೆಂದು ಬಂದಿರುವ ನಿರೂಪಣೆ ಗಾಯತ್ರಿಯ 'ತತ್' ಶಬ್ದದ ವ್ಯಾಖ್ಯಾನ.

'ತಸ್ಮಾದ್ಯಜ್ಞಾತ್ ಸರ್ವಹುತಃ' ಎಂದು ಆರಂಭಿಸಿ 'ತಥಾ ಲೋಕಾನ ಕಲ್ಪಯನ್' ಎಂಬಲ್ಲಿಯವರೆಗೆ ಹೇಳಲಾದ ವಿರಾಟ್‌ರೂಪಿ ಪರಮಾತ್ಮನಿಂದ ಆದ ಸೃಷ್ಟಿಯನ್ನು ಗಾಯತ್ರಿಯ 'ಸವಿತುಃ' ಶಬ್ದ ತಿಳಿಸಿದೆ.

'ಯಜ್ಞೇನ ಯಜ್ಞಮಯಜಂತ ದೇವಾಃ' ಎಂದು ಮೋಕ್ಷಯೋಗ್ಯ ದೇವತೆಗಳಿಂದಲೂ ಅವನಿಗೆ ಪೂಜ್ಯತ್ವವನ್ನು ಹೇಳುವ ಮಾತನ್ನು ಗಾಯತ್ರಿಯ 'ವರೇಣ್ಯ' ಶಬ್ದ ಎಲ್ಲರಿಂದಲೂ ವರಣೀಯ ಹಾಗೂ ಶ್ರೇಷ್ಠ –ಈ ಎರಡೂ ಅರ್ಥಗಳಲ್ಲಿ ವ್ಯಾಖ್ಯಾನಿಸಿದೆ.

ಗಾಯತ್ರಿಯ 'ಭರ್ಗ' ಶಬ್ದದ ಎಲ್ಲರ ಪೋಷಕ ಹಾಗೂ ಚೇಷ್ಟಕ ಎಂಬ ಅರ್ಥಕ್ಕೆ ಪುರುಷಸೂಕ್ತದ 'ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಂ' ಎಂಬ ಮಾತು ಎಲ್ಲರೂ ಪುರುಷನಾಮಕ ಭಗವಂತನಿಗೆ ಎಲ್ಲ ವಿಷಯ ದಲ್ಲೂ ಅತ್ಯಂತಾಧೀನರು ಎಂದು ಸಾರುವ ಮೂಲಕ ವ್ಯಾಖ್ಯಾನವೆನಿಸಿದೆ.

ಗಾಯತ್ರಿಯ 'ದೇವ' ಶಬ್ದದ ಮೆರೆಯುವವನು ಎಂಬ ಅರ್ಥಕ್ಕೆ ಪುರುಷ ಸೂಕ್ತದ 'ಸಹಸ್ರಶೀರ್ಷಾ ಪುರುಷಃ' ಎಂಬ ಮಾತು ಸಾವಿರಾರು ತಲೆ ಮುಂತಾದ ಅಂಗಾಂಗಗಳನ್ನು ಒಳಗೊಂಡವನಾಗಿರುವನು ಎಂದು ತಿಳಿಸುತ್ತ ಅವನ ಮೆರೆ ಯುವಿಕೆಯ ಮೆರುಗನ್ನು ಸಾರುವ ಮೂಲಕ ವ್ಯಾಖ್ಯಾನವೆನಿಸುವುದು.

ಪುರುಷಸೂಕ್ತದ 'ಸಪ್ತಾಸ್ಯಾಸನ್ ಪರಿಧಯಸ್ತ್ರಿಃಸಪ್ತ ಸಮಿಧಃ ಕೃತಾಃ । ದೇವಾ ಯದ್ಯಜ್ಞಂ ತನ್ವಾನಾ ಅಬಧ್ನನ್ ಪುರುಷಂ ಪಶುಮ್' ಎಂಬ ಮಾತು ಬ್ರಹ್ಮಾದಿದೇವತೆಗಳು ಕೈಕಾಲುಗಳ ಒಟ್ಟು ೨೦ ಬೆರಳುಗಳು ಮತ್ತು ಮಧ್ಯ ದೇಹ –ಹೀಗೆ ಇಪ್ಪತ್ತೊಂದು ಅಧ್ಯಾತ್ಮಹೋಮದ ಸಮಿಧೆಗಳೆಂದು ಭಾವಿಸಿ ತಮ್ಮತಮ್ಮನ್ನೇ ಪಶುವಾಗಿ ಕಲ್ಪಿಸಿ ಮಾನಸಯಜ್ಞದಿಂದ ಭಗವಂತನನ್ನು ಆರಾಧಿಸಿದರೆಂದು ತಿಳಿಸುವ ಮೂಲಕ ಹೀಗೆ ಬ್ರಹ್ಮಾದಿದೇವತೆಗಳನ್ನು ತಮ್ಮನ್ನು ಭಗವಂತನಿಗೆ ನಿವೇದಿಸಿಕೊಳ್ಳಬೇಕೆಂದರೆ ಬುದ್ಧಿ ಮಾತ್ರವಲ್ಲ ತಮ್ಮ ಸ್ವರೂಪ, ಅಸ್ತಿತ್ವಗಳು ಭಗವದಧೀನಗಳೆಂದು ಪರಮಾತ್ಮನ ಸ್ವಾತಂತ್ರ್ಯವನ್ನೂ ತಮ್ಮ ಪಾರತಂತ್ರ್ಯವನ್ನೂ ಚೆನ್ನಾಗಿ ಅನುಸಂಧಾನ ಮಾಡಿದರೆಂದು ಅಭಿಪ್ರಾಯಪಡುತ್ತಾ ಗಾಯತ್ರಿಯ 'ಧಿಯೋ ಯೋ ನಃ ಪ್ರಚೋದಯಾತ್' ಎಂಬ ಭಾಗವು ಚತುರ್ಮುಖನೇ ಮುಂತಾದವನು ನಾರಾಯಣನಿಗೆ ಬುದ್ಧಿಪ್ರೇರಕ ಎಂದು ಉಪಲಕ್ಷಣವಾಗಿ ಹೇಳುತ್ತಿದೆಯಷ್ಟೆ; ಇದರಿಂದ ಅವನ ಸ್ವಾತಂತ್ರ್ಯವನ್ನೂ ಚತುರ್ಮುಖಾದಿಗಳ ಪಾರತಂತ್ರ್ಯವನ್ನೂ ವಿಶ್ಲೇಷಿಸಿಕೊಳ್ಳಬೇಕೆಂದು ಸೂಚ್ಯವಾಗಿ ವ್ಯಾಖ್ಯಾನಿಸುತ್ತಿದೆ.

ಹೀಗೆ ಗಾಯತ್ರಿಯ ಪ್ರತಿಯೊಂದು ಶಬ್ದವೂ ಪುರುಷಸೂಕ್ತದಿಂದ ಚೆನ್ನಾಗಿ ವ್ಯಾಖ್ಯಾನಿಸಲ್ಪಡುತ್ತಿದೆ. ಆದುದರಿಂದಲೇ 'ತದ್ಬೇದಃ ಪೌರುಷಂ ಸೂಕ್ತಮ್' ಎಂದು ಹೇಳಲಾಗಿದೆ.

*

ಪದಾನಿ ಛಂದಸಾಮಹಮ್ (ಭಾಗವತ 11-16-12)

ಪದಾನಿ= ತ್ರಿಪದಾ ಗಾಯತ್ರೀ *(ಶ್ರೀಧರಸ್ವಾಮಿ, ಗಂಗಾಸಹಾಯ, ಶುಕದೇವ, ವಿಶ್ವನಾಥ, ಗಿರಿಧರ ಮುಂತಾದ ವ್ಯಾಖ್ಯಾನಕಾರರು)*

ಛಂದಸಾಂ= ವೇದಾನಾಂ ತ್ರಿಪದಾ ಗಾಯತ್ರೀ *(ವೀರರಾಘವ)*

# ಗಾಯತ್ರೀ ಅಷ್ಟಾಕ್ಷರ

ಸಗ್ರಿ ರಾಘವೇಂದ್ರ ಉಪಾಧ್ಯಾಯ

ಮೂರು ಬಾರಿ ಉಚ್ಚರಿಸಲ್ಪಟ್ಟ ನಾರಾಯಣಾಷ್ಟಾಕ್ಷರಮಂತ್ರದಿಂದ ಅಭಿವ್ಯಕ್ತವಾದುದು ಗಾಯತ್ರೀ ಎಂದು ಸಂದೇಶಿಸುವ ಮೂಲಕ ಗಾಯತ್ರೀಮಂತ್ರ ನಾರಾಯಣಾಷ್ಟಾಕ್ಷರಮಂತ್ರದ ವ್ಯಾಖ್ಯಾನರೂಪದಲ್ಲಿದೆ ಎಂದು ಸೂಚಿಸಲಾಗಿದೆ.

ನಾರಾಯಣನಾಮವು ದೇವರು ಗುಣಪೂರ್ಣನಾದವನೆಂದು (ಅರವಿರುದ್ಧಾಃ ನಾರಾಃ ಗುಣಾಃ ತೇಷಾಮಯನಃ) ತಿಳಿಸುತ್ತಿದ್ದರೆ ಗಾಯತ್ರಿಯ ತತ್ ಶಬ್ದವು ಆ ಅರ್ಥವನ್ನು ಹೇಳಿದೆ. ನರರಿಗೆ ಸಂಬಂಧಪಡುವ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಬಂಧ ಹಾಗೂ ಮೋಕ್ಷ –ಈ ಎಂಟು ಅವಸ್ಥೆಗಳಿಗೆ ನಿಯಾಮಕನಾಗಿದ್ದು ಆಸರೆಯಾಗಿರುವವನು (ನರಾಣಾಂ ಇದಂ ನಾರಂ ಸೃಷ್ಟ್ಯಾದಿ ತಸ್ಯ ನಿಯಾಮಕತಯಾ ಅಯನಃ) ಎಂಬ ನಾರಾಯಣನಾಮದ ಅರ್ಥವನ್ನು ಸೃಷ್ಟಿಯನ್ನು ತಿಳಿಸತಕ್ಕ ಸವಿತೃ ಶಬ್ದ, ಪೋಷಕತ್ವ ಚೇಷ್ಟಕತ್ವವನ್ನು ತಿಳಿಸುವ ಭರ್ಗ ಶಬ್ದ, ಜ್ಞಾನಪ್ರದತ್ವವನ್ನು ತಿಳಿಸುವ ಧಿಯೋ ಯೋ ನಃ ಪ್ರಚೋದಯಾತ್ ಎಂಬ ಭಾಗ ವಿವರಿಸುತ್ತಿದೆ. ಸಂಸಾರಾವಸ್ಥೆಯಲ್ಲಿಯ ರಕ್ಷಣೆಯು ಸ್ವರೂಪಾನಂದದ ಆವಿರ್ಭಾವ ರೂಪವಾದ ಮೋಕ್ಷವು ಪೋಷಣೆಯ ವ್ಯಾಪ್ತಿಯಲ್ಲಿಯೇ ಬರುವುದು. ಧೀ ಪ್ರೇರಕತ್ವದ ವ್ಯಾಪ್ತಿಯಲ್ಲಿ ಅಜ್ಞಾನಪ್ರದತ್ವವು ಅಜ್ಞಾನಮೂಲಕವಾದ ಸಂಸಾರಬಂಧನದ ದಾನವು ಸೇರಿಕೊಳ್ಳುವುದು. ಹೀಗೆ ಸೃಷ್ಟ್ಯಾದಿ ಅಷ್ಟ ಕರ್ತೃತ್ವವು ಗಾಯತ್ರಿಯಿಂದ ಸೂಚಿತವಾಗುವುದು.

ಭಗವಂತನು ಜಗತ್ತಿನ ಸೃಷ್ಟ್ಯಾದಿಗಳನ್ನು ನಡೆಸಿದರೂ ಆ ಪ್ರಯುಕ್ತ ಉದ್ವೇಗ, ಪ್ರಯಾಸ, ಚಿಂತೆ ಮುಂತಾದ ದೋಷಗಳಿಗೆ ಒಳಗಾಗುವುದಿಲ್ಲ. (ಚಿಂತಾದ್ಯಾಃ ದೋಷಾಃ ಅರಾಃ ತೇಷಾಮಯನಃ ನ ಭವತೀತಿ ನಾರಾಯಣಃ) ಎಂಬ ನಾರಾಯಣ ಶಬ್ದದ ಅರ್ಥವನ್ನು ಗಾಯತ್ರಿಯ ದೇವ ಶಬ್ದವು ಸೃಷ್ಟ್ಯಾದಿಗಳನ್ನು ಸ್ವಾರ್ಥವಿಲ್ಲದೆ, ಅನಾಯಾಸವಾಗಿ ಕ್ರೀಡೆಯಂತೆ ನಡೆಸುವನು. (ದೀವ್ಯತಿ ಸೃಷ್ಟ್ಯಾದಿನಾ ಕ್ರೀಡತೇ ಇತಿ ದೇವಃ) ಎಂಬ ಅರ್ಥದ ದೇವ ಶಬ್ದವು ಸಮರ್ಥಿಸುವುದು. ಅವನು ಕಾಂತಿ, ಸುಖ, ಜ್ಞಾನಸ್ವರೂಪಿಯಾಗಿರುವುದರಿಂದ ಅವನಿಗೆ ಆಯಾಸಾದಿಗಳು ಇರಲು ಸಾಧ್ಯವೇ ಇಲ್ಲ ಎಂಬುದಾಗಿ ಭರ್ಗ ಶಬ್ದವು (ಭಾರತಿಜ್ಞಾನರೂಪತ್ವಾತ್ ಭರ್ಗಃ) ಸೂಚಿಸುವುದು. ದೋಷದೂರರಾದ ಮುಕ್ತರಿಗೂ ನಿತ್ಯಮುಕ್ತಳಾದ ಲಕ್ಷ್ಮಿಗೂ ಆಶ್ರಯನಾಗಿರುವನೆಂದು (ನಾರಾಃ ಮುಕ್ತಾಃ ಲಕ್ಷ್ಮೀಶ್ಚ ತೇಷಾಮಯನಃ) ತಿಳಿಸುವ ನಾರಾಯಣ ಶಬ್ದದ ಅರ್ಥಕ್ಕೆ ಪುಷ್ಟಿ ದೊರಕುವಂತೆ ಗಾಯತ್ರಿಯ ವರೇಣ್ಯ ಶಬ್ದವು ಲಕ್ಷ್ಮಿಯೇ ಮುಂತಾದ ಪ್ರತಿಯೊಬ್ಬರಿಂದಲೂ ವರಣೀಯ, ಸೇವ್ಯನಾಗಿರುವನೆಂದು ತಿಳಿಸುತ್ತಿದೆ.

ಜ್ಞಾನಿಗಳಿಗೂ ಆಶ್ರಯ (ನಾರಂ ಜ್ಞಾನಂ ತದ್ವಂತಃ ನಾರಾಃ ಜ್ಞಾನಿನಃ ತೇಷಾಮಯನಃ) ಎಂದು ತಿಳಿಸುವ ನಾರಾಯಣ ಶಬ್ದದ ಅರ್ಥಕ್ಕೆ ಗಾಯತ್ರಿಯ ಧೀಮಹಿ ಶಬ್ದ ಇದೆ. ಮುಕ್ತಿಗಾಗಿ ಜ್ಞಾನಕ್ಕಾಗಿ ಅವನ ನಿರಂತರ ಚಿಂತನೆ ನಡೆಸುವೆವೆಂದು ಉಪಪಾದಿಸಿದಂತಾಗುವುದು.

ವಿನಯ ಹಾಗೂ ಸ್ತುತಿಯನ್ನು ತಿಳಿಸುವ ನಾರಾಯಣಾಷ್ಟಾಕ್ಷರದ 'ನಮಃ' ಶಬ್ದದ ಅರ್ಥ ಗಾಯತ್ರಿಯ ದೇವ ಶಬ್ದದ ಅರ್ಥ ಸಮಾರ್ಥಕವೆನಿಸಬಲ್ಲದು ನಾರಾಯಣಾಷ್ಟಾಕ್ಷರದ ಓಂಕಾರದ ಅರ್ಥವನ್ನು ಗಾಯತ್ರಿಯ ತತ್ ಪದವು ವಿವರಿಸುವುದು.

ಹೀಗೆ ನಾರಾಯಣ ಶಬ್ದದಿಂದ ಭಗವಂತನ ವ್ಯಕ್ತಿತ್ವಕ್ಕೆ ಸಂಬಂಧಿಸಿದಂತೆ ಯಾವ ಅರ್ಥ ಹೊರಡಲಿ ಅದರ ವಿವರಣೆಯನ್ನೋ, ಉಪಪಾದನೆಯನ್ನೋ, ಸ್ಪಷ್ಟೀಕರಣವನ್ನೋ ಗಾಯತ್ರಿಯ ಒಂದಲ್ಲ ಒಂದು ಶಬ್ದ ನಡೆಸುತ್ತಿದೆ.

*

## ಕರ್ಮಫಲಭೋಜಯಿತೃತ್ವ

ಸಕಲಕರ್ಮಗಳನ್ನೂ ಜೀವರಿಂದ ಪರಮಾತ್ಮನೇ ಮಾಡಿಸಿ, ಆ ಪ್ರಯುಕ್ತ ಜೀವರು ಕರ್ಮಫಲಕ್ಕೆ ಭಾಗಿಗಳಾಗುವಂತೆ ಮಾಡುವುದು ಸಮುಚಿತವೇ? ಎಂಬ ಆಕ್ಷೇಪಕ್ಕೆ ಗಾಯತ್ರಿಯ 'ಧಿಯೋ ಯೋ ನಃ ಪ್ರಚೋದಯಾತ್' ಎಂಬ ಭಾಗದಿಂದ ಸಮಾಧಾನ ದೊರಕುವುದು.

ಭಗವಂತನು ಬಲಾತ್ಕಾರದಿಂದ ಕರ್ಮಗಳನ್ನು ಮಾಡಿಸುವುದಿಲ್ಲ. ಆಯಾ ಕರ್ಮಗಳನ್ನು ಮಾಡಲು ಅವರಿಗೆ ಬುದ್ಧಿ ಕೊಡುತ್ತಾನೆ. ಅವರು ಬುದ್ಧಿಪೂರ್ವಕ ವಾಗಿಯೇ ಆಯಾ ಕರ್ಮವನ್ನು ನಡೆಸುತ್ತಾರೆ. ಹೀಗೆ ಬುದ್ಧಿಪೂರ್ವಕವಾಗಿ ಕರ್ಮಗಳನ್ನು ನಡೆಸಿದ್ದರಿಂದ ಅವರು ಅದಕ್ಕೆ ಹೊಣೆಗಾರರಾಗುವರು ತಾನೇ? ಒಂದು ವೇಳೆ ಬುದ್ಧಿಪೂರ್ವಕವಾಗಿ ಅವರು ತೊಡಗದಿದ್ದರೆ ಅವರು ಅದಕ್ಕೆ ಬಾಧ್ಯರೆನಿಸುತ್ತಿರಲಿಲ್ಲ.

ಆದ್ದರಿಂದ ಆಯಾ ಜೀವರಿಗೆ ಕರ್ಮದ ಬಗ್ಗೆ ಬಾಧ್ಯತೆ ಬರುವುದಕ್ಕಾಗಿಯೇ ಭಗವಂತನು ಆಯಾ ಕರ್ಮದ ಬುದ್ಧಿಯನ್ನು ಪ್ರೇರಿಸಿಯೇ ಕರ್ಮವನ್ನು ಮಾಡಿಸುವುದ ರಿಂದ ಅವನು ನಿಷ್ಪಕ್ಷಪಾತಿ ಎನಿಸಬಲ್ಲನು.

— ಶ್ರೀ ವಿದ್ಯಾಮಾನ್ಯತೀರ್ಥರು

# ಗಾಯತ್ರೀ ದ್ವಾದಶಾಕ್ಷರ

ಸಗ್ರಿ ರಾಘವೇಂದ್ರ ಉಪಾಧ್ಯಾಯ

'ವೇದಮಾತಾ ತು ಗಾಯತ್ರೀ ದ್ವಿಗುಣಾ ದ್ವಾದಶಾಕ್ಷರಾತ್' ಎಂದು ಎರಡು ಬಾರಿ ಉಚ್ಚರಿಸಲ್ಪಟ್ಟ ವಾಸುದೇವ ದ್ವಾದಶಾಕ್ಷರ ಮಂತ್ರದಿಂದ ರೂಪುಗೊಂಡದ್ದು ಗಾಯತ್ರೀಮಂತ್ರ ಎಂದು ತಿಳಿಸುವ ಮೂಲಕ ಗಾಯತ್ರೀ ದ್ವಾದಶಾಕ್ಷರದ ವ್ಯಾಖ್ಯಾನ ಎಂದು ಸೂಚಿತ.

ವಾಸುದೇವ ದ್ವಾದಶಾಕ್ಷರ ಮಂತ್ರದಲ್ಲಿ ಇರುವ 'ಓಂ ನಮಃ ಭಗವತೇ ವಾಸುದೇವಾಯ' ಎಂಬ ಶಬ್ದಗಳಿಗೆ ಗಾಯತ್ರಿ ಹೇಗೆ ವ್ಯಾಖ್ಯಾನವೆನಿಸಿದೆ ಎಂಬುದನ್ನು ಪರಿಶೀಲಿಸೋಣ.

'ಭಗ' ಎನಿಸುವ ಸಮಗ್ರ ಐಶ್ವರ್ಯವೇ ಮುಂತಾದ ಆರು ಗುಣಗಳನ್ನು ಹೊಂದಿರುವವನು ನಾರಾಯಣನೆಂದು ಭಗವತ್ ಶಬ್ದ ತಿಳಿಸಿದರೆ ಆ ಆರು ಗುಣಗಳಲ್ಲಿ ಅನಂತಗುಣಗಳೂ ಅಂತರ್ಭಾವವನ್ನು ಹೊಂದುವುದರಿಂದ ಅವನು ಷಡ್ಗುಣಸಂಪನ್ನ ಎಂದರೆ ಅನಂತಕಲ್ಯಾಣಗುಣಪೂರ್ಣ ಎಂದೇ ಅರ್ಥ ಎಂಬುದಾಗಿ ಗಾಯತ್ರಿಯ 'ತತ್' ಶಬ್ದ ಸ್ಪಷ್ಟಪಡಿಸುವುದು. ಮುಖ್ಯವಾಗಿ ಅವನೇ ಭಗವಾನ್ ಎನಿಸುವುದರಿಂದ ಸರ್ವಶ್ರೇಷ್ಠ ಅವನೇ ಎಂಬುದಾಗಿ ಗಾಯತ್ರಿಯ 'ವರೇಣ್ಯಂ' ಶಬ್ದ ತಿಳಿಸಿದೆ.

'ಣಮು ಪ್ರಹ್ವತ್ವೇ ಶಬ್ದೇ ಚ' ಎಂಬ ಧಾತ್ವರ್ಥದ 'ನಮಃ' ಶಬ್ದವು ನಾರಾಯಣನ ಬಗ್ಗೆ ವಿನಯವನ್ನೂ ಸ್ತುತಿಯನ್ನೂ ತಿಳಿಸಿದರೆ ಈ ವಿನಯ ಪೂರ್ವಕ ಸ್ತುತಿಯೇ ಕ್ರಮೇಣ ನಿರಂತರ ಚಿಂತನರೂಪವಾದ ಧ್ಯಾನವಾಗಿ ಪರ್ಯವಸ್ಥಿತವಾಗುವುದೆಂದು ಗಾಯತ್ರಿಯ 'ಧೀಮಹಿ' ಶಬ್ದದ ಅರ್ಥವು 'ನಮಃ' ಶಬ್ದದ ಅರ್ಥಕ್ಕೆ ಪೂರಕವಾಗಿರುವುದು.

'ಸತ್ತ್ವಂ ವಿಶುದ್ಧಂ ವಸುದೇವಸಂಜ್ಞಿತಂ ಯದೀಯತೇ ತತ್ರ ಪುಮಾನಪಾವೃತಃ' ಎಂದು ಭಾಗವತದಲ್ಲಿ ತಿಳಿಸಿರುವಂತೆ ವಸುದೇವ ಎನಿಸುವ ಸಾತ್ತ್ವಿಕರ ನಿರ್ಮಲಾಂತಃಕರಣದಲ್ಲಿ ಅಭಿವ್ಯಕ್ತನಾಗಿರುವುದರಿಂದ ಶ್ರೀಹರಿಯು ವಾಸುದೇವ ಎನಿಸುವನು. ಹೀಗೆ ಸಾತ್ತ್ವಿಕರ ಅಂತಃಕರಣದಲ್ಲಿ ಪ್ರಕಾಶಿಸುವವನೆಂಬ ವಾಸು ದೇವನಾಮದ ಅರ್ಥಕ್ಕೆ ಪೂರಕವಾಗಿ ಗಾಯತ್ರಿಯ ಧೀಮಹಿ ಶಬ್ದವು, ಭಗವಂತನು ಹಾಗೆ ಪ್ರಕಾಶಿಸುವುದರಿಂದಲೇ ಸಾತ್ತ್ವಿಕರು ಅವನನ್ನು ನಿರಂತರ ಚಿಂತನೆ ಮಾಡುತ್ತಿರುವರೆಂದು ಉಪಪಾದಿಸುವುದು. ಸತ್ತ್ವಗುಣಪ್ರಚುರವಾದ ಚತುರ್ಮುಖನ ದೇಹ ವಸುದೇವ ಎನಿಸುತ್ತಿದ್ದು ಅಂತಹ ದೇಹದಲ್ಲಿ ಭಗವಂತನು ವಿಶೇಷವಾಗಿ ವಿರಾಜಿಸುವುದರಿಂದಲೂ ಅವನು ವಾಸುದೇವ

ಎನಿಸುವನು. ಗಾಯತ್ರಿಯ ಮುಖ್ಯ ದ್ರಷ್ಟೃ ಆದ ಚತುರ್ಮುಖನ ಮೂಲಕ ಬಂದಿರುವ ಶಬ್ದ ಧೀಮಹಿ ಎಂದಿಟ್ಟುಕೊಂಡಲ್ಲಿ ಅವನು ವಾಸುದೇವ ಎನಿಸುವುದರಿಂದಲೇ ನಾವು ಅವನನ್ನು ಧೀಮಹಿ ಎಂಬುದಾಗಿ ಇನ್ನಷ್ಟು ಔಚಿತ್ಯಪೂರ್ಣವಾಗಿ ಉಪಪಾದಕವೆನಿಸಬಲ್ಲದು.

'ವಾನಾತ್ ಸೂತೇರ್ದೇವನಾದ್ವಾಸುದೇವೋ ವಾಸಾದ್ದ್ಯುತೇಶ್ಚಾದನಾತ್ ಕ್ರೀಡಯಾ ವಾ ।
ಬಲಾದಸುತ್ವಾದ್ದಾತೃತೋ ವರ್ತನಾಚ್ಚ ತಂ ವಾಸುದೇವಂ ಪ್ರವದಂತಿ ವೇದಾಃ ॥

ಎಂದು ಸೌಕರಾಯಣ ಶ್ರುತಿ ತಿಳಿಸಿರುತ್ತಿರುವಂತೆ ಭಗವಂತನು ಎಲ್ಲವನ್ನೂ ತಿಳಿದಿರುವವನು, ಎಲ್ಲವನ್ನೂ ಉತ್ಪಾದಿಸುವವನು ಹಾಗೂ ಕ್ರೀಡಿಸುವವನು. ಎಲ್ಲೆಡೆ ವಾಸಿಸಿಕೊಂಡಿರುವವನು, ಎಲ್ಲದರ ವಾಸಕ್ಕೆ ಆಶ್ರಯನು, ಪ್ರಕಾಶಿಸುವವನು, ಬಲಸ್ವರೂಪಿ, ಪ್ರಾಣರೂಪಿ, ದಾನಮಾಡುವವನು, ಎಲ್ಲವನ್ನು ನಡೆಸುವವನು –ಈ ಎಲ್ಲ ಕಾರಣಗಳಿಗಾಗಿ ವೇದಗಳು ಅವನನ್ನು ವಾಸುದೇವ ಎಂದು ಕರೆಯುವವು.

ಹೀಗೆ ಬಹುಮುಖವಾಗಿ ಅರ್ಥ ತಿಳಿಸುವ ವಾಸುದೇವ ನಾಮದ ಚಿಂತನೆಯನ್ನು ಗಾಯತ್ರಿ ಬೇರೆ ಬೇರೆ ಪದಗಳಿಂದ ತಿಳಿಸಿದೆ.

ತಾನು ಎಲ್ಲವನ್ನೂ ತಿಳಿದಿದ್ದರಿಂದಲೇ ಉಳಿದವರ ಬುದ್ಧಿಯನ್ನು ಭಗವಂತನು ಪ್ರೇರಿಸುವನು 'ಧಿಯೋ ಯೋ ನಃ ಪ್ರಚೋದಯಾತ್' ಎಂದು ಗಾಯತ್ರಿಯ ಈ ಭಾಗ ಉಪಪಾದಿಸುತ್ತಿದೆ ಎಂದಿಟ್ಟುಕೊಳ್ಳಬಹುದು. ವಾಸುದೇವನು ಬಾಹ್ಯಪ್ರಕಾಶಗಳಿಗೆ ಕಾರಣನಾಗಿರುವುದರಿಂದ ಮಾತ್ರ ಪ್ರಕಾಶಕ ಎನಿಸುವುದಲ್ಲ ಮತ್ತೆ ಎಲ್ಲರ ಬುದ್ಧಿಯ ಪ್ರಕಾಶಕನೂ ಆಗಿರುವನೆಂಬುದನ್ನು 'ಧಿಯೋ ಯೋ ನಃ ಪ್ರಚೋದಯಾತ್' ಎಂಬ ಭಾಗ ವಿವರಿಸುವುದು. ವಾಸುದೇವ ಎಲ್ಲೆಡೆ ವಾಸಮಾಡುವುದಾದರೂ ಆಯಾ ವ್ಯಕ್ತಿಯ ಪೋಷಣೆ ನಡೆಸಲು, ಚಟುವಟಿಕೆಗಳನ್ನು ಪ್ರೇರಿಸಲು ಎಂದು ಗಾಯತ್ರಿಯ 'ಭರ್ಗ' ಶಬ್ದ ಸ್ಪಷ್ಟಪಡಿಸುವುದು. ಸಾತ್ತ್ವಿಕರಸ್ವರೂಪಸುಖವನ್ನು ಬೆಳಗಿಸುವವನು ವಾಸುದೇವನಾದುದರಿಂದ ಎಲ್ಲರಿಂದಲೂ ಭಜನೀಯ ಎರಿದು ಗಾಯತ್ರಿಯ 'ವರೇಣ್ಯ' ಶಬ್ದವು ತಿಳಿಸಿದೆ. ವಾಸುದೇವ ಶಬ್ದದಿಂದ ಸೂಚಿತ ಗುಣಗಳೆಲ್ಲ ಅವನ ಸ್ವರೂಪಾತ್ಮಕಗಳೇ ಆಗಿರುವವಾದರೂ ಭೇದದ ಪ್ರತಿನಿಧಿಯಾದ ವಿಶೇಷದ ಬಲದಿಂದಾಗಿ ಆ ಎಲ್ಲ ಗುಣಗಳು ಅವನಲ್ಲಿ ಇವೆ ಎಂದು ವ್ಯವಹರಿಸಬಹುದು ಎಂಬುದನ್ನು ಗಾಯತ್ರಿಯ 'ದೇವಸ್ಯ ಭರ್ಗಃ' ಎಂಬಲ್ಲಿಯ ಷಷ್ಠೀ ವಿಭಕ್ತಿಯು ಸೂಚಿಸಿದೆ.

ಓಂಕಾರದ ಅರ್ಥವನ್ನು ಗಾಯತ್ರಿಯ ತತ್ ಶಬ್ದ, ನಮಃ ಶಬ್ದದ ಅರ್ಥವನ್ನು ಧೀಮಹಿ ಶಬ್ದ, ಭಗವತ್ ಶಬ್ದದ ಅರ್ಥವನ್ನು ಸವಿತೃ ಮುಂತಾದ ಆರು ಶಬ್ದಗಳು, ವಾಸುದೇವ ಶಬ್ದದ ಅರ್ಥವನ್ನು ಧಿಯೋ ಯೋ ನಃ ಪ್ರಚೋದಯಾತ್ ವಿವರಿಸುವುದೆಂದೂ ಪರಿಶೀಲಿಸಬಹುದಾಗಿದೆ. *

## ಗಾಯತ್ರಿಯ ಸಂಖ್ಯೆ

೨೪ ಅಕ್ಷರದ ಬಹ್ಮಗಾಯತ್ರಿಯನ್ನು ಸಂಖ್ಯೆಯಲ್ಲಿ ನೋಡಿದಾಗ ನೂರು ಆಗುತ್ತದೆ. ಸಂಸ್ಕೃತ ಭಾಷೆಯಲ್ಲಿಯ ಶಬ್ದಗಳನ್ನು ಅಂಕೆಗಳಾಗಿ ನೋಡಿಕೊಳ್ಳುವ ವಿಶಿಷ್ಟ ಕ್ರಮ ಪ್ರೊಂದಿದೆ. ಅದರಲ್ಲಿ ವ್ಯಂಜನಾಕ್ಷರಗಳಿಗೆ ಮಾತ್ರ ಅಂಕೆಯ ಲೆಕ್ಕ. ವಾಕ್ಯದಲ್ಲಿ ಬಂದಾಗ ಸಾಮಾನ್ಯವಾಗಿ ಸಂಕಲನವೆ ಪ್ರಧಾನವಾಗಿರುವುದು. ಇದರಂತೆ ಗಾಯತ್ರಿಯನ್ನು ನೋಡಿದಾಗ ಪೂರ್ಣಾಂಕ ದೊರೆಯುವುದು ವಿಶೇಷವೆನಿಸಿದೆ.

| | | |
|---|---|---|
| ತ–೬ | ಭ–೪ | ಧಿ–೯ |
| ತ್ ಸ–೭ | ರ್ ಗೋ–೩ | ಯೋ–೧ |
| ವಿ–೪ | ದೇ–೮ | ಯೋ–೧ |
| ತುಃ–೬ | ವ–೪ | ನಃ–೦ |
| ವ–೪ | ಸ್ ಯ–೧ | ಪ್ ರ–೨ |
| ರೇ–೨ | ಧೀ–೯ | ಚೋ–೬ |
| ಣ್ ಯಂ–೧ | ಮ–೫ | ದ–೮ |
| | ಹಿ–೮ | ಯಾ(ತ್)–೧ |

ಮನುಷ್ಯ ಶತಾಯುಷಿಯಾಗಿ ಬದುಕಲು ಈ ಮಂತ್ರ ಸೂಚ್ಯವಾಗಿ ತಿಳಿಸಿ ಕೊಟ್ಟಂತಿದೆ. ವ್ಯಾಹೃತಿಯನ್ನು ಸೇರಿಸಿದಾಗ (ಭೂಃ –೪, ಭು –೪, ವಃ –೪, ಸ್ವಃ –೪) ೧೧೬ ಆಗುವುದು. ಇದೂ ಮನುಷ್ಯನ ಆಯುಷ್ಯವೆ. ಬದುಕೊಂದು ಯಜ್ಞವಾದಾಗ ಸವನತ್ರಯದ ಲೆಕ್ಕದಂತೆ ಬಾಲ್ಯ ೨೪, ಯೌವನ ೪೪ ಮತ್ತು ಮುಪ್ಪು ೪೮ ವರ್ಷಗಳು. ಪ್ರಣವ ಸ್ವರಾಕ್ಷರವೆನಿಸಿದ್ದು ಲೆಕ್ಕಕ್ಕೆ ಸಿಗದು. ಆದರೂ ಕೆಲವೆಡೆ ಸ್ವರಾಕ್ಷರವನ್ನು ಸಾಂಖ್ಯಿಕವಾಗಿ ನೋಡಿದ್ದಿದೆ. ಅದರಂತೆ ಅ+ಉ = ಓ ಎಂಬುದಕ್ಕೆ ಅನುಸ್ವಾರ ಬಂದಿದೆ ಎಂದು ತಿಳಿದು ಈ ಎರಡು ಅಕ್ಷರಗಳಿಗೆ ಸಂಖ್ಯೆ ನೀಡಿದರೆ ೧+೩ =೪ ಆಗುವುದು. ಒಟ್ಟು ೧೨೦ ಎನ್ನುವುದೂ ಪೂರ್ಣಾಯುಷ್ಯವೆ. ಗ್ರಹದಶಾಕಾಲವಿದು.

'ಋಷಯೋ ದೀರ್ಘಸಂಧ್ಯಾತ್ವಾದ್ದೀರ್ಘಮಾಯುರವಾಪ್ನುಯುಃ' ಎಂಬ ಆರ್ಷ ವಚನದಂತೆ ಪ್ರಾಚೀನರು ಪೂರ್ಣಾಯುಷ್ಯದಿಂದ ಬದುಕಲು ಕಾರಣ ಅವರ ಜಪ-ತಪಗಳು. ಈ ಮಾತಿನ ಗುಟ್ಟನ್ನು ಗಾಯತ್ರಿ ಸಾಂಖ್ಯಿಕವಾಗಿ ತಿಳಿಸಿಕೊಟ್ಟಂತಿದೆ.

*— ಉಡುಪಿ ರಾಮನಾಥ ಆಚಾರ್ಯ*

* * *

## ಅಂಗನ್ಯಾಸ

**ಚತುರ್ಭಿರ್ಹೃದಯಂ ಪ್ರೋಕ್ತಂ ತ್ರಿಭಿರ್ವರ್ಣೈಃ ಶಿರಃ ಸ್ಮೃತಮ್ ।**
**ಪಂಚಭಿಃ ಸ್ಯಾಚ್ಛಿಖಾ ಪಶ್ಚಾತ್ತ್ರಿಭಿಸ್ತು ಕವಚಂ ಸ್ಮೃತಮ್ ।**
**ಚತುರ್ಭಿರ್ನೇತ್ರಮುದ್ದಿಷ್ಟಂ ಚತುರ್ಭಿಃ ಸ್ಯಾತ್ತದಸ್ತ್ರಕಮ್ ॥**

— *(ಗಾಯತ್ರೀತಂತ್ರ. ೩–೯);*

# ಗಾಯತ್ರಿಯ ಭಾಷ್ಯ : ವಿಷ್ಣುತತ್ವವಿನಿರ್ಣಯ

ಸಗ್ರಿ ರಾಘವೇಂದ್ರ ಉಪಾಧ್ಯಾಯ

ಶ್ರೀಮಧ್ವಾಚಾರ್ಯರ ಪ್ರಕರಣಗ್ರಂಥಗಳಲ್ಲಿ ಒಂದಾದ 'ವಿಷ್ಣುತತ್ವವಿನಿರ್ಣಯ' ಗ್ರಂಥವು ಗಾಯತ್ರೀಮಂತ್ರದ ಭಾಷ್ಯದಂತಿದೆ ಎಂಬುದಾಗಿ ಶ್ರೀವ್ಯಾಸತತ್ವಜ್ಞರು ತಮ್ಮ ವಿಷ್ಣುತತ್ವವಿನಿರ್ಣಯದ ಲಘುಪ್ರಭಾ ಟಿಪ್ಪಣಿಯಲ್ಲಿ ಪ್ರಾರಂಭದಲ್ಲಿ ಪ್ರತಿಪಾದಿಸಿರುವರು.

ತ್ರಿಪಾದರೂಪಿಯಾದ ಶ್ರೀತ್ರಿವಿಕ್ರಮನೇ ಮೂರು ಪರಿಚ್ಛೇದಗಳನ್ನೊಳಗೊಂಡ 'ವಿಷ್ಣುತತ್ವವಿನಿರ್ಣಯ'ಕ್ಕೆ ದೇವತೆಯಾಗಿರುವನೆಂದು ಪ್ರಸ್ತಾವಿಸಿ, ಅಂತಹ ತ್ರಿವಿಕ್ರಮನನ್ನು ಪ್ರತಿಪಾದಿಸುವ ಗಾಯತ್ರೀಮಂತ್ರದ ಭಾಷ್ಯ ವಿಷ್ಣುತತ್ವವಿನಿರ್ಣಯವಾಗಿದೆ ಎಂದು ಉಪಕ್ರಮಿಸಲಾಗಿದೆ.

'ತ್ರಿಪದಾ ಗಾಯತ್ರೀ' ಎಂಬುದಾಗಿ ಮೂರು ಪಾದಗಳನ್ನೊಳಗೊಂಡಿರುವ ಗಾಯತ್ರೀಮಂತ್ರದ ಭಾಷ್ಯರೂಪದಲ್ಲಿ ವಿಷ್ಣುತತ್ವವಿನಿರ್ಣಯ ಹೊರಟಿದೆ ಎಂಬುದಾಗಿ ಅದು ಮೂರು ಪರಿಚ್ಛೇದಗಳನ್ನೊಳಗೊಂಡಿರುವುದರಿಂದಲೂ, ಗಾಯತ್ರಿಯ ಮೊದಲ ಅಕ್ಷರಗಳಾದ 'ತತ್ ಸ' ಸದೃಶಗಳಾದ 'ಸದಾ' ಅಕ್ಷರಗಳಿಂದಲೇ ವಿಷ್ಣುತತ್ವವಿನಿರ್ಣಯವು ಪ್ರಾರಂಭವಾಗುವುದರಿಂದಲೂ, ಗಾಯತ್ರಿಯ ದೇವತೆಯಾದ ಸವಿತೃವಿನ ಹೆಸರಿನ ಮೊದಲ ಅಕ್ಷರದಿಂದ ಪ್ರಾರಂಭವಾಗುತ್ತಿದ್ದು '.....ನಮೋ ನಾರಾಯಣಾಯ ತೇ' ಎಂಬುದಾಗಿ ಕೊನೆಯ ಅಕ್ಷರವಾದ ತಕಾರದಿಂದ ಕೊನೆಗೊಳ್ಳುತ್ತಿರುವುದರಿಂದಲೂ, ಹಾಗೆಯೇ ಕೊನೆಯ ಮಂಗಳಾಚರಣೆಯ ಪದ್ಯದಲ್ಲಿ ಗಾಯತ್ರೀಧ್ಯೇಯನಾದ ನಾರಾಯಣನ ಉಲ್ಲೇಖ ಇರುವುದರಿಂದಲೂ ಸೂಚಿತವಾಗುವುದೆಂದು ಅಭಿಪ್ರಾಯಪಡುವ ಶ್ರೀವ್ಯಾಸತತ್ವಜ್ಞರು ಬ್ರಹ್ಮಮೀಮಾಂಸಾಶಾಸ್ತ್ರವು ಸರ್ವಶಾಸ್ತ್ರನಿರ್ಣಾಯಕವಾಗಿರುವುದರಿಂದ, ಅಂತಹ ಮೀಮಾಂಸಾಶಾಸ್ತ್ರದ ಏಕದೇಶಸಂಬದ್ಧವಾಗಿರುವ ವಿ.ತ. ವಿನಿರ್ಣಯಪ್ರಕರಣವು ವೇದೈಕದೇಶವಾಗಿರುವ ಗಾಯತ್ರೀಮಂತ್ರದ ನಿರ್ಣಾಯಕವಾಗಿ ಭಾಷ್ಯ ಎನಿಸುವುದರಲ್ಲಿ ಏನೂ ಅನೌಚಿತ್ಯವಿಲ್ಲ ಎಂದು ಅಭಿಪ್ರಾಯಪಟ್ಟಿರುವರು.

'ಓಂ ತತ್‌ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ' ಎಂದು ಭಗವದ್ಗೀತೆಯಲ್ಲಿ ಪರಬ್ರಹ್ಮನ ನಾಮಗಳೆಂದು ಪರಿಗಣಿಸಲ್ಪಟ್ಟ 'ತತ್' ಪದದಿಂದ ಪ್ರಾರಂಭಿಸಲ್ಪಡುವ ಮೂಲಕ ಗಾಯತ್ರಿಗೆ ಬ್ರಹ್ಮವಿದ್ಯಾತ್ವವು ಸೂಚಿತವಾಗುವಂತೆ, ವಿ.ತ.ವಿ. ಪ್ರಕರಣಕ್ಕೆ 'ಸತ್' ಪದದಿಂದ ಪ್ರಾರಂಭಿಸಲ್ಪಡುವುದರಿಂದ ಗಾಯತ್ರಿಯ ಭಾಷ್ಯವಾಗಿರುವ ಪ್ರಯುಕ್ತ ಬ್ರಹ್ಮವಿದ್ಯಾತ್ವವು ಸೂಚಿತವಾಗಿದೆ.

**ಅಂತರಂಗದ ಸೂಚನೆ:**

ಹೀಗೆ ವಿ.ತ.ವಿನಿರ್ಣಯ ಗಾಯತ್ರಿಯ ಭಾಷ್ಯರೂಪದಲ್ಲಿದೆ ಎಂಬುದಕ್ಕೆ ಕೆಲವು ಬಾಹ್ಯಸೂಚಕಗಳನ್ನು ತೋರಿಸಿಕೊಟ್ಟ ಶ್ರೀವ್ಯಾಸತತ್ವಜ್ಞರು ಅಂತರಂಗದ ಸೂಚನೆಯಾಗಿ ಅರ್ಥದ ಪರಿಶೀಲನೆಯಿಂದಲೂ ವಿ.ತ.ವಿನಿರ್ಣಯ ಗಾಯತ್ರಿಯ ಭಾಷ್ಯ ಎಂಬುದು ಸ್ಪಷ್ಟವಾಗುವುದೆಂದು ಪ್ರತಿಪಾದಿಸಿರುವರು.

ಗಾಯತ್ರಿಯ ತತ್ ಶಬ್ದದ ಅರ್ಥವನ್ನೇ 'ನಿರ್ದೋಷಾಶೇಷಸದ್ಗುಣಮ್' ಎಂಬ ವಿಶೇಷಣದಿಂದ ಸೂಚಿಸಿದ್ದು, ಅದರ ಸಮರ್ಥನೆ ವಿ.ತ.ವಿ.ಯದ ಮೂರನೇ ಪರಿಚ್ಛೇದದಲ್ಲಿ ನಡೆಸಲಾಗುವುದು. ಗಾಯತ್ರಿಯ 'ವರೇಣ್ಯಮ್' ಎಂಬ ಶಬ್ದದ ಅರ್ಥವನ್ನು 'ಸಮತೀತಕ್ಷರಾಕ್ಷರಮ್' ಅಥವಾ 'ಸದಾಗಮೈಕ ವಿಜ್ಞೇಯಮ್' ಎಂಬ ವಿಶೇಷಣದಿಂದ ಸೂಚಿಸಿದ್ದು ಅದರ ವಿವರಣೆ ಎರಡನೇ ಅಥವಾ ಒಂದನೇ ಪರಿಚ್ಛೇದದಲ್ಲಿ ಮಾಡಲಾಗಿದೆ. ಸವಿತೃಶಬ್ದಾರ್ಥದ ಸೂಚನೆ 'ಸಮತೀತಕ್ಷರಾಕ್ಷರಮ್' ಎಂಬ ವಿಶೇಷಣದಿಂದ ಮಾಡಲಾಗಿದ್ದು ಅದರ ವಿವರಣೆ ಎರಡನೇ ಪರಿಚ್ಛೇದದಲ್ಲಿ ಮಾಡಲಾಗಿದೆ. ಭರ್ಗಶಬ್ದದ ಅರ್ಥದ ಸೂಚನೆಯನ್ನು 'ಅಶೇಷಸದ್ಗುಣಮ್' ಎಂಬ ವಿಶೇಷಣದಿಂದ ಮಾಡಿ, ಅದರ ವಿವರಣೆಯನ್ನು ಮೂರನೇ ಪರಿಚ್ಛೇದದಲ್ಲಿ ನಡೆಸಲಾಗಿದೆ.

ಶ್ರೀಜಯತೀರ್ಥರೂ ತಮ್ಮ ಟೀಕೆಯ 'ವಿಶ್ವಸ್ಯೋದಯಮಾತನೋತಿ....' ಎಂಬ ಮಂಗಳಾಚರಣೆಯಲ್ಲಿ ಗಾಯತ್ರಿಯ ಅರ್ಥದ ಛಾಯೆ ಮೂಡುವಂತೆ ಶಬ್ದಗಳನ್ನು ಬಳಸಿರುವರು. 'ತಂ' ಪದದಿಂದ ಗಾಯತ್ರಿಯ 'ತತ್' ಶಬ್ದದ, 'ದೇವಂ' ಪದದಿಂದ ಗಾಯತ್ರಿಯ 'ದೇವಸ್ಯ' ಶಬ್ದದ, 'ಪಿತರಂ' ಶಬ್ದದಿಂದ ಗಾಯತ್ರಿಯ 'ಸವಿತುಃ' ಶಬ್ದದ, 'ಗುರುತಮಂ' ಶಬ್ದದಿಂದ ಗಾಯತ್ರಿಯ 'ಧಿಯೋ ಯೋ ನಃ ಪ್ರಚೋದಯಾತ್' ಎಂಬ ಭಾಗದ, 'ರಮಾವಲ್ಲಭಂ' ಎಂಬ ಶಬ್ದದಿಂದ ಆದರಕ್ಕೆ ಸಂಬಂಧಿಯನ್ನು ಸೂಚಿಸುವ ಮೂಲಕ 'ವರೇಣ್ಯಂ' ಎಂಬ ಗಾಯತ್ರಿಯ ಶಬ್ದದ, 'ವಂದೇ' ಎಂಬ ಶಬ್ದದಿಂದ ಧ್ಯಾನ ಮತ್ತು ವಂದನ ಗಳೆರಡೂ ಮನೋವ್ಯಾಪಾರಗಳಾಗಿರುವ ಪ್ರಯುಕ್ತ ಗಾಯತ್ರಿಯ 'ಧೀಮಹಿ' ಶಬ್ದದ ಅರ್ಥಸೂಚನೆಯನ್ನು ನಡೆಸಿದಂತಾಗಿದೆ.

ಈ ರೀತಿಯಾಗಿ ವಿಷ್ಣುತತ್ವವಿನಿರ್ಣಯದ ಮಂಗಲಾಚರಣೆಯ ಪದ್ಯವನ್ನೂ, ಅದರ ಟೀಕೆಯ ಪದ್ಯವನ್ನೂ ಪರಿಶೀಲಿಸಿದಾಗ ಮೂರು ಪರಿಚ್ಛೇದಾತ್ಮಕವಾದ ವಿಷ್ಣುತತ್ವವಿನಿರ್ಣಯ ಗಾಯತ್ರೀಮಂತ್ರದ ಭಾಷ್ಯರೂಪದಲ್ಲಿ ಹೊರಟಿದೆ ಎಂಬುದು ಸ್ಪಷ್ಟವಾಗದಿರದು.

*

ಅಗ್ರಂ ವೈ ಛಂದಸಾಂ ಗಾಯತ್ರೀ

— (ಬಹ್ವೃಚೋಪನಿಷತ್)

# ಗಾಯತ್ರೀಪುರಾಣ

ಕೆ. ರಾಘವೇಂದ್ರ ಪುರಾಣಿಕ

ಪುರಾಣಗಳಲ್ಲಿ ಸಾತ್ತ್ವಿಕಪುರಾಣಗಳೆಂದು ಪರಿಗಣಿತಗಳಾಗಿರುವ ಭಾಗವತ, ವಿಷ್ಣುಪುರಾಣ, ಗಾರುಡಪುರಾಣ, ಪಾದ್ಮಪುರಾಣ, ನಾರದೀಯಪುರಾಣ ಹಾಗೂ ವಾರಾಹಪುರಾಣಗಳಲ್ಲಿ ಗಾಯತ್ರಿಯ ಬಗ್ಗೆ ವಿಶೇಷ ವಿವರಣೆ ಸಿಗುವುದಿಲ್ಲ. ಅವುಗಳಲ್ಲಿಯೂ ಗಾರುಡಪುರಾಣವು ಹೇಳುವಂತೆ ಕಲಿಯುಗದಲ್ಲಿ ಮುಖ್ಯವಾಗಿ ಹರಿಪ್ರಿಯವೆನಿಸಿರುವ ಮೂರು ಪುರಾಣಗಳಲ್ಲಿ ಒಂದಾದ ಭಾಗವತದಲ್ಲಿ ಗಾಯತ್ರೀಮಂತ್ರದ ಕುರಿತು ಅರ್ಥವಿಶೇಷದ ಬಗೆಗಾಗಲೀ, ಅನುಷ್ಠಾನಕ್ರಮದ ಕುರಿತಾಗಲೀ ಅಥವಾ ವಿನಿಯೋಗದ ಬಗ್ಗೆ ವಿವರಣೆಯಾಗಲೀ ಸಿಗುವುದಿಲ್ಲ. ಗಾಯತ್ರೀಮಂತ್ರವನ್ನು ಬ್ರಹ್ಮಚಾರಿಯು ಪಠಿಸಬೇಕು ಎನ್ನುವುದನ್ನು ಭಾಗವತ ಹೇಳುತ್ತದೆ ಇನ್ನೊಂದು ಪುರಾಣವಾದ ವಿಷ್ಣುಪುರಾಣದಲ್ಲಿಯೂ ಕೆಲವು ವಿವರಣೆಯನ್ನು ಕಾಣಬಹುದು. ಗಾರುಡಪುರಾಣದ ಬ್ರಹ್ಮಕಾಂಡದಲ್ಲಿ ಗಾಯತ್ರೀಮಂತ್ರದ ಬಗ್ಗೆ ವಿವರಣೆ ಸಿಗುವುದಿಲ್ಲ.

ಆದರೆ ಪಾದ್ಮಪುರಾಣದಲ್ಲಿ ಗಾಯತ್ರಿಯ ಬಗ್ಗೆ ಸಾಕಷ್ಟು ಮಾಹಿತಿ ಸಿಗುತ್ತದೆ. ಸೃಷ್ಟಿಖಂಡದ ೪೮ನೆಯ ಅಧ್ಯಾಯದಲ್ಲಿ ಬ್ರಹ್ಮ-ನಾರದರ ಸಂವಾದ ರೂಪದಲ್ಲಿ ಮೂಡಿಬಂದ ಈ ವಿವರಣೆ ಕೆಲವು ಅಪೂರ್ವ ವಿಷಯಗಳನ್ನು ಒಳಗೊಂಡಿದೆ. ಪ್ರಾಣಾಯಾಮಪೂರ್ವಕವಾಗಿ ಗಾಯತ್ರೀಮಂತ್ರವನ್ನು ಜಪಿಸುವವನು ಕೋಟಿಜನ್ಮಗಳಲ್ಲಿ ಮಾಡಿದ ಸರ್ವಪಾಪಗಳಿಂದ ಮುಕ್ತಿಯನ್ನು ಪಡೆಯುತ್ತಾನೆ ಎನ್ನುವುದಾಗಿ ಗಾಯತ್ರಿಯ ಮಹತ್ತ್ವವು ಪ್ರತಿಪಾದಿತವಾಗಿದೆ. ವಿಶೇಷವಾಗಿ ಗಾಯತ್ರೀಮಂತ್ರದ ೨೪ ಅಕ್ಷರಗಳಿಗೆ ಒಂದೊಂದು ದೇವತೆ ನಿಯಾಮಕರಾಗಿದ್ದಾರೆ ಎನ್ನುವುದನ್ನು ಈ ಅಧ್ಯಾಯ ತಿಳಿಸುತ್ತದೆ. ಒಟ್ಟು ೭ ಶ್ಲೋಕಗಳಲ್ಲಿ ಪ್ರತ್ಯಕ್ಷರ ದೇವತೆಗಳನ್ನು ಹೇಳಿ ಕೊನೆಯಲ್ಲಿ ಫಲವನ್ನು ತಿಳಿಸಿದೆ–

**ಜ್ಞಾತ್ವಾ ತು ದೇವತಾಃ ತಸ್ಯ ವಾಙ್ಮಯಂ ವಿದಿತಂ ಭವೇತ್ ।**
**ಸರ್ವಪಾಪವಿನಿರ್ಮುಕ್ತೋ ಬ್ರಹ್ಮಣಃ ಪದವೀಂ ವ್ರಜೇತ್ ॥**

ಅಲ್ಲದೆ ಗಾಯತ್ರಿಯ ಒಂದೊಂದು ಅಕ್ಷರವನ್ನು ದೇಹದ ಒಂದೊಂದು ಭಾಗದಲ್ಲಿ ನ್ಯಾಸಮಾಡಬೇಕು ಎನ್ನುವ ವಿವರಣೆಯ ಜೊತೆಯಲ್ಲಿ ಹೃದಯ, ಶಿರಸ್ಸು, ಶಿಖಾ, ದೇಹ, ನೇತ್ರ, ಕರ –ಎನ್ನುವ ಆರು ಅಂಗಗಳಲ್ಲಿ ನ್ಯಾಸ ಮಾಡುವ ಇನ್ನೊಂದು ನ್ಯಾಸಪದ್ಧತಿಯನ್ನು ತಿಳಿಸಿ ಅದನ್ನು ಸಂಧ್ಯಾವಂದನ ಕಾಲದಲ್ಲಿ ಮಾಡಬೇಕು ಎಂದು ತಿಳಿಸುತ್ತದೆ. ಹಾಗೆಯೇ ವ್ಯಾಹೃತಿಸಹಿತವಾದ, ದಶ ಓಂಕಾರಯುಕ್ತವಾದ ಗಾಯತ್ರಿಯನ್ನೂ, ಷಟ್‌ಕುಕ್ಷಿಲಕ್ಷಣರೂಪಗಾಯತ್ರಿ

ಯನ್ನೂ, ಪಂಚಶೀರ್ಷಲಕ್ಷಣರೂಪಗಾಯತ್ರಿಯನ್ನೂ –ಹೀಗೆ ಮೂರು ವಿಧವಾಗಿ ಗಾಯತ್ರೀಮಂತ್ರವನ್ನು ಈ ಪುರಾಣ ಉಲ್ಲೇಖಿಸಿದೆ.

ಇದರ ಜೊತೆಯಲ್ಲಿಯೇ '**ಗಾಯತ್ರೀಂ ಅಕ್ಷಮಾಲಾಯಾಂ ಸಾಯಂ ಪ್ರಾತಶ್ಚ ಯೋ ಜಪೇತ್ । ಚತುರ್ಣಾಮಪಿ ವೇದಾನಾಂ ಫಲಂ ಪ್ರಾಪ್ನೋತ್ಯಸಂಶಯಮ್**' ಎನ್ನುವುದಾಗಿ ಗಾಯತ್ರೀಮಂತ್ರದ ಗಣನೆ ಅಕ್ಷರಮಾಲೆಯ ಮೂಲಕ ನಡೆಯ ಬೇಕು ಎಂದು ತಿಳಿಸಿರುವುದು ಮಂತ್ರಸಿದ್ಧಿಗಾಗಿ ಜಪಿಸುವ ಸಂದರ್ಭದಲ್ಲಿ ತಿಳಿಯ ಬಹುದಾಗಿದೆ.

ಇದೇ ಪುರಾಣದ ಸ್ವರ್ಗಖಂಡದ ೫೩ನೆಯ ಅಧ್ಯಾಯದಲ್ಲಿ ವ್ಯಾಸರ ಮಾತಿನಲ್ಲಿ ಮತ್ತೆ ೮ ಶ್ಲೋಕಗಳಲ್ಲಿ ಗಾಯತ್ರೀಮಂತ್ರದ ಬಗ್ಗೆ ವಿವರಣೆ ಸಿಗುತ್ತದೆ.

**ಏಷ ಮಂತ್ರೋ ಮಹಾಯೋಗಃ ಸಾರಾತ್ಸಾರ ಉದಾಹೃತಃ ।**
**ಯೋಽಧೀತೇಽಹನ್ಯಹನ್ಯೇತಾಂ ಗಾಯತ್ರೀಂ ವೇದಮಾತರಮ್ ॥**
**ವಿಜ್ಞಾಯಾರ್ಥಂ ಬ್ರಹ್ಮಚಾರೀ ಸ ಯಾತಿ ಪರಮಾಂ ಗತಿಮ್ ।**
**ಗಾಯತ್ರೀ ವೇದಜನನೀ ಗಾಯತ್ರೀ ಲೋಕಪಾವನೀ ।**
**ಗಾಯತ್ರ್ಯಾ ನ ಪರಂ ಜಪ್ಯಂ ಏತದ್ವಿಜ್ಞಾಯ ಮುಚ್ಯತೇ ॥**

ಈ ರೀತಿಯಲ್ಲಿ ಗಾಯತ್ರೀಮಂತ್ರದ ಜಪದಿಂದ ಉಂಟಾಗುವ ಫಲವನ್ನು ಹೇಳಿ ಮುಂದೆ ಮೂರು ವ್ಯಾಹೃತಿಗಳಿಗೆ ಕ್ರಮವಾಗಿ ವಿಷ್ಣು, ಬ್ರಹ್ಮ, ಮಹೇಶ್ವರರು ನಿಯಾಮಕರೆಂದೂ; ಸತ್ತ್ವ, ರಜಸ್ಸು ಹಾಗೂ ತಮೋಗುಣಗಳಿಗೆ ನಿಯಾಮಕಗಳೆಂದೂ ಮತ್ತು ಆ ಮೂರು ವ್ಯಾಹೃತಿಗಳು ಎಲ್ಲಾ ಅಶುಭಗಳನ್ನು ನಾಶಮಾಡುವವುಗಳೆನ್ನುವ ವಿವರಣೆ ಬಂದಿದೆ.

ಇದೇ ರೀತಿಯ ಆನುಪೂರ್ವಿಯನ್ನು ಹೊಂದಿರುವ ಶ್ಲೋಕಗಳು ಕೂರ್ಮ ಪುರಾಣದ ಉತ್ತರಾರ್ಧ ಭಾಗದಲ್ಲಿ ವ್ಯಾಸಗೀತಾದ ೧೪ನೆಯ ಅಧ್ಯಾಯದಲ್ಲಿ ಬರುತ್ತವೆ. ಇದರೊಂದಿಗೆ ಕೂರ್ಮಪುರಾಣ ಅನೇಕ ಕಡೆಗಳಲ್ಲಿ ಗಾಯತ್ರೀ ಮಂತ್ರದ ವಿವಿಧ ಮುಖಗಳ ಕುರಿತಾಗಿ ಬೆಳಕುಚೆಲ್ಲುತ್ತದೆ.

ಸಾಯಂಕಾಲದಲ್ಲಿ ಗಾಯತ್ರೀಜಪವನ್ನು ಮಾಡುವಾಗ ಜಪ ಮಾಡುವವನು ಪಶ್ಚಿಮಕ್ಕೆ ಅಭಿಮುಖನಾಗಿ ಕುಳಿತಿರಬೇಕು ಎಂದು ಹೇಳಿದೆ–

**ತತಃ ಸಂಧ್ಯಾಮುಪಾಸೀತ ಪೂರ್ವೋಕ್ತವಿಧಿನಾ ಶುಚಿಃ ।**
**ಆಸೀನಶ್ಚ ಜಪೇದ್ದೇವೀಂ ಗಾಯತ್ರೀಂ ಪಶ್ಚಿಮಾಂ ಪ್ರತಿ ॥**

ಪ್ರಾತಃಕಾಲದಲ್ಲಿ ನಿಂತುಕೊಂಡು ಗಾಯತ್ರೀಯನ್ನು ಪಠಿಸಬೇಕು ಹಾಗೂ ಸಾಯಂಕಾಲದಲ್ಲಿ ಕುಳಿತುಕೊಂಡು ಗಾಯತ್ರೀಯನ್ನು ಜಪಿಸಬೇಕು. ಇಲ್ಲದಿದ್ದರೆ ಅಂತಹವನು ಎಲ್ಲಾ ಕರ್ಮಗಳಲ್ಲಿ ನಿಂದಿತನೆನಿಸುತ್ತಾನೆ ಎನ್ನುವ ವಿಧಿವಾಕ್ಯವೂ ಈ ಪುರಾಣದಲ್ಲಿ ಬಂದಿದೆ.

**ನ ತಿಷ್ಠತಿ ಚ ಯಃ ಪೂರ್ವಾಂ ನಾಸ್ತೇ ಸಂಧ್ಯಾಂ ತು ಪಶ್ಚಿಮಾವ್ ।**
**ಸ ಶೂದ್ರೇಣ ಸಮೋ ಲೋಕೇ ಸರ್ವಕರ್ಮವಿಗರ್ಹಿತಃ ॥**
*(ಕೂ.ಪು.ಉತ್ತರಾರ್ಧ, ೧೬-೨೬)*

ಅರ್ಘ್ಯಪ್ರದಾನ ಕಾಲದಲ್ಲಿ ಗಾಯತ್ರೀಮಂತ್ರದ ವಿನಿಯೋಗದ ಕ್ರಮವನ್ನು ಈ ಪುರಾಣ ಬಹಳ ಸ್ಪಷ್ಟವಾಗಿ ತಿಳಿಸಿದೆ. ಓಂಕಾರ ವ್ಯಾಹೃತಿಗಳೊಂದಿಗೆ ಗಾಯತ್ರೀಯನ್ನು ಜಪಿಸಿ ಸೂರ್ಯನಿಗೆ ಅರ್ಘ್ಯವನ್ನು ನೀಡಬೇಕು-

**ಓಂಕಾರವ್ಯಾಹೃತಿಯುತಾಂ ಗಾಯತ್ರೀಂ ವೇದಮಾತರಮ್ ।**
**ಜಪ್ತ್ವಾ ಜಲಾಂಜಲಿಂ ದದ್ಯಾತ್ ಭಾಸ್ಕರಂ ಪ್ರತಿ ತನ್ಮನಾಃ ॥**
*(ಕೂ.ಪು.ಉತ್ತರಾರ್ಧ, ೧೮-೨೪)*

ಸ್ನಾನಕಾಲದಲ್ಲಿಯೂ ಗಾಯತ್ರೀಮಂತ್ರವನ್ನು ಈ ರೀತಿಯಲ್ಲಿ ವಿನಿಯೋಗಿಸಬೇಕು ಎನ್ನುವುದನ್ನು ಈ ಪುರಾಣದಲ್ಲಿ ಕಾಣಬಹುದು. ಮೂರು ಸಲ ಮುಳುಗಿ 'ಅಂತಶ್ಚರಸಿ......ವಷಟ್ಕಾರಃ ಆಪೋ ಜ್ಯೋತೀರಸೋಽಮೃತಂ' ಎಂಬುದಾಗಿ ಹೇಳಿ 'ದ್ರುಪದಾಮ್......' ಎನ್ನುವ ಯಜುರ್ವೇದದ ಮಂತ್ರವನ್ನು ಪಠಿಸಬೇಕು. ಅಥವಾ ವ್ಯಾಹೃತಿಪ್ರಣವಯಕ್ತವಾಗಿ ಗಾಯತ್ರೀಯನ್ನು ಮೂರು ಭಾರಿ ಪಠಿಸಬೇಕು.

**ದ್ರುಪದಾಂ ವಾ ತ್ರಿರಭ್ಯಸೇತ್ ವ್ಯಾಹೃತಿಪ್ರಣವಾನ್ವಿತಾಮ್ ।**
**ಸಾವಿತ್ರೀಂ ವಾ ಜಪೇತ್ ವಿದ್ವಾನ್ ॥** *(೧೮-೬೫)*

**(ದ್ರುಪದಾಮಿವ ಯೋ ಮಂತ್ರಃ ಯಜುರ್ವೇದೇ ಪ್ರತಿಷ್ಠಿತಃ)**

ಹಾಗೆಯೇ ನೀರಿನಲ್ಲಿ ಮುಳುಗಿಕೊಂಡು 'ಅಘಮರ್ಷಣಸೂಕ್ತ' ಅಥವಾ 'ದ್ರುಪದಾಮ್' ಎನ್ನುವ ಮಂತ್ರವನ್ನು ಅಥವಾ ಗಾಯತ್ರೀಯನ್ನು ಪಠಿಸಬೇಕು.

**ದ್ರುಪದಾಂ ವಾಥ ಸಾವಿತ್ರೀಮ್ ।** *(೧೮-೬೯)*

ವರಾಹ, ವಾಮನ, ವಾಯು, ಲಿಂಗ, ಬ್ರಹ್ಮವೈವರ್ತ, ಮತ್ಸ್ಯಪುರಾಣಗಳಲ್ಲಿ ಗಾಯತ್ರಿಯ ಬಗ್ಗೆ ವಿವರಣೆ ಸಿಗುವುದಿಲ್ಲ. ಆದರೆ ನಾರದೀಯ ಪುರಾಣದಲ್ಲಿ ಗಾಯತ್ರಿಯ ಬಗ್ಗೆ ವಿವರಣೆ ದೊರಕುತ್ತದೆ. ದೋಷಗಳಿಗೆ ಪ್ರಾಯಶ್ಚಿತ್ತವನ್ನು ಹೇಳುವ ಸಂದರ್ಭದಲ್ಲಿ ಊಟಮಾಡುತ್ತಿರುವಾಗ ವಾಂತಿ ಆದರೆ ಊಟ ಮಾಡುವ ವ್ಯಕ್ತಿಯು ಆರೋಗ್ಯವಂತ ಅಲ್ಲದಿದ್ದರೆ ಪ್ರಾಯಶ್ಚಿತ್ತರೂಪದಲ್ಲಿ ಮುನ್ನೂರು ಸಲ ಗಾಯತ್ರೀಯನ್ನು ಪಠಿಸಬೇಕು. ಒಂದುವೇಳೆ ಊಟಮಾಡುವ ವ್ಯಕ್ತಿ ಆರೋಗ್ಯವಂತನಾಗಿದ್ದರೆ ಅವನು ಪ್ರಾಯಶ್ಚಿತ್ತರೂಪದಲ್ಲಿ ಮೂರುಸಾವಿರ ಗಾಯತ್ರೀಮಂತ್ರವನ್ನು ಪಠಿಸಬೇಕು ಎನ್ನುವುದಾಗಿ ಹೇಳಲಾಗಿದೆ.

**ಅಶ್ನತಶ್ಚೇದ್ವಮಿಃ ಸ್ಯಾದ್ವೈ ಹ್ಯಸ್ವಸ್ಥಃ ತ್ರಿಶತಂ ಜಪೇತ್ ।**
**ಸ್ವಸ್ಥಃ ತ್ರೀಣಿ ಸಹಸ್ರಾಣಿ ಗಾಯತ್ರ್ಯಾಃ ಶೋಧನಂ ಪರಮ್ ॥** *(೧೪-೬)*

ಉಪನಯನಕ್ಕೆ ಯೋಗ್ಯವಾದ ಕಾಲವನ್ನು ಚತುರ್ವರ್ಣದವರಿಗೆ ವಿಧಾನ ಮಾಡಿ ಒಂದು ವೇಳೆ ಅಂತಹ ಕಾಲವೂ ಮೀರಿಹೋದರೆ ಅಂತಹವನಿಗೆ ಉಪನಯನವಾದರೂ ಅವನು 'ಸಾವಿತ್ರೀಪತಿತ' ಎಂದೆನಿಸುತ್ತಾನೆ ಎಂದು ಹೇಳುವುದರ ಮೂಲಕ ಗಾಯತ್ರಿಯ ಮಹತ್ತ್ವದ ಬಗ್ಗೆ ಮಾತನ್ನು ಈ ಪುರಾಣದಲ್ಲಿ ಕಾಣಬಹುದು.

ಗಾಯತ್ರೀಯನ್ನು ಎಷ್ಟು ಪಠಿಸಬೇಕು ಎನ್ನುವ ಪ್ರಶ್ನೆಗೆ ಉತ್ತರರೂಪದಲ್ಲಿ 'ಸ್ವಕಲ್ಪೋಕ್ತಾಂ ಚ ಗಾಯತ್ರೀಂ ಜಪೇತ್ ಅಷ್ಟೋತ್ತರಂ ಶತಮ್ । ಅಷ್ಟಾವಿಂಶತಿ ವಾರಂ ವಾ' ಎನ್ನುವುದಾಗಿ ೧೦೮ ಅಥವಾ ೨೮ ಬಾರಿ ಪಠಿಸಬೇಕು ಅಂತ ಹೇಳಿದೆ. ಹಾಗೆಯೇ ಪ್ರಾತಃಕಾಲ, ಮಧ್ಯಾಹ್ನಕಾಲ ಹಾಗೂ ಸಾಯಂಕಾಲಗಳಲ್ಲಿ ಧ್ಯಾನಮಾಡಬೇಕಾದ ರೂಪಗಳನ್ನು ನಾರದೀಯಪುರಾಣ ಈ ರೀತಿ ತಿಳಿಸಿದೆ.

ಉದ್ಯದಾದಿತ್ಯಸಂಕಾಶಾಂ ಪುಸ್ತಕಾಕ್ಷಕರಾಂಬುಜಾಮ್ ।
ಕೃಷ್ಣಾಜಿನಾಂಬರಾಂ ಬ್ರಾಹ್ಮೀಂ ಧ್ಯಾಯೇತ್ ತಾರಾಂಕಿತೇಽಂಬರೇ ॥
ಮಧ್ಯಾಹ್ನೇ ವರದಾಂ ದೇವೀಂ ಪಾರ್ವತೀಂ ಸಂಸ್ಮರೇತ್ ಪರಾಮ್ ।
ಶುಕ್ಲಾಂಬರಾಂ ವೃಷಾರೂಢಾಂ ತ್ರಿನೇತ್ರಾಂ ರವಿಬಿಂಬಗಾಮ್ ॥
ವರಂ ಪಾಶಂ ಚ ಶೂಲಂ ಚ ದಧಾನಾ ನೃಕರೋಟಿಕಾಮ್ ।
ಸಾಯಾಹ್ನೇ ರತ್ನಭೂಷಾಢ್ಯಾಂ ಪೀತಕೌಶೇಯವಾಸಸಮ್ ॥
ಶ್ಯಾಮರಂಗಾಂ ಚತುರ್ಹಸ್ತಾಂ ಶಂಖಚಕ್ರಲಸತ್ಕರಾಮ್ ।
ಮಹಾಪದ್ಮಧರಾಂ ದೇವೀಂ ಸೂರ್ಯಾಸನಕೃತಾಶ್ರಯಾಮ್ ॥ (೬೬-೭೦)

ಇದೇ ಪುರಾಣದ ೨೭ (೫೫-೫೭)ನೆಯ ಅಧ್ಯಾಯದಲ್ಲಿ ಇಲ್ಲಿ ಹೇಳಿದಂತೆ ಬ್ರಾಹ್ಮೀ, ರುದ್ರಾಣೀ ಹಾಗೂ ಸರಸ್ವತೀ ಎನ್ನುವ ಮೂರು ರೂಪಗಳನ್ನು ಸೂರ್ಯಸ್ವರೂಪಾತ್ಮಕಗಳಾದ ಶಕ್ತಿಗಳೆಂದು ಹೇಳಿ ಇನ್ನೊಂದು ರೀತಿಯಲ್ಲಿ ಅವುಗಳ ಧ್ಯೇಯರೂಪದ ಚಿತ್ರಣವನ್ನು ನೀಡಿದೆ.

ಬ್ರಹ್ಮಾಣೀ ಚತುರಾನನಾಕ್ಷವಲಯಾ ಕುಂಭಂ ಕರೈಃ ಸ್ರುಕ್‌ಸ್ರುವೌ
ಬಿಭ್ರಾಣಾ ತ್ವರುಣೇಂದ್ರಕಾಂತಿವದನಾ ಋಗ್ರೂಪಿಣೀ ಬಾಲಿಕಾ ।
ಹಂಸಾರೋಹಣಕೇಲಿಖಣ್‌ಖಣಮಣೇಃ ಬಿಂಬಾರ್ಚಿತಾ ಭೂಷಿತಾ
ಗಾಯತ್ರೀ ಪರಿಭಾವಿತಾ ಭವತು ನಃ ಸಂಪತ್‌ಸಮೃದ್ಧ್ಯೈ ಸದಾ ।
ರುದ್ರಾಣೀ ನವಯೌವನಾ ತ್ರಿನಯನಾ ವೈಯಾಘ್ರಚರ್ಮಾಂಬರಾ
ಖಟ್ವಾಂಗತ್ರಿಶಿಖಾಕ್ಷಸೂತ್ರವಲಯಾಽಭೀತಿಶ್ರಿಯೈ ಚಾಸ್ತು ನಃ ।
ವಿದ್ಯುದ್ದಾಮಜಟಾಕಲಾಪವಿಲಸದ್‌ಬಾಲೇಂದುಮೌಲಿರ್ಮುದಾ
ಸಾವಿತ್ರೀ ವೃಷವಾಹನಾ ಸಿತತನುರ್ಧ್ಯೇಯಾ ಯಜೂರೂಪಿಣೀ ।
ಧ್ಯೇಯಾ ಸಾ ಚ ಸರಸ್ವತೀ ಭಗವತೀ ಪೀತಾಂಬರಾಲಂಕೃತಾ
ಶ್ಯಾಮಾ ಶ್ಯಾಮತನುಃ ಜರೋಪರಿಲಸದ್ಗಾತ್ರೋಽಚಿತಾ ವೈಷ್ಣವೀ ।

ತಾರ್ಕ್ಷ್ಯಸ್ಥಾ ಮಣಿನೂಪುರಾಂಗದಲಸತ್‌ಗ್ರೈವೇಯಭೂಷೋಜ್ಜ್ವಲಾ
ಹಸ್ತಾಲಂಕೃತಶಂಖಚಕ್ರಸುಗದಾ ಪದ್ಮಾ ಶ್ರಿಯೈ ಚಾಸ್ತು ನಃ ॥

ಇದಲ್ಲದೆ ೨೭ನೆಯ ಅಧ್ಯಾಯದಲ್ಲಿ ೬೦ನೆಯ ಶ್ಲೋಕದಲ್ಲಿ ವ್ರತಿಗಳಿಗೆ, ಯತಿಗಳಿಗೆ ಮತ್ತು ಗೃಹಸ್ಥರಿಗೆ ಗಾಯತ್ರೀಮಂತ್ರದ ಸ್ವರೂಪಗಳನ್ನು ವಿಧಾನ ಮಾಡುವಾಗ 'ಷಟ್‌ತಾರಃ ಸಂಪುಟೋ ವಾಪಿ ವ್ರತಿನಶ್ಚ ಯತೇರ್ಜಪಃ । ಗೃಹಸ್ಥಸ್ಯ ಸತಾರಃ' ಎನ್ನುವ ಅಸ್ಪಷ್ಟ ವಿವರಣೆಯನ್ನು ನೀಡಲಾಗಿದೆ.

ಇದಲ್ಲದೇ ಇದೇ ಅಧ್ಯಾಯದಲ್ಲಿ ಕುಶಾಸನದಲ್ಲಿ ಕುಳಿತು ಸಂಧ್ಯಾವಂದನ ವನ್ನು ಮಾಡುವಾಗಲೂ ಗಾಯತ್ರಿಯ ರೂಪವನ್ನು ಈ ರೀತಿ ತಿಳಿಸಲಾಗಿದೆ:

ಸಂಧ್ಯಾಂ ಪ್ರಾತಃ ಕೋಕನದಸ್ಥಿತಾವ್ ।
ಆಗಚ್ಛ ವರದೇ ದೇವಿ ತ್ರ್ಯಕ್ಷರೇ ಬ್ರಹ್ಮವಾದಿನಿ ।
ಗಾಯತ್ರಿ ಛಂದಸಾಂ ಮಾತಃ ಬ್ರಹ್ಮಯೋನೇ ನಮೋಽಸ್ತುತೇ ॥
ಮಧ್ಯಾಹ್ನೇ ವೃಷಭಾರೂಢಾಂ ಶುಕ್ಲಾಂಬರಸಮಾವೃತಾಮ್ ।
ಸಾವಿತ್ರೀಂ ರುದ್ರಯೋನಿಂ ಚಾವಾಹಯೇತ್ ರುದ್ರವಾದಿನೀಮ್ ॥
ಸಾಯಂ ತು ಗರುಡಾರೂಢಾಂ ಪೀತಾಂಬರಸಮಾವೃತಾಮ್ ।
ಸರಸ್ವತೀಂ ವಿಷ್ಣುಯೋನಿಂ ಆಹ್ವಯೇತ್ ವಿಷ್ಣುವಾದಿನೀಮ್ ॥ (೪೩-೪೬)

ಸ್ಕಾಂದಪುರಾಣದ ಕಾಶಿಖಂಡದ ೯ನೆಯ ಅಧ್ಯಾಯದಲ್ಲಿ ಗಾಯತ್ರೀ ಮಂತ್ರದ ಮಹತ್ತ್ವವು ಹೇಳಲ್ಪಟ್ಟಿದೆ. ಎಲ್ಲ ಶಾಸ್ತ್ರಗಳಲ್ಲಿ ಶ್ರುತಿಯು ಶ್ರೇಷ್ಠ ವಾಗಿದ್ದು, ಅದರಲ್ಲಿಯೂ ಉಪನಿಷತ್ತು ಶ್ರೇಷ್ಠವೆನಿಸಿದ್ದು, ಅದಕ್ಕಿಂತಲೂ ಶ್ರೇಷ್ಠತೆ ಯನ್ನು ಪಡೆದ ಹಿರಿಮೆ ಈ ಗಾಯತ್ರೀಮಂತ್ರಕ್ಕಿದೆ. ಗಾಯತ್ರಿಗೆ ಸಮನಾದ ಇನ್ನೊಂದು ಮಂತ್ರವಿಲ್ಲ. (ನ ಗಾಯತ್ರೀ ಸಮೋ ಮಂತ್ರಃ) ಪಠಿಸುವವನನ್ನು ರಕ್ಷಿಸುವುದರಿಂದ ಇದಕ್ಕೆ ಗಾಯತ್ರೀ ಎಂದು ಹೆಸರು ಬಂದಿದೆ (ಗಾತಾರಂ ತ್ರಾಯತೇ ಯಸ್ಮಾತ್ ಗಾಯತ್ರೀ ತೇನ ಗೀಯತೇ) ಬ್ರಾಹ್ಮಣನು ನಿಜವಾದ ಬ್ರಾಹ್ಮಣನೆನಿಸಿದ್ದು ಗಾಯತ್ರಿಯನ್ನು ತ್ರಿಕಾಲದಲ್ಲಿಯೂ ಪಠಿಸುವುದರಿಂದ. ಈ ರೀತಿಯಲ್ಲಿ ಗಾಯತ್ರೀಯನ್ನು ಕೊಂಡಾಡಿದ ಈ ಅಧ್ಯಾಯ ಗಾಯತ್ರೀ ಮಂತ್ರದಿಂದ ಪೂತವಾದ ನೀರಿನಿಂದ ಮಂದೇಹ ಎನ್ನುವ ರಾಕ್ಷಸರ ನಾಶ ಕ್ಕೋಸ್ಕರ ಮೂರುಬಾರಿ ಸೂರ್ಯನಿಗೆ ಅರ್ಘ್ಯವನ್ನು ನೀಡಬೇಕು ಎಂದು ತಿಳಿಸಿ ಕೊಟ್ಟಿದೆ. ಅಲ್ಲದೆಯೇ ಗಾಯತ್ರೀಯನ್ನು ಬ್ರಹ್ಮವಿಷ್ಣುರುದ್ರಸ್ವರೂಪ ಎಂದೂ ಈ ಪುರಾಣ ಕೊಂಡಾಡಿದೆ (೯-೫೮).

ಹೀಗೆ ಕೆಲವು ಪುರಾಣಗಳಲ್ಲಿ ಗಾಯತ್ರೀಮಂತ್ರದ ಕುರಿತಾಗಿ ವಿಸ್ತಾರವಾದ ವಿವರಣೆ ಇದ್ದರೆ, ಕೆಲವು ಪುರಾಣಗಳಲ್ಲಿ ಬಹಳ ಸಂಕ್ಷಿಪ್ತವಾಗಿ ಆ ಮಂತ್ರದ ಹಿರಿಮೆಯನ್ನು ತಿಳಿಸಲಾಗಿದೆ. ಇನ್ನು ಕೆಲವು ಪುರಾಣಗಳಲ್ಲಿ ಗಾಯತ್ರಿಯ ಬಗ್ಗೆ ಉಲ್ಲೇಖವೇ ಬರುವುದಿಲ್ಲ. ಗಾಯತ್ರೀಮಂತ್ರದ ಅರ್ಥದ ಕುರಿತು ಪ್ರಾಯ ಯಾವ ಪುರಾಣವೂ ಸ್ಪಷ್ಟವಾದ ಮಾಹಿತಿಯನ್ನು ನೀಡಲಿಲ್ಲ.

ಗಾಯತ್ರೀ ಎನ್ನುವುದು ನಾರಾಯಣನ ರೂಪ ಎಂಬ ಸ್ಪಷ್ಟ ಮಾಹಿತಿ ಈಗ ಪುರಾಣಗಳಲ್ಲಿ ದೊರೆಯುವುದಿಲ್ಲ. ಗಾಯತ್ರಿಯ ಉಲ್ಲೇಖಬರುವ ಎಲ್ಲಾ ಪುರಾಣಗಳು ಗಾಯತ್ರಿಯನ್ನು ಒಂದೋ ಬ್ರಹ್ಮಾಣೀ ಎಂದಾಗಲೀ, ಶಕ್ತಿ ಎಂದಾಗಲೀ, ಪಾರ್ವತೀ ಎಂದಾಗಲೀ, ತ್ರಿಮೂರ್ತಿಸ್ವರೂಪ ಎಂದಾಗಲೀ ಬಹಳ ಹೊಗಳುತ್ತವೆ. ಕೂರ್ಮಪುರಾಣ ಹಾಗು ಸ್ಕಾಂದಪುರಾಣಗಳಲ್ಲಿ ಒಂದೆಡೆ ಗಾಯತ್ರಿಯನ್ನು ವಿಷ್ಣು ಅಂತ ಉಲ್ಲೇಖಿಸಿದರೂ ತತ್‌ಕ್ಷಣ ಅದನ್ನು ಇನ್ನೊಂದು ದೇವತೆಯ ಸ್ವರೂಪ ಅಂತಲೂ ವರ್ಣಿಸುತ್ತದೆ. ಈ ಎಲ್ಲಾ ವಿವರಣೆಗಳನ್ನು ಭಗವಂತನೇ ಆ ರೂಪದಲ್ಲಿದ್ದಾನೆ ಎಂದು ಇಟ್ಟುಕೊಂಡು ಅಥವಾ ಅವುಗಳೆಲ್ಲವೂ ತಮೋಯೋಗ್ಯರ ಕಣ್ಣಿಗೆ ಕಾಣುವಂತೆ ನಿರೂಪಿಸಲಾಗಿದೆ ಎಂದು ತಿಳಿದುಕೊಂಡು ಶಾಸ್ತ್ರದ ಮಾತುಗಳಿಗೆ ಏಕಾಭಿಪ್ರಾಯವನ್ನು ಹೊಂದಿಸಬೇಕು.

ಹಾಗೆಯೇ ಗಾಯತ್ರೀಮಂತ್ರದ ವಿನಿಯೋಗ, ಅನುಷ್ಠಾನ ಕ್ರಮದ ಬಗ್ಗೆಯೂ ಖಚಿತವಾದ ಅಭಿಪ್ರಾಯ ಪುರಾಣಗಳಿಂದ ತಿಳಿದುಬರುವುದಿಲ್ಲ. ಋಷ್ಯಾದಿಗಳನ್ನು ಕೆಲವು ಪುರಾಣಗಳು ನಿರ್ವಿವಾದವಾಗಿ ನಿರೂಪಿಸಿವೆ. ಆದರೆ ಪ್ರಾಯಶ್ಚಿತ್ತಾದಿ ಕಾರ್ಯಗಳಲ್ಲಿ ಮಂತ್ರವ್ಯತ್ಯಾಸವನ್ನು ತಿಳಿಸುವುದಿಲ್ಲ. ಹೀಗೆ ಗಾಯತ್ರಿಯ ಬಗ್ಗೆ ಕುತೂಹಲಕಾರಿ ಸಂಗತಿಗಳನ್ನು ಪುರಾಣಗಳಲ್ಲಿ ನೋಡ ಬಹುದು.

*

## ಅಖಿಲಾಮ್ನಾಯೈಕವೇದ್ಯೋ ಹರಿಃ

ಸರ್ವವೇದಕ್ಕೂ ಮೂಲವಾದ ಗಾಯತ್ರಿಯಿಂದ ಪ್ರತಿಪಾದ್ಯನಾದವನು ಶ್ರೀಹರಿ. ನರಸಿಂಹಪುರಾಣದ 'ಧ್ಯೇಯಃ ಸದಾ...'' ಎಂಬ ಗಾಯತ್ರೀಮಂತ್ರದ ಧ್ಯಾನಶ್ಲೋಕ ದಿಂದ ಇದು ಸ್ಪಷ್ಟವಾಗುತ್ತದೆ. ಹೀಗೆ ಗಾಯತ್ರೀಪ್ರತಿಪಾದ್ಯ ಶ್ರೀಹರಿ ಎಂದಮೇಲೆ ಅಂತಹ ಗಾಯತ್ರಿಯಿಂದ ಅಭಿವ್ಯಕ್ತವಾದ ವೇದ ಹಾಗೂ ಸಕಲಶಾಸ್ತ್ರಪ್ರಪಂಚದಿಂದಲೂ ಅವನೇ ಪ್ರತಿಪಾದ್ಯ ಎಂದು ಸಿದ್ಧಿಸುವುದು.

ಒಬ್ಬ ಹರಿ ಹೇಗೆ ಸಕಲ ವೇದಗಳಿಂದ ಪ್ರತಿಪಾದ್ಯ ಎಂಬ ಶಂಕೆಯನ್ನು 'ಸವಿತುಃ' ಪದವು ಪರಿಹರಿಸುವುದು. ಒಬ್ಬ ಸೂರ್ಯನನ್ನು ಹೇಗೆ ಸಕಲ ಚಕ್ಷುರಿಂದ್ರಿಯಗಳೂ ನೋಡುವವೋ ಹಾಗೆಯೇ ಒಬ್ಬ ಹರಿಯನ್ನೇ ಎಲ್ಲ ವೇದಗಳೂ ಸಾರಬಹುದಾಗಿದೆ.

— ಶ್ರೀವಿದ್ಯಾಮಾನ್ಯತೀರ್ಥರು

**ಓಂಕಾರಮಾದಿತಃ ಕೃತ್ವಾ ವ್ಯಾಹೃತಿಸ್ತದನಂತರಮ್ ।**
**ತತೋ ಧ್ಯಾಯೀತ ಸಾವಿತ್ರೀಂ ಏಕಾಗ್ರಃ ಶ್ರದ್ಧಯಾನ್ವಿತಃ ॥**

ಮೊದಲು ಓಂಕಾರ. ಬಳಿಕ ವ್ಯಾಹೃತಿ. ಅನಂತರ ಗಾಯತ್ರೀ –ಇದನ್ನು ಶ್ರದ್ಧೆಯಿಂದ, ಏಕಾಗ್ರತೆಯಿಂದ ಧ್ಯಾನಿಸಬೇಕು.

— ಕೂರ್ಮಪುರಾಣ

# ಷಟ್‌ಕುಕ್ಷಿ–ಚೌಪದಿ

———————————— ಸಗ್ರಿ ರಾಘವೇಂದ್ರ ಉಪಾಧ್ಯಾಯ

ಮಹಾನಾರಾಯಣೋಪನಿಷತ್ತಿನಲ್ಲೂ, ಮತ್ತೆ ಕೆಲವು ಪುರಾಣಗಳಲ್ಲೂ ಗಾಯತ್ರಿಯನ್ನು 'ಷಟ್‌ಕುಕ್ಷಿ'ಯನ್ನಾಗಿ ವರ್ಣಿಸಲಾಗುವುದು. ಭಗವಂತನ ಆರು ರೂಪಗಳನ್ನು ಪ್ರತಿಪಾದ್ಯಗಳನ್ನಾಗಿ ಗಾಯತ್ರಿಯು ಹೊಂದಿದೆ ಎಂಬುದು ಅದರ ಅಂತರ್ಯ. ಆ 'ಷಟ್‌ಕುಕ್ಷಿ'ಯ ವಿವರಣೆ ಛಾಂದೋಗ್ಯೋಪನಿಷತ್ತಿನಲ್ಲಿ (೩–೨–೧,೨) ನಡೆದಿದೆ.

**ಗಾಯತ್ರೀ ವಾ ಇದಂ ಸರ್ವಂ ಭೂತಂ ಯದಿದಂ ಕಿಂ ಚ**

ಗಾಯತ್ರಿಯಲ್ಲಿರುವ ಗಾಯತ್ರೀನಾಮಕವಾದ ಹಯಶೀರ್ಷ ಸ್ತ್ರೀರೂಪ ಗಾಯತ್ರೀಪ್ರತಿಪಾದ್ಯ ಮೊದಲ ರೂಪವಾದರೆ, ಮತ್ಸ್ಯಕೂರ್ಮಾದಿ ಭಗವಂತನ ದಶಾವತಾರಗಳು ಗಾಯತ್ರೀಪ್ರತಿಪಾದ್ಯ ಎರಡನೇ ರೂಪ.

**ವಾಗ್ವೈ ಗಾಯತ್ರೀ**

ವಾಗಿಂದ್ರಿಯದಲ್ಲಿ ಹಯಶೀರ್ಷನಾಮಕನಾಗಿರುವ ಸ್ತ್ರೀರೂಪ ಗಾಯತ್ರೀ ಪ್ರತಿಪಾದ್ಯ ಮೂರನೇ ರೂಪ.

**ಯಾ ವೈ ಸಾ ಗಾಯತ್ರೀ ಇಯಂ ವಾವ ಸಾ ಯೇಯಂ ಪೃಥಿವೀ**

ಪೃಥಿವಿಯಲ್ಲಿರುವ ಪೃಥಿವೀನಾಮಕನಾದ ಹಳದಿ ಬಣ್ಣದ ಸ್ತ್ರೀರೂಪಿ ಭಗವಂತನೂ ಗಾಯತ್ರೀಪ್ರತಿಪಾದ್ಯ.

**ಯಾ ವೈ ಸಾ ಪೃಥಿವೀಯಂ ವಾವ ಸಾ ಯದಿದಮಸ್ಮಿನ್ ಪುರುಷೇ ಶರೀರಮ್**

ಜೀವರ ಶರೀರದೊಳಗಿರುವ ಭಗವಂತನೂ ಗಾಯತ್ರೀಪ್ರತಿಪಾದ್ಯ.

**ಯದ್ವೈ ತತ್‌ಪುರುಷೇ ಶರೀರಮಿದಂ ವಾವ ತದ್ಯದಿದಮಸ್ಮಿನ್ನಂತಃ ಪುರುಷೇ ಹೃದಯಮ್**

ಜೀವರ ಸ್ವರೂಪದೊಳಗೆ ಅಂತರಾತ್ಮನಾಮಕವಾಗಿರುವ ಭಗವದ್ರೂಪವೂ ಗಾಯತ್ರೀಪ್ರತಿಪಾದ್ಯ.

## ನಾಲ್ಕು ಪಾದಗಳ ಪ್ರತಿಪಾದನೆ:

ಹೀಗೆ ಆರು ಭಗವದ್ರೂಪಗಳನ್ನು ಪ್ರತಿಪಾದಿಸುತ್ತಿರುವ ಗಾಯತ್ರಿಯು ತನ್ನ ಮೂರು ಪಾದಗಳಿಂದ ಭಗವಂತನ ಮೂರು ಸ್ವರೂಪಪಾದಗಳನ್ನೂ (ಸ್ವರೂಪಾಂಶಗಳನ್ನೂ) ಒಂದು ಭಿನ್ನಪಾದವನ್ನೂ (ಭಿನ್ನಾಂಶವನ್ನೂ) ಪ್ರತಿಪಾದಿಸುತ್ತಿದೆ ಎಂದೂ ತಿಳಿಸಲಾಗಿದೆ–

**ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ**

ಪುರುಷಸೂಕ್ತದಲ್ಲಿ ನಿರೂಪಿಸಿರುವಂತೆ ಅನಂತಶಯನಾದಿಗಳಲ್ಲಿರುವ ನಾರಾಯಣ, ವಾಸುದೇವ ಹಾಗೂ ವೈಕುಂಠ –ಭಗವಂತನ ಮೂರು ಸ್ವರೂಪ ಪಾದಗಳಾದರೆ, ಎಲ್ಲ ಜೀವರು ಭಿನ್ನಪಾದರೆನಿಸಿರುವರು.

ಗಾಯತ್ರೀನಾಮಕನ ನಾಲ್ಕು ಪಾದಗಳನ್ನು ಮತ್ತೊಂದು ಬಗೆಯಿಂದ ಉಪನಿಷತ್ತಿನಲ್ಲೇ ಹೇಳಲಾಗಿದೆ –ದೇಹದ ಹೊರಗೂ ಒಳಗೂ ವ್ಯಾಪ್ತನಾದ ಬ್ರಹ್ಮನಾಮಕ ರೂಪವು ಗಾಯತ್ರೀನಾಮಕ ಭಗವಂತನ ಮೊದಲ ಪಾದ. ಜೀವರೂಪದ ಹೊರಗೆ ಜಡಹೃದಯದಲ್ಲಿ ಪ್ರಕಾಶಮಾನವಾಗಿರುವುದರಿಂದ ಆಕಾಶನಾಮಕವಾಗಿದೆ. ಇದೇ ಎರಡನೇ ಪಾದ. ಜೀವರೊಳಗೆ ವ್ಯಾಪಿಸಿಕೊಂಡಿರುವ ಪ್ರಕಾಶಮಾನವಾದ ರೂಪ ಗಾಯತ್ರೀ ನಾಮಕನ ಮೂರನೇ ಪಾದ. ಜೀವಸ್ವರೂಪ ಹೃದಯದಲ್ಲಿ ಪ್ರಕಾಶಮಾನವಾದ ರೂಪ ನಾಲ್ಕನೇ ರೂಪ –ಗಾಯತ್ರೀ ಪ್ರತಿಪಾದ್ಯ.

ಹೀಗೆ ಗಾಯತ್ರೀಪ್ರತಿಪಾದ್ಯ ಭಗವದ್ರೂಪಚತುಷ್ಟಯವನ್ನು ತಿಳಿದವರಿಗೆ ಮುಕ್ತಿಯಲ್ಲಿ ಯೋಗ್ಯತಾನುಸಾರವಾಗಿ ಪೂರ್ಣವಾದ, ಸ್ವತಂತ್ರವಾದ ಶಾಶ್ವತವಾದ ಸಂಪತ್ತು ದೊರಕುವುದೆಂದು ಫಲವನ್ನು ತಿಳಿಸಲಾಗಿದೆ. ಗಾಯತ್ರಿಯ ಮುಖ್ಯೋಪಾಸಕನಾದ ಚತುರ್ಮುಖ ಗಾಯತ್ರಿಯ ಈ ಅನುಸಂಧಾನದಿಂದಾಗಿ ಪರಮಾತ್ಮ ಮತ್ತು ಲಕ್ಷ್ಮೀದೇವಿ ತನಗೆ ಅಧೀನರು ಎನ್ನುವಷ್ಟೂ ಅವರನ್ನು ಒಲಿಸಿಕೊಳ್ಳುವನೆಂದು ತಿಳಿಸಲಾಗಿದೆ.

ಹೀಗೆ ಗಾಯತ್ರೀ ಪ್ರತಿಪಾದ್ಯ ಆರು ಭಗವದ್ರೂಪಗಳ, ನಾಲ್ಕು ಭಗವದ್ರೂಪಗಳ ಪರಿಚಯವನ್ನು ಛಾಂದೋಗ್ಯೋಪನಿಷತ್ತಿನ ಮೂರು ಮಂತ್ರಗಳಲ್ಲಿ ನೀಡಲಾಗಿದ್ದು, ಅದರ ವಿವರಣೆಯನ್ನು ಶ್ರೀಮದಾಚಾರ್ಯರು 'ಸತ್ತತ್ವ' ಎಂಬ ಪ್ರಮಾಣದ ಮೂಲಕ ಮಾಡಿರುವರು.

*

## ಗಾಯತ್ರೀತಂತ್ರದಲ್ಲಿಯ ಪ್ರಾಯಶ್ಚಿತ್ತಗಳು

ನೀರಿನಲ್ಲಿ ಹೋಮ ಹೇಳಿದಂತೆ ಇನ್ನು ಕೆಲವು ಪ್ರಾಯಶ್ಚಿತ್ತಗಳನ್ನು ಇಲ್ಲಿ ಪಟ್ಟಿಮಾಡಲಾಗಿದೆ.

| | |
|---|---|
| ಶಮೀ – ಭೂತರೋಗಗ್ರಹಶಾಂತಿ | ಅಮೃತಬಳ್ಳಿ – ಮೃತ್ಯುಂಜಯಶಾಂತಿ |
| ಬಜೆ – ಕ್ಷಯಶಾಂತಿ | ಉತ್ತರಣೆ – ಅಪಸ್ಮಾರಶಾಂತಿ |
| ಅಶ್ವತ್ಥ – ಯುದ್ಧಜಯ | ಕ್ಷೀರವೃಕ್ಷ – ಉನ್ಮಾದಶಾಂತಿ |
| ಎಕ್ಕ – ಅತಿಮೋಹಶಾಂತಿ | ಬಿಲ್ವ – ಶ್ರೀಲಾಭ |
| ಗರಿಕೆ – ಅಪಮೃತ್ಯುಶಾಂತಿ | ಪಲಾಶ – ಬ್ರಹ್ಮವರ್ಚಸ್‌ವೃದ್ಧಿ |
| ಆಜ್ಯ – ಬುದ್ಧಿವೃದ್ಧಿ | ಪಂಚಗವ್ಯ – ಅಭಿಚಾರಶಾಂತಿ |
| ತ್ರಿಮಧುರ – ರಾಜಯಕ್ಷ್ಮಶಾಂತಿ | ಲವಣ – ಜನವಶ್ಯ |

# ಬೃಹದಾರಣ್ಯಕದಲ್ಲಿ ಗಾಯತ್ರೀ

ಸಗ್ರಿ ರಾಘವೇಂದ್ರ ಉಪಾಧ್ಯಾಯ

ಬೃಹದಾರಣ್ಯಕೋಪನಿಷತ್ತಿನ ಏಳನೆ ಅಧ್ಯಾಯದ ಹತ್ತೊಂಬತ್ತನೇ ಬ್ರಾಹ್ಮಣ ಸಮಗ್ರವಾಗಿ ಗಾಯತ್ರಿಯ ಬಗ್ಗೆ ಬೆಳಕುಚೆಲ್ಲುತ್ತಿದೆ.

**ವಿಷಯವಿಸ್ತಾರ:**

ಗಾಯತ್ರೀಮಂತ್ರದ ಯಾವ ಯಾವ ಪಾದದಲ್ಲಿ ಯಾವ ಯಾವ ಭಗವದ್ರೂಪದ ಪ್ರತಿಪಾದನೆ ನಡೆದಿದೆ? ಅದರ ಉಪಾಸನೆಯನ್ನು ಹೇಗೆ ನಡೆಸಬೇಕು? ಉಪಾಸನೆಯ ಫಲ ಏನು? ಸಾವಿತ್ರೀ ಯಾರು? ಆಕೆಯ ಮಹಿಮೆಯೇನು? ಗಾಯತ್ರಿಗೂ ಆಕೆಗೂ ಏನು ಸಂಬಂಧ? ಗಾಯತ್ರಿಯ ಪ್ರಥಮಾಕ್ಷರಪ್ರತಿಪಾದ್ಯ ಯಾರು? –ಇವಿಷ್ಟು ಅಂಶಗಳನ್ನು ಉಪನಿಷತ್ತು ವಿವರಿಸುತ್ತದೆ.

**ನಾಲ್ಕು ಪಾದಗಳ ಪ್ರತಿಪಾದ್ಯ:**

ಓಂಕಾರವನ್ನು ನಾಲ್ಕನೆಯ ಪಾದವನ್ನಾಗಿ ಪರಿಗಣಿಸುವ ಉಪನಿಷತ್ತು ಗಾಯತ್ರಿಯ ನಾಲ್ಕು ಪಾದಗಳಿಂದ ಕ್ರಮವಾಗಿ ಅನಿರುದ್ಧ, ಪದ್ರುಮ್ನ, ಸಂಕರ್ಷಣ ಮತ್ತು ವಾಸುದೇವ ರೂಪಗಳನ್ನು ಪ್ರತಿಪಾದ್ಯಗಳೆಂದು ತಿಳಿಸಿದೆ.

**ಭೂಮಿ, ಅಂತರಿಕ್ಷ, ದ್ಯೌ** ಎಂಬ ಶಬ್ದಗಳಲ್ಲಿ ದ್ಯೌ ಎಂಬುದನ್ನು ದ್–ಯೌ ಎಂದು ಬಿಡಿಸಿದರೆ ಒಟ್ಟು ಎಂಟು ಅಕ್ಷರಗಳಿವೆ. ಗಾಯತ್ರೀಮಂತ್ರದ 'ತತ್ಸವಿತು ರ್ವರೇಣ್ಯಂ' ಎಂಬ ಮೊದಲ ಪಾದದಲ್ಲು 'ಣ–ಯಂ' ಎಂದು ಬಿಡಿಸಿದರೆ ಒಟ್ಟು ಎಂಟು ಅಕ್ಷರಗಳಿವೆ. ಆದ್ದರಿಂದ ಭೂಮಿ, ಅಂತರಿಕ್ಷ ಮತ್ತು ಸ್ವರ್ಗಗಳಲ್ಲಿ ಭೂಮಿ, ಅಂತರಿಕ್ಷ, ದ್ಯು ನಾಮಕನಾಗಿರುವ ಅನಿರುದ್ಧ ಗಾಯತ್ರಿಯ ಮೊದಲ ಪಾದದಿಂದ ಪ್ರತಿಪಾದ್ಯ.

**'ಋಚಃ, ಯಜೂಂಷಿ, ಸಾಮಾನಿ'** ಎಂಬ ಮೂರು ಪದಗಳಲ್ಲಿ ಎಂಟು ಅಕ್ಷರಗಳಿವೆ. ಗಾಯತ್ರಿಯ ಎರಡನೆಯ ಪಾದದಲ್ಲು ಎಂಟು ಅಕ್ಷರಗಳಿವೆ. ಋಕ್, ಯಜುಸ್ಸು, ಸಾಮಗಳಲ್ಲಿ ಋಚಃ, ಯಜೂಂಷಿ, ಸಾಮಾನಿ ಎಂಬ ಮೂರು ಪದಗಳಿಂದ ಪ್ರತಿಪಾದ್ಯ ಪ್ರದ್ಯುಮ್ನ ಗಾಯತ್ರಿಯ ಎರಡನೆಯ ಪಾದದಿಂದ ಪ್ರತಿಪಾದ್ಯ.

**'ಪ್ರಾಣ, ಅಪಾನ, ವ್ಯಾನ'** ಎಂಬ ಮೂರು ಪದಗಳಲ್ಲಿ 'ವ್–ಯಾನ' ಎಂದು ಬಿಡಿಸಿದರೆ ಒಟ್ಟು ಎಂಟು ಅಕ್ಷರಗಳು. ಗಾಯತ್ರಿಯ ಮೂರನೆಯ ಪಾದದಲ್ಲು ಎಂಟು ಅಕ್ಷರಗಳು. ಪ್ರಾಣ, ಅಪಾನ. ವಾ ನ ಎಂಬ ವಾಯುಗಳಲಿರುವ ಈ

ಮೂರು ಶಬ್ದಗಳಿಂದ ಪ್ರತಿಪಾದ್ಯ ಸಂಕರ್ಷಣ ಗಾಯತ್ರಿಯ ಮೂರನೆಯ ಪಾದದಿಂದ ಪ್ರತಿಪಾದ್ಯ.

ಗಾಯತ್ರಿಯ ನಾಲ್ಕನೆಯ ಪಾದ ಪ್ರಣವ. ವಾಸುದೇವ ಇದರಿಂದ ಪ್ರತಿಪಾದ್ಯ. ಇವನ ಅಧೀನವಾದ ತೇಜಸ್ಸು ಸೂರ್ಯಮಂಡಲದಲ್ಲಿ ಕಾಣಿಸುವುದು. ಆದುದರಿಂದ ಸೂರ್ಯಮಂಡಲಾಂತರ್ಗತನಾಗಿ ಜನರ ಕಣ್ಣಿಗೆ ಕಾಣಿಸುವವನಂತೆ ಇರುವನೆಂದು 'ದರ್ಶತಂ ಪದಂ' ಎಂಬುದಾಗಿ, ಪ್ರಕೃತಿಯನ್ನು ಪೂರ್ಣವಾಗಿ ಮೀರಿ ಸರ್ವೋತ್ತಮನಾಗಿ ಪ್ರಕಾಶಿಸುತ್ತಿರುವನೆಂದು 'ಪರೋರಜನ್' ಎಂದು ಉಲ್ಲೇಖಿಸಲ್ಪಡುವನು.

## ಉಪಾಸನೆಯ ಬಗೆ:

ಹೀಗೆ ಗಾಯತ್ರಿಯ ನಾಲ್ಕು ಪಾದಗಳಲ್ಲಿ ಪ್ರತಿಪಾದ್ಯನ ಉಪಾಸನೆಯನ್ನು ಹೀಗೆ ಮಾಡಬೇಕು. ಗಾಯತ್ರೀಪ್ರತಿಪಾದ್ಯನಾದ ಶ್ರೀಹರಿಯೆ ನೀನು ಗಾಯತ್ರಿಯ ಒಂದು ಪಾದದಿಂದ ಪ್ರತಿಪಾದ್ಯನಾಗಿರುವೆ. ಗಾಯತ್ರಿಯಲ್ಲಿ ಎಂಟು ಅಕ್ಷರಗಳಿವೆ. ಪ್ರಣವದಲ್ಲಿ ಅ, ಉ, ಮ, ನಾದ, ಬಿಂದು, ಘೋಷ, ಶಾಂತ ಹಾಗೂ ಅತಿಶಾಂತ ಎಂದು ಎಂಟು ಅಕ್ಷರಗಳಿವೆ. ಆದುದರಿಂದ ಪ್ರಣವವೇ ಒಂದು ಗಾಯತ್ರಿ. ಮತ್ತು ಗಾಯತ್ರಿಯ ಮೂರು ಪಾದಗಳು ಮೂರು ಗಾಯತ್ರಿಗಳು. ಇವೆಲ್ಲವುಗಳಿಂದ ಶ್ರೀಹರಿ ಪ್ರತಿಪಾದ್ಯನಾಗಿರುವುದರಿಂದ ಅವನನ್ನು 'ಏಕಪದೀ' ಏಕಪಾದಪ್ರತಿಪಾದ್ಯ ಎಂದು ಉಪಾಸಿಸಲಾಗುವುದು. ಪ್ರಣವವು ಒಂದು ಪಾದ, ಇಡಿಯ ಗಾಯತ್ರಿ ಒಂದು ಪಾದ ಎಂದು ಪರಿಗಣಿಸಿದ್ದಲ್ಲಿ ಅಂತಹ ಎರಡು ಪಾದಗಳಿಂದ ಪ್ರತಿಪಾದ್ಯ ಹರಿ ಎಂಬ ಅಭಿಪ್ರಾಯದಲ್ಲಿ 'ದ್ವಿಪದೀ' ಎರಡು ಪಾದಗಳಿಂದ ಪ್ರತಿಪಾದ್ಯ ಎಂದು ಉಪಾಸಿಸಲಾಗುವುದು.

ಪ್ರಣವವನ್ನು ಗಾಯತ್ರಿಯ ಪಾದ ಎಂದು ಪರಿಗಣಿಸದಿದ್ದಲ್ಲಿ ಗಾಯತ್ರೀ ಮಂತ್ರದಲ್ಲಿ ಮೂರು ಪಾದಗಳಿರುವುದೆಂದು, ಅಂತಹ ಮೂರು ಪಾದಗಳಿಂದ ಪ್ರತಿಪಾದ್ಯ ಎಂಬ ಅಭಿಪ್ರಾಯದಲ್ಲಿ ಹರಿಯನ್ನು 'ತ್ರಿಪದೀ' ಎಂದು ಉಪಾಸಿಸಲಾಗುವುದು. ಪ್ರಣವವನ್ನೂ ಗಾಯತ್ರಿಯ ಒಂದು ಪಾದ ಎಂದು ಪರಿಗಣಿಸಿ ಗಾಯತ್ರಿಯ ಮೂರು ಪಾದಗಳನ್ನೂ ಸೇರಿಸಿ ಒಟ್ಟು ನಾಲ್ಕು ಪಾದಗಳಿಂದ ಹರಿ ಪ್ರತಿಪಾದ್ಯ ಎಂಬ ಅಭಿಪ್ರಾಯದಲ್ಲಿ 'ಚತುಷ್ಪದೀ' ಎಂದು ಉಪಾಸಿಸಲಾಗುವುದು. ಚತುರ್ಮುಖನಲ್ಲದೆ ಬೇರೆ ಯಾರಿಂದಲೂ ಗಾಯತ್ರಿಯ ಮೂಲಕ ಹರಿಯು ಸಮಗ್ರವಾಗಿ ತಿಳಿಯಲ್ಪಡದ ಪ್ರಯುಕ್ತ 'ಅಪದ್' ಎಂದೂ ಅವನನ್ನು ಉಪಾಸಿಸಲಾಗುವುದು. 'ಪರೋರಜನು, ದರ್ಶತನೂ' ಆದ ಚತುರ್ಥಪಾದ ಪ್ರತಿಪಾದ್ಯ ವಾಸುದೇವ ಇದೋ ನಿನಗೆ ಪ್ರಣಾಮ.

## ಉಪಾಸನೆಯ ಫಲ:

ಗಾಯತ್ರಿಯ ಪ್ರಥಮಪಾದಪ್ರತಿಪಾದ್ಯನನ್ನು ತಿಳಿದವನು ಮೂರು ಲೋ: ಗಳಿಗೆ ಅಧಿಪತಿಯಾಗುವನು. ದ್ವಿತಿಯಪಾದಪ್ರತಿಪಾದ್ಯನನ್ನು ತಿಳಿದವನು ಮೂರ ವೇದಗಳಿಗೆ ಅಧಿಪತಿಯಾಗುವನು. ತೃತೀಯಪಾದಪ್ರತಿಪಾದ್ಯನನ್ನು ತಿಳಿದವನ ಎಲ್ಲ ಜೀವರಿಗೂ ಅಧಿಪತಿಯಾಗುವನು, ಅಲ್ಲದೆ ಎಲ್ಲ ಪ್ರಾಣಿಗಳನ್ನು ಜಯಿಸ ವನು. ಚತುರ್ಥಪಾದಪ್ರತಿಪಾದ್ಯನನ್ನು ತಿಳಿದವನು ಸರ್ವಲೋಕಗಳಿಗೂ, ವೇ ಗಳಿಗೂ, ಜೀವರಿಗೂ ಅಧಿಪತಿಯಾಗಿ ಸಂಪತ್ತು ಮತ್ತು ಕೀರ್ತಿಗಳಿಂದ ಮೆ ಯುವನು.

ಗಾಯತ್ರಿಯ ಉಪಾಸನೆಗೆ ಮುಖ್ಯಯೋಗ್ಯರು ಚತುರ್ಮುಖ. ಆದ್ದರಿಂ ಅವನೊಬ್ಬನಿಗೇ ಗಾಯತ್ರಿಯ ನಾಲ್ಕೂ ಪಾದಗಳಿಂದ ಪ್ರತಿಪಾದ್ಯನ ಸಮ ಉಪಾಸನೆ ಸಾಧ್ಯ. ಅದಕ್ಕೆ ಹೇಳಿದ ಫಲವೂ ಅವನೊಬ್ಬನಿಗೇ ಸಮಗ್ರವಾ ಲಭಿಸುವುದು. ಉಳಿದೆಲ್ಲರೂ ಕೇವಲ ಒಂದು ಭಾಗದ ಉಪಾಸನೆ ನಡೆಸಲ ಅರ್ಹರು. ಅದಕ್ಕೆ ಫಲವೂ ಅವರವರ ಯೋಗ್ಯತಾನುಸಾರವಾಗಿ ದೊರಕುವುದು ಯಾವ ದ್ವಿಜನೂ ಗಾಯತ್ರಿಯ ಉಪಾಸನೆಗೆ ಸರ್ವಥಾ ಅನರ್ಹನಲ್ಲ; ಚತ ರ್ಮುಖನನ್ನು ಬಿಟ್ಟು ಪೂರ್ಣ ಅರ್ಹನೂ ಅಲ್ಲ. ಆದ್ದರಿಂದ ಚತುರ್ಮುಖನಿ ಮಾತ್ರ ಗಾಯತ್ರಿಯ ಉಪಾಸನೆಯ ಪೂರ್ಣಫಲ ದೊರಕುವುದು.

ಚತುರ್ಮುಖನು ಅನಿರುದ್ಧಾದಿ ಭಗವದ್ರೂಪಗಳಿಂದ ಲೋಕಾಧಿಪತ್ಯವ ಮುಂತಾದ ಫಲಗಳನ್ನು ಪಡೆಯುವನು. ಆದರೆ ಇದು ಉಪಾಸನೆಯ ಒಂದ ಅಂಶ ಮಾತ್ರ. ಅದರ ಮುಖ್ಯ ಫಲ ಮುಕ್ತ್ಯವಸ್ಥೆಯಲ್ಲಿ ದೊರಕುವುದು. ಚತ ರ್ಮುಖನು ಮುಕ್ತನಾದಮೇಲೆ ಗಾಯತ್ರಿಯ ಪ್ರಥಮಪಾದದ ಉಪಾಸನೆಯ ಫಲವಾಗಿ ಅನಿರುದ್ಧನನ್ನು ಪ್ರವೇಶಿಸಿ, ವ್ಯಾಪಿಸುತ್ತಾನೆ. ದ್ವಿತೀಯಪಾದದ ಉಪ ಸನೆಯ ಫಲವಾಗಿ ಪ್ರದ್ಯುಮ್ನನನ್ನು ಪ್ರವೇಶಿಸಿ, ವ್ಯಾಪಿಸುತ್ತಾನೆ. ತೃತೀಯಪಾದ ಉಪಾಸನೆಯ ಫಲವಾಗಿ ಸಂಕರ್ಷಣನನ್ನು ಪ್ರವೇಶಿಸಿ ವ್ಯಾಪಿಸುತ್ತಾನೆ. ಆದ ಗಾಯತ್ರಿಯ ಚತುರ್ಥಪಾದದ ಉಪಾಸನೆಯ ಫಲವಾಗಿ ಚತುರ್ಮುಖನ ವಾಸುದೇವನನ್ನು ಮಾತ್ರ ವ್ಯಾಪಿಸಲಾರ. ಅನಿರುದ್ಧಾದಿಗಳಲ್ಲಿ ವ್ಯಾಪಿಸಿರು ಪ್ರಯುಕ್ತ ಚತುರ್ಮುಖನು ಅವರಿಂದ ಲೋಕಾಧಿಪತ್ಯ ಮುಂತಾದುವನ ಪಡೆದರೂ ವಾಸುದೇವನಲ್ಲಿ ವ್ಯಾಪಿಸದಿರುವ ಪ್ರಯುಕ್ತ ಅವನಿಂದ ಏನನು ಪಡೆಯಲಾರ.

'ಇವನ ಅಪೇಕ್ಷೆ ನೆರವೇರದಿರಲಿ, ಇವನಿಗೆ ಇಷ್ಟವಾದ ವಸ್ತು ಸಮೃ ವಾಗದಿರಲಿ'..... ಎಂಬ ಉದ್ದೇಶ ಇಟ್ಟುಕೊಂಡು ಗಾಯತ್ರಿಯನ್ನು ಉಪಾಸ ಮಾಡಿದರೆ ಉಪಾಸಕನ ಶತ್ರುವಿನ ಅಪೇಕ್ಷೆ ನೆರವೇರುವುದಿಲ್ಲ, ಅವನ ಇ ವಸ್ತುಗಳು ಸಮೃದ್ಧಗಳಾಗುವುದಿಲ್ಲ. 'ನಾನು ನನ್ನ ಅಭೀಷ್ಟಗಳನ್ನು ಹೊಂದ ವಂತಾಗಲಿ'.... ಎಂಬ ಉದ್ದೇಶದಿಂದ ಗಾಯತ್ರಿಯ ಉಪಾಸನೆಮಾಡಿದ

ಉಪಾಸಕನ ಅಪೇಕ್ಷೆಗಳು ಈಡೇರುವವು. ಚತುರ್ಮುಖನು ಉಪಾಸನೆಮಾಡಿ ಬ್ರಹ್ಮಪದವಿಯನ್ನೂ ಅವನಿಗೆ ಯೋಗ್ಯವಾದ ಮುಕ್ತಿಯನ್ನೂ ಪಡೆಯುವನು.

ಉಳಿದವರು ತಮ್ಮ ತಮ್ಮ ಯೋಗ್ಯತಾನುಸಾರ ಉಪಾಸನೆಮಾಡಿದಲ್ಲಿ ಅವರಿಗೆ ಸಕಲಪಾಪಗಳ ಲೇಪ ಆಗುವುದಿಲ್ಲ. ವಿಶೇಷವಾಗಿ ದಾನಪ್ರತಿಗ್ರಹದಿಂದ ಉಂಟಾಗಬಲ್ಲ ಪಾಪದ ಲೇಪ ಆಗುವುದಿಲ್ಲ. ಅವರ ಯೋಗ್ಯತಾನುಸಾರ ಮುಕ್ತಿಯೂ ದೊರಕುವುದು.

## ಗಾಯತ್ರೀ–ಸಾವಿತ್ರೀ:

ಗಾಯತ್ರಿಯ ಮುಖ್ಯ ಅಭಿಮಾನಿನಿ ಲಕ್ಷ್ಮಿ. ಅಮುಖ್ಯಾಭಿಮಾನಿನಿ ಸರಸ್ವತಿ. ಸರಸ್ವತಿ ಚತುರ್ಮುಖನನ್ನು ಆಶ್ರಯಿಸಿದ್ದಾಳೆ. ಚತುರ್ಮುಖನು ಲಕ್ಷ್ಮಿಯನ್ನು ಆಶ್ರಯಿಸಿದ್ದಾನೆ. ಲಕ್ಷ್ಮಿ ಗಾಯತ್ರಿಯ ಚತುರ್ಥಪಾದಪ್ರತಿಪಾದ್ಯ ವಾಸುದೇವನನ್ನು ಆಶ್ರಯಿಸಿದ್ದಾಳೆ. ಪಂಚಪ್ರಾಣರು 'ಗಯ' ಎನಿಸುವರು. ಲಕ್ಷ್ಮಿಯು ಗಾಯತ್ರಿಯ ಉಪಾಸಕನ ಪಂಚಪ್ರಾಣಗಳನ್ನು ರಕ್ಷಿಸುವುದರಿಂದ ಗಾಯತ್ರೀ ಎನಿಸುವಳು. ಗಾಯತ್ರಿಯ ಚತುರ್ಥಪಾದಪ್ರತಿಪಾದ್ಯ ವಾಸುದೇವ ಸವಿತೃನಾಮಕನಾದ ತನಗೆ ಪ್ರಿಯಳಾಗಿರುವುದರಿಂದ ಲಕ್ಷ್ಮಿಯನ್ನು ಸಾವಿತ್ರೀ ಎಂದು ಕರೆಯುವನು. ಆದ್ದರಿಂದ ಗಾಯತ್ರಿಯೇ ಸಾವಿತ್ರೀ.

ಹರಿಯು ಗಾಯತ್ರೀಮಂತ್ರವನ್ನು ಚತುರ್ಮುಖನಿಗೆ ಉಪದೇಶಿಸುವನು. ಆದರ ಉಪದೇಶಪಡೆದು ಉಪಾಸನೆ ನಡೆಸುವ ಚತುರ್ಮುಖನ ಪ್ರಾಣಗಳನ್ನು ಲಕ್ಷ್ಮಿ ರಕ್ಷಿಸುವಳು. ಗಾಯತ್ರಿಯು ಸಾವಿತ್ರೀನಾಮಕಳಾದ ಲಕ್ಷ್ಮಿಯ ಮುಖ್ಯ ಪ್ರತಿಮೆ.

## ಗಾಯತ್ರೀ ಮತ್ತು ಪರಶುರಾಮ:

ಅಗ್ನಿಮಂಡಲದಲ್ಲಿರುವ ಅಗ್ನಿನಾಮಕ ಪರಶುರಾಮನೇ ಗಾಯತ್ರಿಯ ಪ್ರಥಮಾಕ್ಷರಪ್ರತಿಪಾದ್ಯ. ಇವನ ಅರಿವು ಇಲ್ಲದಿದ್ದರೆ ಗಾಯತ್ರಿಯ ಜ್ಞಾನ ಪೂರ್ಣಫಲವನ್ನು ನೀಡುವುದಿಲ್ಲ. ಅಂದರೆ ಗಾಯತ್ರಿಯ ಪ್ರಥಮಾಕ್ಷರಪ್ರತಿಪಾದ್ಯ ಪರಶುರಾಮನನ್ನು ತಿಳಿದಾಗ ಗಾಯತ್ರಿಯ ಜ್ಞಾನ ಸಫಲವಾಗುವುದು. ಅಗ್ನಿಯು ಹೇಗೆ ಎಲ್ಲ ಇಂಧನವನ್ನೂ ಸುಟ್ಟುಹಾಕುವುದೋ ಹಾಗೆಯೇ ಅಗ್ನಿಯಲ್ಲಿರುವ, ಅಗ್ನಿಯ ಬಣ್ಣವನ್ನು ಹೊಂದಿರುವ ಪರಶುಧಾರಿ ಶ್ರೀರಾಮನು ಎಲ್ಲ ಪಾಪಗಳನ್ನು ಪರಿಹಾರಮಾಡುತ್ತಾನೆ. ಕ್ರಮೇಣ ಮುಕ್ತಿಪಡೆಯುವಂತೆಯೂ ಅನುಗ್ರಹಿಸುತ್ತಾನೆ.

ಹೀಗೆ ಉಪನಿಷತ್ತು ಗಾಯತ್ರಿಯ ಅನುಸಂಧಾನಕ್ಕೆ ಸಂಬಂಧಿಸಿದಂತೆ ಅನೇಕ ಸೂಕ್ಷ್ಮ ವಿಚಾರಗಳನ್ನು ತಿಳಿಸಿವೆ. ಅವುಗಳ ಅನುಸಂಧಾನ ಕಷ್ಟಸಾಧ್ಯವಾದರೂ ಅವುಗಳ ಸಾಮಾನ್ಯ ತಿಳಿವಳಿಕೆಯನ್ನಾದರೂ ಪಡೆದುಕೊಳ್ಳಬೇಕಾದುದು ಅತ್ಯವಶ್ಯ.

*

# ಗಾಯತ್ರೀ ರಾಮಾಯಣ

**ಕೆ. ರಾಘವೇಂದ್ರ ಪುರಾಣಿಕ**

ಸ್ವತಃ ಪ್ರಮಾಣವೆಂದು ನಿಶ್ಚಯಿಸಲ್ಪಟ್ಟ ಏಳು ಶಾಸ್ತ್ರಗಳಲ್ಲಿ ಮೂಲ ರಾಮಾಯಣ ಒಂದು. ಹಯಗ್ರೀವರೂಪದಿಂದ ಇದರ ಉಪದೇಶ ನಡೆದಿದ್ದರೂ ಈಗ ಇದು ಉಪಲಬ್ಧವಿಲ್ಲ. ಶತಕೋಟಿಗ್ರಂಥದ ವಿಸ್ತಾರವುಳ್ಳ ಈ ಗ್ರಂಥದ ಸಂಗ್ರಹವೇ ವಾಲ್ಮೀಕಿಮುನಿ ರಚಿತ ಶ್ರೀಮದ್ರಾಮಾಯಣಗ್ರಂಥ.

ಈ ರಾಮಾಯಣಗ್ರಂಥದ ಶ್ಲೋಕಗಳ ಸಂಖ್ಯೆಗೂ ಗಾಯತ್ರೀಮಂತ್ರದ ಅಕ್ಷರಗಳ ಸಂಖ್ಯೆಗೂ ಸಾಮ್ಯವಿದೆ. ಗಾಯತ್ರಿಯ ಒಂದೊಂದು ಅಕ್ಷರದ ಅರ್ಥ ವಿಸ್ತಾರ ರಾಮಾಯಣಗ್ರಂಥದ ಒಂದೊಂದು ಸಾವಿರದ ಶ್ಲೋಕಗಳು. ಹಾಗಾಗಿ ರಾಮಾಯಣದ ಒಂದೊಂದು ಸಾವಿರ ಶ್ಲೋಕಗಳು ಮುಗಿದ ಅನಂತರ ಆರಂಭ ವಾಗುವ ಮೊದಲನೆಯ ಶ್ಲೋಕ ಗಾಯತ್ರಿಯ ಒಂದೊಂದು ಅಕ್ಷರದಿಂದ ಪ್ರಾರಂಭಗೊಳ್ಳುವುದು. ಅಂತಹ ರಾಮಾಯಣದ ೨೪ ಶ್ಲೋಕಗಳ ಸಂಗ್ರಹವನ್ನು ಗಾಯತ್ರೀರಾಮಾಯಣ ಎಂದು ಕರೆಯಲಾಗಿದೆ.

ಅಂತಹ ಶ್ಲೋಕಗಳು ಯಾವ ಯಾವ ಕಾಂಡದಲ್ಲಿ ಬಂದಿವೆ ಎನ್ನುವುದನ್ನು ಗೋವಿಂದರಾಜೀಯ ವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಈ ಶ್ಲೋಕವು ತಿಳಿಸುತ್ತದೆ.

**ಗಾಯತ್ರ್ಯಾಃ ತ್ರೀಣಿ ಚತ್ವಾರಿ ದ್ವೇ ದ್ವೇ ತ್ರೀಣ್ಯಥ ಷಟ್ ಕ್ರಮಾತ್ ।**
**ಚತ್ವಾರಿ ಸಪ್ತಕಾಂಡೇಷು ಸ್ಥಾಪಿತಾನ್ಯಕ್ಷರಾಣಿ ತು ॥**

ಆರಂಭದ ಬಾಲಕಾಂಡದಲ್ಲಿ ಗಾಯತ್ರಿಯ ಮೂರು ಅಕ್ಷರಗಳು ಎರಡನೆಯ ಅಯೋಧ್ಯಾಕಾಂಡದಲ್ಲಿ ನಾಲ್ಕು ಅಕ್ಷರಗಳು, ಮೂರನೆಯ ಅರಣ್ಯಕಾಂಡದಲ್ಲಿ ಎರಡು ಅಕ್ಷರಗಳು, ನಾಲ್ಕನೆಯ ಕಿಷ್ಕಿಂಧಾಕಾಂಡದಲ್ಲಿ ಎರಡು ಅಕ್ಷರಗಳು, ಐದನೆಯ ಸುಂದರಕಾಂಡದಲ್ಲಿ ಮೂರು ಅಕ್ಷರಗಳು, ಆರನೆಯ ಯುದ್ಧಕಾಂಡದಲ್ಲಿ ಆರು ಅಕ್ಷರಗಳು ಮತ್ತು ಕೊನೆಯದಾದ ಉತ್ತರಕಾಂಡದಲ್ಲಿ ಉಳಿದ ನಾಲ್ಕು ಅಕ್ಷರಗಳು –ಹೀಗೆ ಇಪ್ಪತ್ತನಾಲ್ಕು ಅಕ್ಷರಗಳು ಬಂದಿವೆ.

ಆ ಗಾಯತ್ರೀರಾಮಾಯಣದ ಶ್ಲೋಕಗಳು ಈ ರೀತಿ ಇವೆ.

೧) **ತಪಸ್ಸ್ವಾಧ್ಯಾಯನಿರತಂ ತಪಸ್ವೀ ವಾಗ್ವಿದಾಂ ವರಮ್ ।**
**ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಂಗವಮ್ ॥**

*(ಬಾಲಕಾಂಡ ಅಧ್ಯಾಯ ೧, ಶ್ಲೋಕ ೧)*

೨) ಸ ಹತ್ವಾ ರಾಕ್ಷಸಾನ್ ಸರ್ವಾನ್ ಯಜ್ಞಘ್ನಾನ್ ರಘುನಂದನಃ ।
ಋಷಿಭಿಃ ಪೂಜಿತಸ್ತತ್ರ ಯಥೇಂದ್ರೋ ವಿಜಯೋ ಪುರಾ ॥
(ಬಾ.ಕಾಂ. ೩೦-೨೫)

೩) ವಿಶ್ವಾಮಿತ್ರಃ ಸ ಧರ್ಮಾತ್ಮಾ ಶ್ರುತ್ವಾ ಜನಕಭಾಷಿತಮ್ ।
ವತ್ಸ ರಾಮ ಧನುಃ ಪಶ್ಯ ಇತಿ ರಾಘವಮಬ್ರವೀತ್ ॥
(ಬಾ.ಕಾ. ೬೭-೧೨)

೪) ತುಷ್ಟಾವಾಸ್ಯ ತದಾ ವಂಶಂ ಪ್ರವಿಶ್ಯ ಸ ವಿಶಾಂಪತೇಃ ।
ಶಯನೀಯಂ ನರೇಂದ್ರಸ್ಯ ತದಾಽಸಾದ್ಯ ವ್ಯತಿಷ್ಠತ ॥
(ಅಯೋಧ್ಯಾ ಕಾಂಡ. ೧೫-೨೦)

೫) ವನವಾಸಂ ಹಿ ಸಂಖ್ಯಾಯ ವಾಸಾಂಸ್ಯಾಭರಣಾನಿ ಚ ।
ಭರ್ತಾರಮನುಗಚ್ಛಂತ್ಯೈ ಸೀತಾಯೈ ಶ್ವಶುರೋ ದದೌ ॥
(ಅ.ಕಾ. ೪೦-೧೫)

೬) ರಾಜಾ ಸತ್ಯಂ ಚ ಧರ್ಮಶ್ಚ ರಾಜಾ ಕುಲವತಾಂ ಕುಲಮ್ ।
ರಾಜಾ ಮಾತಾ ಪಿತಾ ಚೈವ ರಾಜಾ ಹಿತಕರೋ ನೃಣಾಮ್ ॥
(ಅ.ಕಾ. ೬೮-೩೪)

೭) ನಿರೀಕ್ಷ್ಯ ಸ ಮುಹೂರ್ತಂ ತು ದದರ್ಶ ಭರತೋ ಗುರುಮ್ ।
ಉಟಜೇ ರಾಮಮಾಸೀನಂ ಜಟಾಮಂಡಲಧಾರಿಣಮ್ ॥
(ಅ.ಕಾ. ೯೯-೨೫)

೮) ಯದಿ ಬುದ್ಧಿಃ ಕೃತಾ ದ್ರಷ್ಟುಮಗಸ್ತ್ಯಂ ತಂ ಮಹಾಮುನಿಮ್ ।
ಅದ್ಯೈವ ಗಮನೇ ಬುದ್ಧಿಂ ರೋಚಯಸ್ವ ಮಹಾಮತೇ ॥
(ಆರಣ್ಯಕಾಂಡ ೧೧-೪೩)

೯) ಭರತಸ್ಯಾರ್ಯಪುತ್ರಸ್ಯ ಶ್ವಶ್ರೂಣಾಂ ಮಮ ಚ ಪ್ರಭೋ ।
ಮೃಗರೂಪಮಿದಂ ದಿವ್ಯಂ ವಿಸ್ಮಯಂ ಜನಯಿಷ್ಯತಿ ॥
(ಆ.ಕಾಂ. ೪೩-೧೮)

೧೦) ಗಚ್ಛ ಶೀಘ್ರಮಿತೋ ವೀರ ಸುಗ್ರೀವಂ ತಂ ಮಹಾಬಲಮ್ ।
ವಯಸ್ಯಂ ತಂ ಕುರು ಕ್ಷಿಪ್ರಮಿತೋ ಗತ್ವಾದ್ಯ ರಾಘವ ॥
(ಆ.ಕಾಂ. ೭೨-೧೭)

೧೧) ದೇಶಕಾಲೌ ಭಜಸ್ವಾದ್ಯ ಕ್ಷಮಮಾಣಃ ಪ್ರಿಯಾಪ್ರಿಯೇ ।
ಸುಖದುಃಖಸಹಃ ಕಾಲೇ ಸುಗ್ರೀವವಶಗೋ ಭವ ॥
(ಕಿಷ್ಕಿಂಧಾಕಾಂಡ ೨೨-೨೦)

೧೨) ವಂದಿತವ್ಯಾಃ ತತಃ ಸಿದ್ಧಾಸ್ತಪಸಾ ವೀತಕಲ್ಮಷಾಃ ।
ಪೃಷ್ಟವ್ಯಾ ಚಾಪಿ ಸೀತಾಯಾಃ ಪ್ರವೃತ್ತಿರ್ವಿನಯಾನ್ವಿತೈಃ ॥
(ಕಿ.ಕಾಂ. ೪೩-೩೩)

೧೩) ಸ ನಿರ್ಜಿತ್ಯ ಪುರೀಂ ಶ್ರೇಷ್ಠಾಂ ಲಂಕಾಂ ತಾಂ ಕಾಮರೂಪಿಣೀಮ್ ।
ವಿಕ್ರಮೇಣ ಮಹಾತೇಜಾಃ ಹನೂಮಾನ್ ಮಾರುತಾತ್ಮಜಃ ॥
(ಸುಂದರಕಾಂಡ ೪-೧)

೧೪) ಧನ್ಯಾ ದೇವಾಃ ಸಗಂಧರ್ವಾಃ ಸಿದ್ಧಾಶ್ಚ ಪರಮರ್ಷಯಃ ।
ಮಮ ಪಶ್ಯಂತಿ ಯೇ ವೀರಂ ರಾಮಂ ರಾಜೀವಲೋಚನಮ್ ॥
(ಸುಂ.ಕಾಂ. ೨೬-೩೭)

೧೫) ಮಂಗಲಾಭಿಮುಖೀ ತಸ್ಯ ಸಾ ತದಾಸೀನ್ಮಹಾಕಪೇಃ ।
ಉಪತಸ್ಥೇ ವಿಶಾಲಾಕ್ಷೀ ಪ್ರಯತಾ ಹವ್ಯವಾಹನಮ್ ॥
(ಸುಂ.ಕಾಂ. ೫೪-೨೫)

೧೬) ಹಿತಂ ಮಹಾರ್ಥಂ ಮೃದು ಹೇತುಸಂಹಿತಂ
ವ್ಯತೀತಕಾಲಾಯತಿ ಸಂಪ್ರತಿಕ್ಷಮಮ್ ।
ನಿಶಮ್ಯ ತದ್ವಾಕ್ಯಮುಪಸ್ಥಿತಜ್ವರಃ
ಪ್ರಸಂಗವಾನುತ್ತರಮೇತದಬ್ರವೀತ್ ॥
(ಯುದ್ಧಕಾಂಡ ೧೦-೨೭)

೧೭) ಧರ್ಮಾತ್ಮಾ ರಾಕ್ಷಸಶ್ರೇಷ್ಠಃ ಸಂಪ್ರಾಪ್ತೋಽಯಂ ವಿಭೀಷಣಃ ।
ಲಂಕೈಶ್ವರ್ಯಮಿದಂ ಶ್ರೀಮಾನ್ ಧ್ರುವಂ ಪ್ರಾಪ್ನೋತ್ಯಕಂಟಕಮ್ ॥
(ಯು.ಕಾಂ. ೪೧-೬೮)

೧೮) ಯೋ ವಜ್ರಪಾತಾಶನಿಸಂನಿಪಾತಾನ್ನ
ಚುಕ್ಷುಭೇ ನಾಪಿ ಚಚಾಲ ರಾಜಾ ।
ಸ ರಾಮಬಾಣಾಭಿಹತೋ ಭೃಶಾರ್ತಃ
ಚಚಾಲ ಚಾಪಂ ಚ ಮುಮೋಚ ವೀರಃ ॥
(ಯು.ಕಾಂ. ೫೯-೧೩೭)

೧೯) ಯಸ್ಯ ವಿಕ್ರಮಮಾಸಾದ್ಯ ರಾಕ್ಷಸಾ ನಿಧನಂ ಗತಾಃ ।
ಅಹೋ ಸುಬಲವಾನ್ ರಾಮೋ ಮಹದಸ್ತ್ರಬಲಂ ಚ ವೈ ॥
(ಯು.ಕಾಂ. ೭೨-೧೦)

೨೦) ನ ತೇ ದದೃಶಿರೇ ರಾಮಂ ದಹಂತಮರಿವಾಹಿನೀಮ್ ।
ಮೋಹಿತಾಃ ಪರಮಾಸ್ತ್ರೇಣ ಗಾಂಧರ್ವೇಣ ಮಹಾತ್ಮನಾ ॥
(ಯು.ಕಾಂ. ೯೩-೨೫)

೨೧) ಪ್ರಣಮ್ಯ ದೈವತಾಭ್ಯಶ್ಚ ಬ್ರಾಹ್ಮಣೇಭ್ಯಶ್ಚ ಮೈಥಿಲೀ ।
ಬದ್ಧಾಂಜಲಿಪುಟಾ ಚೇದಮುವಾಚಾಗ್ನಿಸಮೀಪತಃ ॥

(ಯು.ಕಾಂ. ೧೧೬–೨೫)

೨೨) ಚಲನಾತ್ ಪರ್ವತೇಂದ್ರಸ್ಯ ಗಣಾ ದೇವಾಶ್ಚ ಕಂಪಿತಾಃ ।
ಚಚಾಲ ಪಾರ್ವತೀ ಚಾಪಿ ತದಾಶ್ಲಿಷ್ಟಮಹೇಶ್ವರವ್ ॥

(ಉತ್ತರಕಾಂಡ ೧೬–೨೬)

೨೩) ದಾರಾಃ ಪುತ್ರಾಃ ಪುರಂ ರಾಷ್ಟ್ರಂ ಭೋಗಾಚ್ಛಾದನಭೋಜನಮ್ ।
ಸರ್ವಮೇವಾವಿಭಕ್ತಂ ನೌ ಭವಿಷ್ಯತಿ ಹರೀಶ್ವರ ॥

(ಉ.ಕಾಂ. ೩೪–೪೧)

೨೪) ಯಾಮೇವ ರಾತ್ರಿಂ ಶತ್ರುಘ್ನಃ ಪರ್ಣಶಾಲಾಂ ಸಮಾವಿಶತ್ ।
ತಾಮೇವ ರಾತ್ರಿಂ ಸೀತಾಪಿ ಪ್ರಸೂತಾ ದಾರಕದ್ವಯಮ್ ॥

(ಉ.ಕಾ. ೬೬–೧)

ಈ ಇಪ್ಪತ್ತನಾಲ್ಕು ಶ್ಲೋಕಗಳನ್ನೊಳಗೊಂಡ ಗಾಯತ್ರೀರಾಮಾಯಣವನ್ನು ಅನುದಿನವೂ ಪಠಿಸುವುದರಿಂದ ಸಕಲಪಾಪಗಳಿಂದ ಮುಕ್ತಿಯನ್ನು ಪಡೆಯುತ್ತಾನೆ ಎನ್ನುವ ಫಲಶ್ರುತಿಯು ಉಕ್ತವಾಗಿದೆ–

ಇದಂ ರಾಮಾಯಣಂ ಕೃತ್ಸ್ನಂ ಗಾಯತ್ರೀಬೀಜಸಂಯುತಮ್ ।
ತ್ರಿಸಂಧ್ಯಂ ಯಃ ಪಠೇನ್ನಿತ್ಯಂ ಸರ್ವಪಾಪೈಃ ಪ್ರಮುಚ್ಯತೇ ॥

ಗೋವಿಂದರಾಜೀಯ ವ್ಯಾಖ್ಯಾನದಲ್ಲಿ ಬಂದ ಮೇಲಿನ ಮೊದಲ ಶ್ಲೋಕವನ್ನು ಗಮನಿಸಿದಾಗ ಆರಣ್ಯಕಾಂಡದಲ್ಲಿ ಎರಡು ಶ್ಲೋಕಗಳು ಬರಬೇಕಾಗಿದ್ದು ಮೂರು ಶ್ಲೋಕಗಳು ಬಂದಿವೆ. ಅದೇ ರೀತಿಯಲ್ಲಿ ಉತ್ತರಕಾಂಡದಲ್ಲಿ ನಾಲ್ಕು ಶ್ಲೋಕಗಳು ಬರಬೇಕಾಗಿದ್ದರೂ ಮೂರೇ ಶ್ಲೋಕಗಳು ಬರುತ್ತವೆ. ಹಾಗಾಗಿ ಈ ಬಗ್ಗೆ ಸ್ವಲ್ಪ ಗಮನಹರಿಸಬೇಕಾಗಿದೆ. (ವಿದ್ಯಾರಣ್ಯರು ಗುರುತಿಸಿದ ಗಾಯತ್ರೀ ರಾಮಾಯಣದಲ್ಲಿ ಸರಿಯಾಗಿದೆ.)

ಅಲ್ಲದೆಯೇ ಈಗ ಪ್ರಸಿದ್ಧವಾಗಿ ಉಪಲಬ್ಧವಾಗಿರುವ ಮುದ್ರಿತ ರಾಮಾಯಣದ ಪುಸ್ತಕಗಳಲ್ಲಿ ಇಲ್ಲಿ ಉಕ್ತವಾದ ಶ್ಲೋಕಗಳ ಖಚಿತವಾದ ಅಂತರ ಸಾವಿರಕ್ಕೆ ಸಿಗುವುದಿಲ್ಲ. ಆ ಸಂಖ್ಯೆಯಲ್ಲಿ ಬಹಳ ವ್ಯತ್ಯಾಸ ಕಂಡುಬರುತ್ತದೆ. ಐದಾರು ಕಡೆಗಳಲ್ಲಿ ಪೂರ್ವಾರ್ಧ ಉತ್ತರಾರ್ಧವಾಗಿಯೂ, ಉತ್ತರಾರ್ಧ ಪೂರ್ವಾರ್ಧವಾಗಿಯೂ ಮುದ್ರಿತವಾಗಿದೆ.

*

## ವಿದ್ಯಾರಣ್ಯರು ಕಂಡ ಗಾಯತ್ರೀರಾಮಾಯಣ

ತಪಃ ಸ್ವಾಧ್ಯಾಯನಿರತಂ ತಪಸ್ವೀ ವಾಗ್ವಿದಾಂ ವರಮ್ ।
ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಂಗವಮ್ ॥ (ಬಾ. ೧-೧)

ಸ ತೇನ ಪರಮಾಸ್ತ್ರೇಣ ಮಾನವೇನ ಸಮಾಹತಃ ।
ಸಂಪೂರ್ಣಂ ಯೋಜನಶತಂ ಕ್ಷಿಪ್ತಃ ಸಾಗರಸಂಪ್ಲವೇ ॥ (ಬಾ. ೩೦-೧೮)

ವಿಶ್ವಾಮಿತ್ರೋ ಮಹಾತೇಜಾ ಭೂಯಸ್ತೇಪೇ ಮಹಾತಪಾಃ ।
ತತಃ ಕಾಲೇನ ಮಹತಾ ಮೇನಕಾ ಪರಮಾಪ್ಸರಾಃ ॥ (ಬಾ. ೬೩-೩)

ಚತುರಶ್ವೋ ರಥಃ ಶ್ರೀಮಾನ್ನಿಸ್ತ್ರಿಂಶೋ ಧನುರುತ್ತಮಮ್ ।
ವಾಹನಂ ನರಸಂಯುಕ್ತಂ ಛತ್ರಂ ಚ ಶಶಿಸಂನಿಭಮ್ ॥ (ಅ. ೧೪-೩೬)

ವರ್ತತೇ ಚೋತ್ತಮಾಂ ವೃತ್ತಿಂ ಲಕ್ಷ್ಮಣೋಽಸ್ಮಿನ್ ಸದಾಽನಘಃ ।
ದಯಾವಾನ್ ಸರ್ವಭೂತೇಷು ಲಾಭಸ್ತಸ್ಯ ಮಹಾತ್ಮನಃ ॥ (ಅ. ೪೪-೫)

ದ್ವಾರೇಣ ವೈಜಯಂತೇನ ಪ್ರಾವಿಶಚ್ಛ್ರಾಂತವಾಹನಃ ।
ದ್ವಾಃಸ್ಥೈರುತ್ಥಾಯ ವಿಜಯಂ ಪೃಷ್ಟಸ್ತೈಃ ಸಹಿತೋ ಯಯೌ ॥ (ಅ. ೭೧-೩೩)

ಉಟಜೇ ರಾಮಮಾಸೀನಂ ಜಟಾಮಂಡಲಧಾರಿಣಮ್ ।
ತಂ ತು ಕೃಷ್ಣಾಜಿನಧರಂ ಚೀರವಲ್ಕಲವಾಸಸಮ್ ॥ (ಅ. ೯೯-೨೫)

ತೇ ವಯಂ ವನಮತ್ಯುಗ್ರಂ ಪ್ರವಿಷ್ಟಾಃ ಪಿತೃಶಾಸನಾತ್ ।
ದ್ರಷ್ಟುಮಿಚ್ಛಾಮಹೇ ಸರ್ವೇ ಭಗವಂತಂ ನಿವೇದ್ಯತಾಮ್ ॥ (ಆ. ೧೨-೪)

ಮಮ ಭರ್ತಾ ಮಹಾತೇಜಾ ವಯಸಾ ಪಂಚವಿಂಶಕಃ ।
ಅಷ್ಟಾದಶ ಹಿ ವರ್ಷಾಣಿ ಮಮ ಜನ್ಮನಿ ಗಣ್ಯತೇ ॥ (ಆ. ೪೭-೧೦)

ತತಃ ಪರಮಸಂಹೃಷ್ಟೋ ಹನುಮಾನ್ ಪ್ಲವಗರ್ಷಭಃ ।
ಪ್ರತ್ಯುವಾಚ ತತೋ ವಾಕ್ಯಂ ರಾಮಂ ವಾಕ್ಯವಿಶಾರದಃ ॥ (ಕಿ. ೪-೩)

ಸ ಕಾಮಿನಂ ದೀನಮದೀನಸತ್ತ್ವಂ ಶೋಕಾಭಿಪನ್ನಂ ಸಮುದೀರ್ಣಕೋಪಮ್ ।
ನರೇಂದ್ರಸೂನುರ್ನರ ದೇವಪುತ್ರಂ ರಾಮಾನುಜಃ ಪೂರ್ವಜಮಿತ್ಯುವಾಚ ॥
(ಕಿ. ೩೧-೧)

ತತೋ ರಾವಣನೀತಾಯಾಃ ಸೀತಾಯಾಃ ಶತ್ರುಕರ್ಶನಃ ।
ಇಯೇಷ ಪದಮನ್ವೇಷ್ಟುಂ ಚಾರಣಾಚರಿತೇ ಪಥಿ ॥ (ಸುಂ. ೧-೧)

ತತಸ್ತಸ್ಯ ನಗಸ್ಯಾಗ್ರ ಆಕಾಶಸ್ಥಸ್ಯ ದಂತಿನಃ ।
ಭರ್ತ್ರಾ ಪರಿಗೃಹೀತಸ್ಯ ಜಾನಕೀ ಸ್ಕಂಧಮಾಶ್ರಿತಾ ॥ (ಸುಂ. ೨೭-೧೩)

ನಾವಮಾನ್ಯೋ ಭವದ್ಭಿಶ್ಚ ಹರಿರ್ಧೀರಪರಾಕ್ರಮಃ ।
ದೃಷ್ಟಾ ಹಿ ಹರಯಃ ಸರ್ವೇ ಮಯಾ ವಿಪುಲವಿಕ್ರಮಾಃ ॥ (ಸುಂ. ೪೬-೯)

ಶ್ರುತ್ವಾ ಹನುಮತೋ ವಾಕ್ಯಂ ಯಥಾವದಭಿಭಾಷಿತಮ್ ।
ರಾಮಃ ಪ್ರೀತಿಸಮಾಯುಕ್ತೋ ವಾಕ್ಯಮುತ್ತರಮಬ್ರವೀತ್ ॥ (ಯು. ೧-೧)
ರಕ್ಷೋಗಣಪರಿಕ್ಷಿಪ್ತೋ ರಾಜಾ ಹ್ಯೇಷ ವಿಭೀಷಣಃ ।
ಶ್ರೀಮತಾ ರಾಜರಾಜೇನ ಲಂಕಾಯಾಮಭಿಷೇಚಿತಃ ॥ (ಯು. ೨೮-೨೬)
ತೇಜೋ ವೀರ್ಯಂ ಬಲಂ ಚೌಜ ಉತ್ಸಾಹಶ್ಚ ಮಹಾಗುಣಾಃ ।
ಪ್ರದರ್ಶನಂ ಚ ಬುದ್ಧಿಶ್ಚ ಸ್ಮೃತಿಶ್ಚ ದ್ವಿಗುಣಂ ತಯೋಃ ॥ (ಯು. ೫೦-೪೦)
ಕುಂಭಕರ್ಣಂ ಹತಂ ದೃಷ್ಟ್ವಾ ರಾಘವೇಣ ಮಹಾತ್ಮನಾ ।
ರಾಕ್ಷಸಾ ರಾಕ್ಷಸೇಂದ್ರಾಯ ರಾವಣಾಯ ನ್ಯವೇದಯನ್ ॥ (ಯು. ೬೮-೧)
ವಿಜ್ಞಾಯ ತು ಮನಸ್ತಸ್ಯ ರಾಘವಸ್ಯ ಮಹಾತ್ಮನಃ ।
ಸಂನಿವೃತ್ಯಾಹವಾತ್ತಸ್ಮಾತ್ಪ್ರವಿವೇಶ ಪುರೀಂ ತದಾ ॥ (ಯು. ೮೧-೧)
ಮರಣಾಂತಾನಿ ವೈರಾಣಿ ನಿವೃತ್ತಂ ನಃ ಪ್ರಯೋಜನಮ್ ।
ಕ್ರಿಯತಾಮಸ್ಯ ಸಂಸ್ಕಾರೋ ಮಮಾಪ್ಯೇಷ ಯಥಾ ತವ ॥ (ಯು. ೧೧೨-೨೬)
ಪ್ರಾಪ್ತರಾಜಸ್ಯ ರಾಮಸ್ಯ ರಾಕ್ಷಸಾನಾಂ ವಧೇ ಕೃತೇ ।
ಆಜಗ್ಮುಃ ಋಷಯಃ ಸರ್ವೇ ರಾಘವಂ ಪ್ರತಿನಂದಿತುಮ್ ॥ (ಉ. ೧-೧)
ತತಃ ಪ್ರಾಚೋದಯತ್ತೂರ್ಣಂ ತಸ್ತಾನ್ ಹಯಾನ್ರುಚಿರಪ್ರಭಾನ್ ।
ಪ್ರಯಯೌ ಭೀಮಸಂನಾದೋ ಯತ್ರ ರಕ್ಷಃಪತಿಃ ಸ್ಥಿತಃ ॥ (ಉ. ೨೨-೭)
ವಿಸೃಜ್ಯ ಚ ಮಹಾಬಾಹುಃ ಋಕ್ಷವಾನರರಾಕ್ಷಸಾನ್ ।
ಭ್ರಾತೃಭ್ಯಃ ಸಹಿತೋ ರಾಮಃ ಪ್ರಮುಮೋದ ಸುಖಂ ಸುಖೀ ॥ (ಉ. ೪೦-೧)
ಬ್ರಾಹ್ಮಣಸ್ಯ ಚ ಧರ್ಮೇಣ ತ್ವಯಾ ವೈ ಜೀವಿತಃ ಸುತಃ ।
ಉಷ್ಯತಾಂ ಚೈವ ರಜನೀಂ ಸಕಾಶೇ ಮಮ ರಾಘವ ॥ (ಉ. ೭೬-೨೭)
ಲಾಭಸ್ತೇಷಾಂ ಜಯಸ್ತೇಷಾಂ ಕುತಸ್ತೇಷಾಂ ಪರಾಭವಃ ।
ಯೇಷಾಮಿಂದೀವರಶ್ಯಾಮೋ ಹೃದಯೇ ಸುಪ್ರತಿಷ್ಠಿತಃ ॥

*(ರಾಮಾಯಣದ ಕೊನೆಯ ಶ್ಲೋಕ)*

ಗಾಯತ್ರ್ಯಕ್ಷರಗರ್ಭಿತವಾದ ಶ್ಲೋಕಗಳಿವು ಎಂದೆ ವಿದ್ಯಾರಣ್ಯರು, ನಡುನಡುವೆ ಗಾಯತ್ರೀಮಂತ್ರದ ಅಕ್ಷರಗಳಿರುವ ಶ್ಲೋಕಗಳನ್ನು ತೋರಿಸಿರುತ್ತಾರೆ. ಆದರೆ ಇವೆಲ್ಲ ಸಾವಿರ ಶ್ಲೋಕದ ಅಂತರದಲ್ಲಿ ಬಂದಿವೆ ಎಂದೂ ತಿಳಿಸಿರುತ್ತಾರೆ. ಮೊದಲ ಶ್ಲೋಕದಲ್ಲಿ ಮೊದಲ ಅಕ್ಷರ ಬಂದಲ್ಲಿ ೨೪,೦೦೦ ಶ್ಲೋಕದ ರಾಮಾಯಣ ಮುಗಿದಲ್ಲಿ ಅಂತಿಮವಾಗಿ ೨೪ನೆಯ ವರ್ಣ (ತ್) ಕೊನೆಯ ಮಂಗಲಶ್ಲೋಕದಲ್ಲಿ ಸಿಗುವುದನ್ನು ತಿಳಿಸಿದ್ದು ಅಪೂರ್ವವೆನಿಸಿದೆ. ರಾಮಾಯಣ ವ್ಯಾಖ್ಯಾನಕಾರರ ಆಶಯದಂತೆ ಕಾಂಡನಲ್ಲಿ ಶ್ಲೋಕಸಂಖ್ಯೆ ಸರಿಯಾಗಿರುವುದರಿಂದ ಪ್ರಚಲಿತ ಗಾಯತ್ರೀ ರಾಮಾಯಣಕ್ಕಿಂತ ಈ ಗಾಯತ್ರೀರಾಮಾಯಣಕ್ಕೆ ಹೆಚ್ಚು ಪ್ರಾಮುಖ್ಯ ಸಿದ್ಧಿಸಿದಂತೆ ಆಗಿದೆ.

*— ಉಡುಪಿ ರಾಮನಾಥ ಆಚಾರ್ಯ*

## ಗಾಯತ್ರಿಯ ಎಣಿಕೆ

ಗಾಯತ್ರೀಮಂತ್ರವು ವೇದದ ಮೂಲವಾಗಿದೆ. ವೇದವನ್ನು ಎಣಿಸುವಾಗ ಬೆರಳು ಗಳ ರೇಖೆಯನ್ನು ಉಪಯೋಗಿಸಲಾಗುತ್ತದೆ. ಆದ್ದರಿಂದ ಗಾಯತ್ರಿಯನ್ನು ಜಪಿಸು ವಾಗಲೂ ಬೆರಳುಗಳಲ್ಲಿರುವ ರೇಖೆಗಳಿಂದ ಜಪಿಸಬೇಕು; ಜಪಮಾಲೆಯಿಂದ ಜಪಿಸ ಬಾರದು–

**ವೇದಮಾತಾತು ಗಾಯತ್ರೀ ವೇದಃ ಪರ್ವಸು ಗೀಯತೇ ।**

**ಪರ್ವಭಿಶ್ಚ ಜಪೇನ್ನಿತ್ಯಂ ನ ಮಾಲಾಭಿಃ ಕಥಂಚನ ॥**

ಇದರಂತೆ ತುಳಸೀಮಾಲೆಯಿಂದಲೇ ಗಾಯತ್ರೀಮಂತ್ರವನ್ನು ಜಪಿಸಬೇಕು ಎಂಬ ವಾಕ್ಯಗಳೂ ಇವೆ–

**ತುಳಸೀಕಾಷ್ಠಮಣಿಭಿಃ ನಿರ್ಮಿತಾಂ ತು ಪ್ರಯತ್ನತಃ ।**

**ಗಾಯತ್ರ್ಯಾದಿಜಪಂ ಕುರ್ಯಾತ್ ಅನ್ಯಥಾ ನಿರಯಂ ವ್ರಜೇತ್ ॥**

ಶ್ರೀನಿವಾಸತೀರ್ಥರು ಇವುಗಳನ್ನು ವಿಮರ್ಶಿಸಿ, ನಾವು ಜಪಿಸುವ ಓಂಕಾರವ್ಯಾಹೃತಿ ಸಹಿತವಾದ ಗಾಯತ್ರಿಯನ್ನು ಅಂಗುಲಿಪರ್ವಗಳಿಂದಲೇ ಜಪಿಸಬೇಕೆಂದೂ, ವ್ಯಾಹೃತಿ ಗಳಿಲ್ಲದ ಬ್ರಹ್ಮಗಾಯತ್ರಿಯನ್ನು ತುಳಸೀಮಣಿಯಲ್ಲಿ ಜಪಿಸಬೇಕೆಂದೂ ಸಮರ್ಥಿಸಿ ವಿರೋಧಪರಿಹಾರ ಮಾಡಿದ್ದಾರೆ. — *ಸಂಗ್ರಹ ಆನಂದತೀರ್ಥ, ನಾಗಸಂಪಿಗೆ*

## ಗಾಯತ್ರೀತಂತ್ರ

ಹತ್ತು ಪಟಲದ ಆರುನೂರು ಶ್ಲೋಕದ ಗಾಯತ್ರೀತಂತ್ರ, ಗಾಯತ್ರೀಮಂತ್ರದ ಕುರಿತು ಕೆಲವು ವಿಚಾರಗಳನ್ನು ನೀಡಿದೆ. ಇದು ಶಾಕ್ತತಂತ್ರ. ಎಲ್ಲರೂ ಶಾಕ್ತರೆಂದೆ ಈ ತಂತ್ರ ಹೇಳಿದೆ–

**ಸರ್ವೇ ಶಾಕ್ತದ್ವಿಜಾಃ ಪ್ರೋಕ್ತಾಃ ನ ಶೈವಾ ನ ಚ ವೈಷ್ಣವಾಃ ।**
**ಆದಿಶಕ್ತಿಮುಪಾಸಂತೇ ಗಾಯತ್ರೀಂ ವೇದಮಾತರಮ್ ॥** *(೯–೬)*

ಇಲ್ಲಿ ಪ್ರತಿಪಾದ್ಯ ದೇವತೆ ಆದಿಶಕ್ತಿ ಎನಿಸಿದ್ದು ಪಾರ್ವತಿ. ನಾರದನಿಗೆ ನಾರಾಯಣ ಹೇಳುವಂತಿರುವ ಈ ತಂತ್ರದಲ್ಲಿ ನಾರಾಯಣನೆ ಗಾಯತ್ರಿಯನ್ನು ನಿತ್ಯ ಆರಾಧಿಸಿ ಆನಂದಪಡೆದ ಎಂದಿದೆ. ಇದು ಮೋಹಕವಾದ ತಂತ್ರ.

**ಆಚಾರಃ ಪ್ರಥಮೋ ಧರ್ಮೋ ಧರ್ಮಸ್ಯ ಪ್ರಭುರೀಶ್ವರೀ ।**
**ಇತ್ಯುಕ್ತಂ ಸರ್ವಶಾಸ್ತ್ರೇಷು...... ।** *(೧೦–೯೭)*

ಎನ್ನುವ ಮೋಹಕ ಮಾತೊಂದು ಕಾಣುತ್ತದೆ. ಧರ್ಮಸ್ಯ ಪ್ರಭುರಚ್ಯುತಃ ಎನ್ನುವುದನ್ನಿಲ್ಲಿ ತಂತ್ರ ತನಗೆ ಬೇಕಾದಂತೆ ಹೇಳಿದೆ. ದೇಹದಲ್ಲಿ ಪೀಠಪೂಜೆ ಅಪೂರ್ವ ವಿಷಯ (೭–೩೧ರಿಂದ) ಎನಿಸಿದೆ. ಇದೂ ಸಮರ್ಪಕವಾಗಿಲ್ಲ. ಇಡಿಯ ತಂತ್ರದಲ್ಲಿ ಗಾಯತ್ರೀಮಂತ್ರಾರ್ಥ ಕಾಣುವುದಿಲ್ಲ ಎನ್ನುವುದು ಆಶ್ಚರ್ಯ.

— *ಉಡುಪಿ ರಾಮನಾಥ ಆಚಾರ್ಯ*

## ಗಾಯತ್ರೀ ಮಾತೆಯನ್ನು ಕಡೆಗಣಿಸಬಾರದು



"ನಮಗೆ ನಮ್ಮ ಈ ಶರೀರ ರೂಪದಲ್ಲಿ ಜನ್ಮಕೊಟ್ಟ ತಾಯಿ ಒಬ್ಬಳು. ಜ್ಞಾನದೀಪವನ್ನು ಬೆಳಗಿಸುವ ತಾಯಿಯೇ ಗಾಯತ್ರೀ ದೇವಿ. ಗಾಯತ್ರಿಯ ಉಪದೇಶವಾದಾಗ ನಾವು ದ್ವಿಜರಾಗುತ್ತೇವೆ. ತಾಯಿಯನ್ನು ಕಡೆಗಣಿಸಿ ಯಾರು ಎಷ್ಟು ಕೆಲಸ ಮಾಡಿದರೂ ಅದಕ್ಕೆ ಬೆಲೆ ಬರಲಾರದು. ಅಂತೆಯೇ ಗಾಯತ್ರಿಯನ್ನು ಜಪಿಸದೆ, ಆ ಮೂಲಕ ಅವಳನ್ನು ಕಡೆಗಣಿಸಿ ನಾವು ಎಷ್ಟು ಸಾಧನೆಗಳನ್ನು ನಡೆಸಿದರೂ ಅವುಗಳಿಗೆ ಬೆಲೆ ದೊರಕದು. ತಾಯಿಯನ್ನು ದೂರಮಾಡಿದ ಕೃತಘ್ನರೆನಿಸಿಯೇವು!"

- ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರು

## ಮಹತ್ವಪೂರ್ಣವಾದ ಪ್ರಾರ್ಥನೆ

ಗಾಯತ್ರಿಯಲ್ಲಿ `ಧಿಯೋ ಯೋ ನಃ ಪ್ರಚೋದಯಾತ್' - ಎಂಬುದಾಗಿ ಸದ್ಬುದ್ಧಿ ಪ್ರೇರಣೆಯನ್ನು ಸೂರ್ಯನಾರಾಯಣನಲ್ಲಿ ಕೇಳಿಕೊಳ್ಳಲಾಗುವುದು. ನಾವು ಅಪೇಕ್ಷಿಸುವ ಪದಾರ್ಥಗಳಲ್ಲೆಲ್ಲ ಪ್ರಮುಖವಾದದ್ದು ಸದ್ಬುದ್ಧಿ. ಯಾಕೆಂದರೆ ಉಳಿದೆಲ್ಲವೂ ಇದ್ದೂ ಸದ್ಬುದ್ಧಿ ಇಲ್ಲ ಎಂದರೆ ಅವೆಲ್ಲ ನಮ್ಮ ಪಾಲಿಗೆ ವ್ಯರ್ಥವೆನಿಸಿಯಾವು. ಅವೆಲ್ಲ ಸಾರ್ಥಕವಾಗಬೇಕಾದರೆ ಅವನ್ನು ಸರಿಯಾಗಿ ಬಳಸಿಕೊಳ್ಳಲು ಬೇಕಾದ ಸದ್ಬುದ್ಧಿ ಬೇಕು. ಆದುದರಿಂದ ಸದ್ಬುದ್ಧಿಗಾಗಿ ನಡೆಸಲಾಗುವ ಪ್ರಾರ್ಥನೆ ತುಂಬ ಮಹತ್ತ್ವದ್ದು. ಅಂತಹ ಪ್ರಾರ್ಥನೆಯನ್ನೊಳಗೊಂಡ ಗಾಯತ್ರೀ ಮಂತ್ರವೂ ತುಂಬ ಮಹತ್ತ್ವಪೂರ್ಣವಾದುದು.



- ಶ್ರೀ ಶ್ರೀ ವಿದ್ಯಾಧೀಶ ತೀರ್ಥರು